ನೆಮ್ಮದಿಯ ನಾಳೆ ನಮ್ಮದು

# ಹೊಸತು

ಮೇ ೨೦೧೫

ಬೆಲೆ : ₹ ೧೫

ISSN 2319-7307




ವಿಶ್ವದ ಶ್ರಮಜೀವಿಗಳಿಗೆ ಹೊಸತು ಬಳಗದ ಶುಭಾಶಯಗಳು

# ನವಕರ್ನಾಟಕ ಪ್ರಕಾಶನ : ಕಥಾ ಸಾಹಿತ್ಯ









































































ಆನ್‌ಲೈನ್ ಮೂಲಕವೂ ಲಭ್ಯ 

www.navakarnataka.com

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹300ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ₹40 ಪ್ರತ್ಯೇಕ.

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಶ್ರೀಹರಿ, ತನು, ವಿ. ಗೋಪಾಲ್, ರವಿ ಹೆಗ್ಗಡಿ, ಕಮಲಂ ಅರಸು,
ಷಣ್ಮುಖ, ಗೀತಾಶಾಸ್ತ್ರಿ, ಗೋಪಿ ಹಿರೇಬೆಟ್ಟು, ವಿ. ಆರ್. ಸಿ. ಶೇಖರ್

**ಮುಖಪುಟ :** ಶ್ರೀಶೈಲೇಶಗೌಡ ಹೊಸಮನಿ, ಹುನಗುಂದ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮುಖ್ಯಸಾಧನೆ ಎಂದರೆ ಗಾರ್ಡನ್ ಸಿಟಿಯನ್ನು ಗಬ್ಬು ಸಿಟಿಯಾಗಿ ಮಾಡಿರುವುದು. ಮಹಾನಗರ ಪಾಲಿಕೆ ಬರಬರುತ್ತ ಮಹಾಭ್ರಷ್ಟ ಪಾಲಿಕೆಯಾಗಿದೆ. ಈಗ ಅದು ಮಹಾಗೊಂದಲದ ಗೂಡಾಗಿದೆ. ಎಲ್ಲೆಲ್ಲೂ ಕಸದ ರಾಶಿ, ಹಳ್ಳಕೊಳ್ಳಗಳಿಂದ ಕೂಡಿದ ರಸ್ತೆಗಳು ಇವು ಕಣ್ಣಿಗೆ ಬಡಿಯುತ್ತವೆ. ಈಗ ಈ ಪಾಲಿಕೆಗೆ ಮೇ ೩೦ರೊಳಗೆ ಚುನಾವಣೆ ನಡೆಸಬೇಕೆಂದು ರಾಜ್ಯ ಹೈಕೋರ್ಟ್ ತಾಕೀತು ಮಾಡಿದೆ. ಈ ಪಾಲಿಕೆಯನ್ನು ತುಂಡರಿಸಿ ಮೂರು ಭಾಗ ಮಾಡಬೇಕೆಂದು ಸಿದ್ದರಾಮಯ್ಯ ಸರಕಾರ ನಿರ್ಧರಿಸಿಬಿಟ್ಟಿದೆ. ಆಡಳಿತ ದೃಷ್ಟಿಯಿಂದ ಅದು ಅಗತ್ಯ ಎನ್ನುವುದೇ ಅದರ ವಾದ. ಅಂದರೆ ಬೆಂಗಳೂರು ಮೂರು ಮೇಯರುಗಳು, ಮೂರು ಕಮೀಷನರುಗಳು, ಅಗತ್ಯವಾದ ಸಿಬ್ಬಂದಿ ವಗೈರೆ ವಗೈರೆ. ಲೆಕ್ಕ ಹಾಕಿದರೆ ಖರ್ಚು ಮೂರುಪಟ್ಟು ಹೆಚ್ಚಾದೀತು. ಒಂದಂತೂ ಖಚಿತ : ಇದರಿಂದ ಸದ್ಯಕ್ಕೆ ಪಾಲಿಕೆ ಚುನಾವಣೆಗಳು ನಡೆಯುವುದಿಲ್ಲ. ಇವೆಲ್ಲ ಎಷ್ಟು ತರಾತುರಿಯಿಂದ ನಡೆಯಿತು ಎಂದರೆ ಮುಖ್ಯಮಂತ್ರಿಗಳು ಸುಗ್ರೀವಾಜ್ಞೆಯ ಸುಲಭ ಮಾರ್ಗ ಹಿಡಿದರು. ಈ ಅಡ್ಡದಾರಿಗೆ ಮೂಗುದಾರ ಹಾಕಿದರು ರಾಜ್ಯಪಾಲವಾಲ. ಆಕ್ಷೇಪಗಳನ್ನೆತ್ತಿ ಸುಗ್ರೀವಾಜ್ಞೆಯನ್ನು ಹಿಂದಕ್ಕೆ ಕಳಿಸಿಕೊಟ್ಟರು ಸರಕಾರಕ್ಕೆ. ಈಗ ತುರ್ತಾಗಿ ವಿಧಾನಸಭೆ ಅಧಿವೇಶನ ಕರೆಯಲು ತೀರ್ಮಾನಿಸಿದ್ದಾರೆ. ಸಿದ್ದರಾಮಯ್ಯನವರು ಬಿಸಿತುಪ್ಪ ನುಂಗಲೂ ಆಗದು ಉಗುಳಲೂ ಆಗದು ಅನ್ನುವ ಸ್ಥಿತಿಯಲ್ಲಿದ್ದಾರೆ. ಹೇಳಿ ಕೇಳಿ ರಾಜ್ಯಪಾಲರು ನಮೋ ಗರಡಿಯಲ್ಲಿ ತಯಾರಾದವರು. ಕಾಂಗ್ರೆಸ್ ಸರ್ಕಾರಕ್ಕೆ ಚಳ್ಳೆಹಣ್ಣು ತಿನ್ನಿಸಲು. ಈಗ ಪಾಲಿಕೆ ಚುನಾವಣೆ ನ್ಯಾಯಾಲಯದ ಮುಂದೆ ಇದೆ. ಚುನಾವಣೆ ನಡೆದರೆ ಯಾವ ಪಕ್ಷ ಅಧಿಕಾರ ಗ್ರಹಣ ಮಾಡುತ್ತದೆ ಎನ್ನುವುದು ಬೇರೇ ವಿಚಾರ. ಭಾಜಪ ಹೇಳುವಂತೆ ಸಿದ್ದರಾಮಯ್ಯನವರಿಗೆ ಸೋಲಿನ ಭಯ ಇದ್ದರೂ ಇರಬಹುದೇನೋ. ಮುಖ್ಯಮಂತ್ರಿಗಳ ಟ್ರ್ಯಾಕ್ ರೆಕಾರ್ಡ್ ಏಕೋ ಉಲ್ಟಾ ಹೊಡೆಯುತ್ತಿದೆ.

ಕಾಂಗ್ರೆಸ್ ಪಕ್ಷದಲ್ಲೆ ಭಿನ್ನಮತ ಹೊಗೆಯಾಡುತ್ತಿದೆ. ಮಂತ್ರಿಮಂಡಲದ ಪುನಾರಚನೆಗೆ ಇನ್ನೂ ಘಳಿಗೆ ಕೂಡಿಬಂದಿಲ್ಲ. ದಲಿತನೊಬ್ಬ ಮುಖ್ಯಮಂತ್ರಿ ಆಗಬೇಕು ಎಂಬ ಒತ್ತಾಯ ಒಂದು ಕಡೆಯಾದರೆ, ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಪರಮೇಶ್ವರಗೆ ಉಪಮುಖ್ಯಮಂತ್ರಿ ಪಟ್ಟ ಕಟ್ಟಬೇಕೆಂದು ಬೇಡಿಕೆ. ಇವೆಲ್ಲ ಸಿದ್ದರಾಮಯ್ಯನವರ ನಿದ್ರೆ ಕೆಡಿಸಿದೆ. ಅದಕ್ಕೇ ಏನೋ ಅವರಿಗೆ ಸದಾ ಮಂಪರು. ಯಾವುದೂ ಸರಿ ಆಗುತ್ತಿಲ್ಲ. ಕಾಂಗ್ರೆಸ್ ಅಧಿಕಾರಕ್ಕೆ ಬಂದಮೇಲೆ ಹಿಂದಿನ ಭಾಜಪ ಸರಕಾರದ ಅವ್ಯವಹಾರ, ಭ್ರಷ್ಟಾಚಾರ, ಕೇಸರೀಕರಣ ಎಲ್ಲವೂ ಸರಿಯಾದೀತೆಂದು ನಿರೀಕ್ಷೆ ಇತ್ತು. ಎರಡು ವರ್ಷ ಕಳೆಯುತ್ತ ಬಂದರೂ ಕಾಂಗ್ರೆಸ್ ಸರ್ಕಾರಕ್ಕೆ ನಿರ್ದಿಷ್ಟ ದಿಶೆಯಲ್ಲಿ ಕಾರ್ಯಪ್ರವೃತ್ತವಾಗುವ ದೆಶೆ ಬರಲಿಲ್ಲ. ಎಲ್ಲವೂ ಅರೆಬರೆಯಾಗಿ ಉಳಿದಿದೆ. ಸರಕಾರ ಮುಟ್ಟಿದ್ದೆಲ್ಲವೂ ವಿವಾದಾಸ್ಪದವೇ ಆಗುತ್ತಿದೆ. ಅದರಲ್ಲೊಂದು ಜಾತಿ ಜನಗಣತಿ. ಇದು ಯಾವ ಪುರುಷಾರ್ಥ ಸಾಧನೆಗೋ ಗೊತ್ತಾಗಿಲ್ಲ. ಸುಮಾರು ಇನ್ನೂರು ಕೋಟಿ ವೆಚ್ಚದ ಬಾಬತ್ತಿನಲ್ಲಿ ಅದು ಪ್ರಾರಂಭವಾಗಿದೆ. ಈ ಪರಿಸ್ಥಿತಿ, ಗೊಂದಲ ಎಲ್ಲ ಯಾವಾಗ ನಿವಾರಣೆಯಾಗುವುದೋ ಆ ಹೈಕಮಾಂಡ್‌ಗೇ ಗೊತ್ತು, ಅದು ಇನ್ನೂ ಜೀವಂತವಾಗಿದ್ದರೆ.

✴ ✴ ✴

ಮೋದಿ ಸರಕಾರ ಶತಾಯಗತಾಯ ರೈತ ವಿರೋಧಿ ಭೂಸ್ವಾಧೀನ ತಿದ್ದುಪಡಿ ಕಾಯಿದೆಯನ್ನು ಜಾರಿಗೆ ತರಲು ನಿರ್ಧರಿಸಿಬಿಟ್ಟಿದೆ. ಅವರ ಪರಿಸ್ಥಿತಿ ಅರ್ಥವಾಗುವಂತಹದ್ದೆ. ತಮ್ಮ ಗೆಲುವಿಗೆ ನೆರವಾದ ಕಾರ್ಪೊರೇಟ್ ಪ್ರಭುಗಳಿಗೆ ಕೃತಜ್ಞತಾಪೂರ್ವಕವಾಗಿ ಪ್ರತ್ಯುಪಕಾರ ಮಾಡಬೇಕಲ್ಲವೆ ?

(೬ನೇ ಪುಟಕ್ಕೆ )

ತಿಂಗಳ ಪತ್ರಿಕೆ



**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೧೦ ಮೇ ೨೦೧೫

■ ಗೌರವ ಸಂಪಾದಕ

ಜಿ. ರಾಮಕೃಷ್ಣ

■ ಸಂಪಾದಕ

ಸಿದ್ದನಗೌಡ ಪಾಟೀಲ

■ ಸಹಸಂಪಾದಕರು

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ ವ್ಯವಸ್ಥಾಪಕ

ಎ. ಆರ್. ಉಡುಪ

■ ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ ಮುದ್ರಣ

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೯೭೪೨೬

■ ಹೊಸತು ಕಚೇರಿಯ ವಿಳಾಸ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಸಂಘರ್ಷಕ್ಕಿದು ಸಕಾಲ

**ಭಾ**ರತದ ಪ್ರಜಾಸತ್ತೆಗೆ, ಸಂವಿಧಾನಕ್ಕೆ ಭಾರತದ ಜನತೆಯಿಂದ ಆಯ್ಕೆಯಾದ ಪ್ರಭುತ್ವದಿಂದಲೇ ಅಂತಿಮ ಮೊಳೆ ಹೊಡೆಯುವ ಕ್ರಿಯೆ ತೀವ್ರವಾಗಿ ನಡೆಯುತ್ತಿದೆ. ಜಾಗತೀಕರಣ ಪ್ರಕ್ರಿಯೆಯನ್ನು ಆರಂಭಿಸಿದ ಕಾಂಗ್ರೆಸ್ ಇಂದು ಜಾಗತೀಕರಣದ ಹಿಂದಿರುವ ಶಕ್ತಿಗಳಿಂದಲೇ ತಿರಸ್ಕರಿಸಲ್ಪಟ್ಟು ಅಸ್ತಿತ್ವಕ್ಕಾಗಿ ಪರದಾಡುತ್ತಿದೆ. ಜಾಗತೀಕರಣದ ಸಂಪೂರ್ಣ ಜಾರಿಯ ಹೊಣೆಯನ್ನು ಇಂದು ಬಿಜೆಪಿ ವಹಿಸಿಕೊಂಡು ಭಾರತದ ಜನತಂತ್ರವನ್ನು ಕಾರ್ಪೋರೇಟ್ ಕಂಪನಿಗಳ ಮಡಿಲಲ್ಲಿ ಹಾಕುತ್ತಿದೆ. ಅದರ ಅಂಗವಾಗಿ ಭಾರತದ ನೆಲವನ್ನು ಭೂಸ್ವಾಧೀನದ ಹೆಸರಿನಲ್ಲಿ ಕಬಳಿಸುತ್ತಿದೆ. ಆ ಮೂಲಕ ಭಾರತದಂಥ ಕೃಷಿ ಪ್ರಧಾನ ದೇಶದ, ಪ್ರಜಾತಂತ್ರದ ತಳಪಾಯವನ್ನೇ ನಾಶಮಾಡಲು ಹೊರಟಿದೆ. ಇಂಥ ಕಬಳಿಕೆಯನ್ನೂ ಅದು 'ಅಭಿವೃದ್ಧಿ' ಎಂದು ಹೇಳುತ್ತಿದೆ. ಜಾಗತೀಕರಣದ ಹುನ್ನಾರಗಳ ವಿರುದ್ಧ ಆರಂಭದಿಂದಲೂ ಎಡಪಕ್ಷಗಳು ಸಂಸತ್ತಿನ ಒಳಗೆ ಮತ್ತು ಹೊರಗೆ ಧ್ವನಿ ಎತ್ತಿವೆ. ಆದರೆ ಅವರ ಕೂಗಿಗೆ ಅಂದು ಬೆಂಬಲ ಸಿಗಲಿಲ್ಲ. ಭಾರತವನ್ನು ಜಾಗತೀಕರಣ ಪ್ರಕ್ರಿಯೆಗೆ ಒಳಪಡಿಸಿದ ಎರಡು ದಶಕಗಳ ನಂತರ ಅದರ ಕರಾಳ ಛಾಯೆಗಳು ಗೋಚರವಾಗುತ್ತಿವೆ. ಜಾಗತೀಕರಣದ ಒಳಸುಳಿಗಳು ಇಂದು ಜನತೆಯ ಬದುಕಿನಲ್ಲಿ ಬಿರುಗಾಳಿಯನ್ನುಂಟು ಮಾಡಿವೆ. ಅದರ ಪರಿಣಾಮವಾಗಿಯೇ ವಿಶ್ವದಾದ್ಯಂತ ಪ್ರತಿಭಟನೆ, ಪ್ರತಿರೋಧಗಳು ವ್ಯಕ್ತವಾಗುತ್ತಿವೆ. ಜಾಗತೀಕರಣ ದೇಶ ವಿದೇಶಗಳ ಬೃಹತ್ ಕಂಪನಿಗಳ ಹಿತಾಸಕ್ತಿಗೆ ರೂಪಗೊಂಡ ಒಂದು ಹುನ್ನಾರ ಎನ್ನುವುದು ಸಾಮಾನ್ಯ ಜನರ ಬದುಕು ಅತಂತ್ರಗೊಂಡ ಈ ದಿನಗಳಲ್ಲಿ ಸ್ಪಷ್ಟವಾಗುತ್ತಿದೆ. ಕೇಂದ್ರದ ಬಿ.ಜೆ.ಪಿ. ಸರಕಾರ ಬಹುಮತದಿಂದ ಆಯ್ಕೆಯಾಗುವ ಮೊದಲು ಕೂಟ ವ್ಯವಸ್ಥೆಯ ರಾಜಕಾರಣ ನಮ್ಮಲ್ಲಿ ಇತ್ತು. ಅದು ಕಾಂಗ್ರೆಸ್ ನಾಯಕತ್ವದ ಯು.ಪಿ.ಎ. ಆಗಿರಲಿ ಅಥವಾ ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಆಗಿರಲಿ ಅವು ಜಾಗತೀಕರಣದ ಪರವಾಗಿದ್ದರೂ ದೇಶದ ಹಿತಾಸಕ್ತಿಯನ್ನು ಬಲಿಕೊಟ್ಟು ಕಾರ್ಪೋರೇಟ್ ಕಂಪನಿಗಳ ಪರವಾಗಿ ನಿಲ್ಲುವುದು ಅಸಾಧ್ಯವಾಗಿತ್ತು. ಆ ಕಾರಣಕ್ಕಾಗಿಯೇ ಕಳೆದ ಲೋಕಸಭಾ ಚುನಾವಣೆಯಲ್ಲಿ ಈ ದೇಶದ ವ್ಯಾಪಾರಿಗರ ಪಕ್ಷವಾದ ಬಿ.ಜೆ.ಪಿ.ಯನ್ನು ಏಕಾಂಗಿಯಾಗಿ ಬಹುಮತದ ಮೂಲಕ ಆಯ್ಕೆ ಮಾಡಿ ತಮ್ಮ ಜಾಗತೀಕರಣ ಪ್ರಕ್ರಿಯೆಯನ್ನು ಪೂರ್ಣಗೊಳಿಸುವ ನೀಲನಕ್ಷೆಯನ್ನು ದೇಶೀ–ವಿದೇಶಿ ಕಾರ್ಪೋರೇಟ್ ಕಂಪನಿಗಳು ಸಿದ್ಧಗೊಳಿಸಿದವು. ಅದಕ್ಕಾಗಿ ಬಿ.ಜೆ.ಪಿ.ಗೆ ಕಾರ್ಪೋರೇಟ್ ಕಂಪನಿಗಳು ನೀಡಿದ ಹಣ ೧೫,೦೦೦ ಕೋಟಿ ರೂಪಾಯಿಗಳು ಎಂಬ ಅಂದಾಜಿದೆ. ಇದನ್ನೇ ಇತ್ತೀಚೆಗೆ ನಡೆದ ಕಾಂಗ್ರೆಸ್‌ನ ಭೂಸ್ವಾಧೀನ ವಿರೋಧಿ ರೈತರ ರ್‍ಯಾಲಿಯಲ್ಲಿ ರಾಹುಲ್‌ಗಾಂಧಿ 'ಮೋದಿ ಕಾರ್ಪೋರೇಟ್ ಕಂಪನಿಗಳ ಋಣ ಸಂದಾಯವನ್ನು ಮಾಡುತ್ತಿದ್ದಾರೆ' ಎಂದು ಹೇಳಿದ್ದಾರೆ. ಆದರೆ ಯಾರ್‍ಯಾರಿಂದ ಎಷ್ಟೆಷ್ಟು ಪಡೆದಿದ್ದಾರೆ ಎಂದು ಹೇಳಿಲ್ಲ. ಕಾರಣ ಅವರ ಪಕ್ಷಕ್ಕೂ ಕೆಲವು ಕಾರ್ಪೋರೇಟ್ ಕಂಪನಿಗಳು ದುಡ್ಡುಕೊಟ್ಟಿವೆ. ಅದೇನೇ ಇದ್ದರೂ ಲೋಕಸಭೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಭಂಟನಾಗಿ ಮೋದಿ ರೂಪಗೊಂಡದ್ದು ಆಕಸ್ಮಿಕವಲ್ಲ. ಕೋಮುವಾದವನ್ನೂ, ಜಾಗತೀಕರಣವನ್ನೂ ಹದವಾಗಿ ಬೆರೆಸಿ 'ಅಭಿವೃದ್ಧಿ' ಎಂಬ ವಿಷಪೂರಿತ ಪರಿಕಲ್ಪನೆಯನ್ನು ಸಿದ್ಧಪಡಿಸಿ, ಆ ವಿಷವನ್ನು ಮೊದಲು ಗುಜರಾತಿನಲ್ಲಿ ಪ್ರಯೋಗಿಸಿ ನಂತರ ದೇಶಕ್ಕೇ ಉಣಬಡಿಸಿ ಬಹುಮತ ಪಡೆದವನು ಈ ವ್ಯಾಪಾರಿಗರ ಪಕ್ಷದ ಮಹಾನಾಯಕ ಮೋದಿ. ಇದಕ್ಕೇ ಅಮೇರಿಕದ ಜೇಮ್ಸ್ ಬಾಂಡ್ ಮಾದರಿಯಲ್ಲಿ ಮೋದಿಯನ್ನು ದೇಶದ ಮುಂದೆ ಮತ್ತು ವಿಶ್ವದ ಮುಂದೆ ಪ್ರೊಜೆಕ್ಟ್ ಮಾಡಿದ್ದು ಮತ್ತದೇ ಕಾರ್ಪೋರೇಟ್ ಮೀಡಿಯಾ. ಇಷ್ಟೆಲ್ಲ ಪೂರ್ವ ತಯಾರಿ ತಂತ್ರ ಕುತಂತ್ರಗಳಿಂದ ಭಾರತದ ಸಂಸತ್‌ನಲ್ಲಿ ಪ್ರಶ್ನಾತೀತ ಬಲಪಡೆದ ಮೋದಿ, ಸಂಸತ್ತನ್ನೂ ವಿಶ್ವಾಸಕ್ಕೆ ಪಡೆಯದೇ ಸುಗ್ರೀವಾಜ್ಞೆಗಳ ಮೂಲಕ ಕಾರ್ಪೋರೇಟ್ ಕಂಪನಿಗಳ ಸೇವೆಗೈಯ್ಯುತ್ತಿದ್ದಾರೆ. ಜನತೆಗೆ ಅರ್ಥವಾಗುತ್ತಿದೆ. ಕಾರ್ಮಿಕವಿರೋಧಿ ಕಾಯ್ದೆಗಳು, ಭೂಸ್ವಾಧೀನ, ಸಾರ್ವಜನಿಕ ಕೈಗಾರಿಕೆ, ಸೇವಾವಲಯಗಳ ಖಾಸಗೀಕರಣ, ಇವೆಲ್ಲ ಜನತೆಯ ಬದುಕಿನಲ್ಲಿ ನೇರವಾದ ಪರಿಣಾಮವನ್ನುಂಟುಮಾಡುತ್ತಿವೆ. ಶಿಕ್ಷಣ, ಆರೋಗ್ಯಕ್ಷೇತ್ರಗಳಂಥ ಮೂಲಭೂತ ಕ್ಷೇತ್ರಗಳಲ್ಲೂ ಖಾಸಗೀಕರಣ ವ್ಯಾಪಕವಾಗಿ ನಡೆಯುತ್ತಿದೆ. ಮೋದಿಯವರು ಹೇಳುವ 'ಅಭಿವೃದ್ಧಿ' ಖಂಡಿತ ನಡೆದಿದೆ. ಅಂದರೆ ಕಾರ್ಪೋರೇಟ್ ಕಂಪನಿಗಳ ಆದಾಯ ಅಕ್ಷರಶಃ ದ್ವಿಗುಣಗೊಂಡಿದೆ. ಅದೇ ಸಂದರ್ಭದಲ್ಲಿ ಉದ್ಯೋಗ ಶೇ.೫೦ರಷ್ಟು ಕಡಿಮೆಯಾಗಿದೆ. ಇದು ಉದ್ಯೋಗರಹಿತ ಅಭಿವೃದ್ಧಿ. ಇದು ಮುಂದಿನ ದಿನಗಳಲ್ಲಿ ದೇಶದ ಜನತೆಯ ಬದುಕಿನ ಮೇಲೆ ಇನ್ನೂ ಭೀಕರವಾದ ಪರಿಣಾಮಗಳನ್ನುಂಟುಮಾಡುತ್ತದೆ.

ದೇಶದ ಇಂಥ ವಾತಾವರಣದಲ್ಲಿ ಈಗಾಗಲೇ ಜನತೆ ಅತೃಪ್ತಿ, ಅಸಮಾಧಾನಗಳನ್ನು ತಮ್ಮ ತಮ್ಮ ಮಿತಿಯಲ್ಲಿಯೇ ವ್ಯಕ್ತಪಡಿಸುತ್ತಿದ್ದಾರೆ. ಈ ದೇಶದ ಹಲವಾರು ಪ್ರಾದೇಶಿಕ ಪಕ್ಷಗಳು ತಮ್ಮ ಅಸ್ತಿತ್ವಕ್ಕಾಗಿ ಪರದಾಡುತ್ತಿವೆ. ಇಂಥ ಸಂದರ್ಭದಲ್ಲಿ ಜಾಗತೀಕರಣದ ವಿರುದ್ಧ ಮೊದಲಿಂದಲೂ ಧ್ವನಿ ಎತ್ತಿದ

ಎಡಪಕ್ಷಗಳು ತಮ್ಮ ಜವಾಬ್ದಾರಿಯನ್ನು ಅರ್ಥಮಾಡಿಕೊಳ್ಳಬೇಕಿದೆ. ಕೇಂದ್ರದಲ್ಲಿ ಎಡಪಕ್ಷಗಳು ಪ್ರಸ್ತುತ ಸಂದರ್ಭವನ್ನು ಎದುರಿಸಲು ಒಟ್ಟಾಗಿ ಹೋರಾಡುವ ತೀರ್ಮಾನ ಕೈಗೊಂಡಿವೆ. ಆದರೆ ಅದು ತಳಹಂತದವರೆಗೂ ಜಾರಿಯಾಗುವ ಲಕ್ಷಣಗಳು ಕಾಣುತ್ತಿಲ್ಲ. ನಮ್ಮ ರಾಜ್ಯದಲ್ಲಿ ಈ ಬಾರಿಯ ಕಾರ್ಮಿಕ ದಿನಾಚರಣೆಯನ್ನಾಚರಿಸುವ ವಿಧಾನವನ್ನು ಗಮನಿಸಿದರೇ ತಿಳಿಯುತ್ತದೆ. "ಎಲ್ಲ ದೇಶಗಳ ಶ್ರಮಜೀವಿಗಳೇ ಒಂದಾಗಿರಿ" ಎನ್ನುವುದು ಮಾರ್ಕ್ಸ್ – ಎಂಗೆಲ್ಸ್‌ರು ಸಿದ್ಧಪಡಿಸಿದ ಕಮ್ಯೂನಿಸ್ಟ್ ಪಾರ್ಟಿ ಪ್ರಣಾಳಿಕೆಯ ಕೊನೆಯ ಸಾಲು. ಆದರೆ ಇಂದು ಆ ಘೋಷಣೆಯನ್ನು ಹೇಳಲಾದರೂ ಎಲ್ಲ ಕಾರ್ಮಿಕ ಸಂಘಟನೆಗಳು ಒಂದು ವೇದಿಕೆಯಲ್ಲಿ ಸೇರಬೇಕಿತ್ತು. ಅದಾಗುತ್ತಿಲ್ಲ. ನೂರಾರು ವೇದಿಕೆಯಲ್ಲಿ ನಿಂತು ಒಂದೇ ಘೋಷಣೆಯನ್ನು ಹೇಳುತ್ತಿದ್ದಾರೆ. ಪ್ರತಿಯಾಗಿ ದೇಶಿ–ವಿದೇಶಿ ಕಾರ್ಪೊರೇಟ್ ಕಂಪನಿಗಳು ಒಂದಾಗಿ ಮೋದಿಯ ಮೂಲಕ 'ಮೇಕ್ ಇನ್ ಇಂಡಿಯಾ' ಘೋಷಣೆ ಹೇಳಿಸುತ್ತಿದ್ದಾರೆ. ಶೋಷಕರು ಒಂದಾಗಿದ್ದಾರೆ. ಶೋಷಿತರು ಛಿದ್ರವಾಗಿದ್ದಾರೆ.

ಶ್ರಮಜೀವಿಗಳು ಎಂದರೆ ಕೇವಲ ಕೈಗಾರಿಕಾ ಕಾರ್ಮಿಕರಲ್ಲ. ಅಸಂಘಟಿತ ಕಾರ್ಮಿಕರು, ರೈತರು, ದಲಿತರು, ನೌಕರರು, ಕೃಷಿಕೂಲಿಕಾರರು ಎಲ್ಲರೂ ಶ್ರಮಜೀವಿಗಳೇ. ಇವರೆಲ್ಲ ಇಂದು ಜಾಗತೀಕರಣದ ದಾಳಿಗೆ ಬಲಿಯಾಗುತ್ತಿದ್ದಾರೆ. ಇವರೆಲ್ಲರನ್ನು ಒಂದೇ ವೇದಿಕೆ, ಒಂದೇ ಘೋಷಣೆಯಡಿ ಕರೆತರುವ ಜವಾಬ್ದಾರಿ ಎಡಪಕ್ಷಗಳದ್ದು. ಭಾರತದ ಇಂದಿನ ಪರಿಸ್ಥಿತಿಯಲ್ಲಿ 'ಮೇ ದಿನಾಚರಣೆ'ಯನ್ನು ಅಂಥ ಐಕ್ಯವೇದಿಕೆ ನಿರ್ಮಿಸುವ ಮೂಲಕ ಆಚರಿಸಬೇಕಿತ್ತು. ಆದರೆ ಐಕ್ಯ ಹೋರಾಟದ ಘೋಷಣೆ ಕೊಡುವ ಎಡಪಕ್ಷಗಳ ಸ್ಥಿತಿ 'ಸಯಾಮಿ' ಮಗುವಿನಂತಾಗಿದೆ. ತಲೆಗಳು ಒಂದಾಗಿದ್ದರೂ ಎರಡು ದೇಹವಾಗಿ ನಡೆಯುವ ಸ್ಥಿತಿ ತಲುಪಿದೆ. ಎಡಪಕ್ಷಗಳ ಸಾಮೂಹಿಕ ಸಂಘಟನೆಗಳು, ಅದರಲ್ಲೂ ಕಾರ್ಮಿಕ ಸಂಘಟನೆಗಳು ಒಂದಾಗಿ ಒಂದೇ ವೇದಿಕೆಯಿಂದ 'ವಿಶ್ವದ ಶ್ರಮಜೀವಿಗಳೇ ಒಂದಾಗಿರಿ' ಎಂದು ಕೂಗಿದರೆ ಅದಕ್ಕೊಂದು ಅರ್ಥವಿದೆ. ಸುಮ್ಮನೆ 'ಕ್ರೋನಿ ಕ್ಯಾಪಿಟಲಿಸಂ' ಎಂದು ಜನರಿಗೆ ಅರ್ಥವಾಗದ ಭಾಷೆಯಲ್ಲಿ ಮೋದಿಯ ಆರ್ಥಿಕ ಧೋರಣೆಗಳನ್ನು ಟೀಕಿಸಿದರೆ ಸಂದರ್ಭಕ್ಕೆ ಸರಿಯಾದ ಪ್ರತಿರೋಧವಾಗುವುದಿಲ್ಲ.

ಮೋದಿ ಸರಕಾರ ಕಾರ್ಪೊರೇಟ್ ಕಂಪನಿಗಳ ಪರವಾಗಿ ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದು ಭೂಸ್ವಾಧೀನ ಕಾನೂನು ತಿದ್ದುಪಡಿಗೆ ಸುಗ್ರೀವಾಜ್ಞೆ ತಂದು ತಿಂಗಳುಗಳೇ ಕಳೆದರೂ ಈ ದೇಶದಲ್ಲಿ ಅದರ ವಿರುದ್ಧ ಒಂದು ಸಂಚಲನವನ್ನೂ ಮೂಡಿಸಲಾಗದ ಸ್ಥಿತಿಗೆ ಜನಪರ ಹೋರಾಟಗಳು ತಲುಪಿವೆ ಅಂದರೆ ಏನರ್ಥ. ಇದರರ್ಥ ಎಲ್ಲರೂ ಸುಮ್ಮನೇ ಕುಳಿತಿಲ್ಲವಾದರೂ ಒಂದು ರ‍್ಯಾಲಿ, ಖಂಡನೆ ಮಂಡನೆಗೆ ಸೀಮಿತವಾಗಿದ್ದಾರೆ. ಜನಪರವಾದ ನೂರಾರು ಸಂಘಟನೆಗಳ ನೂರಾರು ನಾಯಕರು ತಮ್ಮ ಹಾಗೂ ತಮ್ಮ ಸಂಘಟನೆಯ ಅಸ್ಮಿತೆ ಕುರಿತು ಚಿಂತಿಸುತ್ತಾರೆಯೇ ಹೊರತು, ತಾವು ಪ್ರತಿನಿಧಿಸುವ ಜನ ಸಮೂಹದ ಹಿತಾಸಕ್ತಿಗಾಗಿ ಒಂದಾಗುತ್ತಿಲ್ಲ. ಪರಿಣಾಮವಾಗಿ ದೇಶ ವಿರೋಧಿ ಕಾನೂನುಗಳಿಗೆ ಕೈಯೆತ್ತಿ ಬಂದ ಸಂಸದರು ಸನ್ಮಾನ ಸಮಾರಂಭಗಳಲ್ಲಿ ಭಾಗವಹಿಸುತ್ತ ನೆಮ್ಮದಿಯಾಗಿದ್ದಾರೆ.

ಸಂಘರ್ಷಕ್ಕಿದು ಸಕಾಲ. ಕೋಟ್ಯಾಂತರ ಜನತೆ ತಲ್ಲಣದಲ್ಲಿದ್ದಾರೆ. ಅವರಿಗೆ ನೋವುಗಳ ಅರಿವಾಗುತ್ತಿದೆ, ನಿವಾರಣೆಯ ಮಾರ್ಗ ತಿಳಿಯುತ್ತಿಲ್ಲ. ಇಂಥ ಸಂದರ್ಭದಲ್ಲಿ 'ಮೇ ದಿನಾಚರಣೆ' ನಡೆಯುತ್ತಿದೆ. ಇಷ್ಟು ದಿನ ಒಂದಾಗಿಲ್ಲ ನಿಜ. ಈ ಮೇ ದಿನಾಚರಣೆಯಲ್ಲಾದರೂ ನೋವಿನಿಂದ ಬಳಲುತ್ತಿರುವ ಜನತೆಯ ಹಿತಾಸಕ್ತಿಗೆ ಪೂರಕವಾಗಿ ಒಂದು ವೇದಿಕೆಯನ್ನು ರೂಪಿಸುವ ಆಶಯ, ಘೋಷಣೆ ಮೂಡಿಬರಲಿ. ಕೋಮುವಾದ, ಜಾಗತೀಕರಣದ ರೂವಾರಿಯಾದ ಈ 'ಕೋಜಾ' ಸರಕಾರದ ವಿರುದ್ಧ ಜನಪರ ಧ್ವನಿ ಮೊಳಗಲಿ. ದೇಶದ ಬಹುಸಂಖ್ಯಾತರಾದ ರೈತರು – ಕಾರ್ಮಿಕರು ಒಂದಾಗಿ ಉಳಿದ ಜನ ಸಮೂಹವನ್ನು ಜೊತೆಗಿರಿಸಿಕೊಂಡು ಜನವಿರೋಧಿ ನೀತಿಗಳ ವಿರುದ್ಧ ಹೋರಾಡಲು ದೇಶದ ಸಾರ್ವಭೌಮತೆ, ಸ್ವಾತಂತ್ರ್ಯವನ್ನು ಕಾಪಾಡುವ ಪರ್ಯಾಯ ಶಕ್ತಿಯಾಗಲು ಈ 'ಮೇ ದಿನಾಚರಣೆ' ವೇದಿಕೆಯಾಗಲಿ. ಶ್ರಮಜೀವಿ ವರ್ಗಕ್ಕೆ ತ್ಯಾಗ, ಬಲಿದಾನ ಮೂಲಭೂತ ಹಕ್ಕಿನ ಸಂಕೇತವಾದ ಮೇ ದಿನದ ಶುಭಾಶಯಗಳು.

ಸಿದ್ಧನಗೌಡ ಪಾಟೀಲ

## ಅಧಿಕಾರಿಗಳ ಅಕ್ರಮಕ್ಕೆ ಸಾರ್ವಜನಿಕರು ಬಲಿಪಶು

ಒತ್ತುವರಿ ಭೂಮಿಯನ್ನು ವಶಪಡಿಸಿಕೊಳ್ಳುವ ಕಾರ್ಯಾಚರಣೆಯಲ್ಲಿ ರಾಜಧಾನಿ ಬೆಂಗಳೂರಿನ ಸುತ್ತಮುತ್ತ ನೂರಾರು ಮನೆಗಳು ನೆಲಸಮಗೊಂಡಿವೆ. ಬೆಂಗಳೂರು ಜಿಲ್ಲಾಡಳಿತ ಮತ್ತು ಬೃಹತ್ ಬೆಂಗಳೂರು ನಗರ ಪಾಲಿಕೆ ಅಧಿಕಾರಿಗಳು ನಡೆಸಿದ ಈ ಮಹಾಯಜ್ಞಕ್ಕೆ ಬಲಿಪಶುಗಳಾದವರು ಅಮಾಯಕ ಜನ. ನ್ಯಾಯಾಲಯದ ತೀರ್ಪನ್ನು ಜಾರಿಗೆ ತರಲು ಈ ಕ್ರಮ ಕೈಗೊಳ್ಳಲಾಗಿದೆ ಎಂಬುದು ಅಧಿಕಾರಿಗಳ ಸಮರ್ಥನೆ. ಇದಕ್ಕೆ ನಿಜವಾಗಿ ಹೊಣೆ ಯಾರು ಎನ್ನುವುದೇ ಪ್ರಶ್ನೆ. ಬೆಂಗಳೂರಿನ ಸುತ್ತಮುತ್ತ ಇದ್ದ ಕೆರೆಗಳು ಅದೃಶ್ಯವಾಗಿ ಅಲ್ಲೆಲ್ಲ ಕಟ್ಟಡಗಳು ತಲೆ ಎತ್ತಿವೆ. ಈ ಒತ್ತುವರಿ ನಡೆದಿರುವುದು ಸರಕಾರಿ ಅಧಿಕಾರಿಗಳ, ಎಮ್ಮೆಲ್ಯೇಗಳ, ಕಾರ್ಪೊರೇಟರುಗಳ ಚಿತಾವಣೆಯಿಂದ. ಕಳೆದ ಮೂರು ನಾಲ್ಕು




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ದಶಕಗಳಿಂದ ಕಣ್ಣುಮುಚ್ಚಿ ಕೂತಿದ್ದ ಸರಕಾರ ಈಗ ಎಚ್ಚೆತ್ತುಕೊಂಡಿರುವುದು ಆಶ್ಚರ್ಯಕರ. ನ್ಯಾಯಾಲಯದ ಆಜ್ಞೆ ಕಡೆಗೆ ಬೊಟ್ಟು ಮಾಡುವ ಸರಕಾರ, ಒತ್ತುವರಿ ಕುರಿತು ನ್ಯಾಯಾಲಯಕ್ಕೆ ಮಾಹಿತಿ ಒದಗಿಸಿದ್ದೂ ಸರಕಾರವೆ. ಈಗ ತೊಂದರೆಗೀಡಾಗಿರುವವರು, ಎಲ್ಲವನ್ನು ಕಳೆದುಕೊಂಡು ದಿವಾಳಿಯಾಗಿ ಕಣ್ಣೀರಿಡುತ್ತಿರುವವರು ಆ ಮನೆಗಳಲ್ಲಿ ವಾಸಿಸುತ್ತಿದ್ದ ಜನ. ಕೋಟಿಗಟ್ಟಳೆ ಹಣ ಮಾಡಿಕೊಂಡು ನಾಪತ್ತೆಯಾಗಿರುವ ರಿಯಲ್ ಎಸ್ಟೇಟ್ ಧಣಿಗಳು, ಸರಕಾರದಲ್ಲಿ ಯಾರ್ಯಾರಿಗೆ ತಿನ್ನಿಸಬೇಕೋ ತಿನ್ನಿಸಿ, ಮೋಸಮಾಡಿ ಜನಗಳಿಗೆ ಪಂಗನಾಮ ಹಾಕಿದ್ದಾರೆ. ಅನೇಕರು ತಮ್ಮ ಜೀವಿತದಲ್ಲಿ ಗಳಿಸಿದ್ದರಲ್ಲಿ ಉಳಿತಾಯವನ್ನು ಸಂಚಯಿಸಿ ಮನೆಕಟ್ಟಿಕೊಂಡು ವಾಸಿಸುತ್ತಿದ್ದವರು ಈಗ ಕಣ್ಣೀರಿಡುತ್ತಿದ್ದಾರೆ.

ಬೆಂಗಳೂರಿನಲ್ಲಿ ರಿಯಲ್ ಎಸ್ಟೇಟ್ ದಂಧೆ ಪ್ರಾರಂಭವಾಗಿ ಐವತ್ತು ವರ್ಷಗಳೇ ಕಳೆದಿವೆ. ನಗರದಲ್ಲಿ ಎಲ್ಲೆಂದರಲ್ಲಿ ಲೇಔಟ್‌ಗಳನ್ನು ನಿರ್ಮಿಸಿ ನಿವೇಶನಗಳನ್ನು ಹಂಚಿದ್ದಾರೆ, ಬಹುಮಹಡಿ ಕಟ್ಟಡಗಳನ್ನು ಕಟ್ಟಿ ಫ್ಲ್ಯಾಟ್‌ಗಳನ್ನು ಮಾರಾಟ ಮಾಡಿದ್ದಾರೆ. ಈ ಎಲ್ಲ ವ್ಯವಹಾರಗಳೂ ಕಾನೂನುಬದ್ಧವಾಗಿಯೇ ನಡೆದಿವೆ. ನಿವೇಶನ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ರಿಜಿಸ್ಟರ್ ಆಗಿದೆ, ಕಟ್ಟಡ ನಿರ್ಮಾಣಕ್ಕೆ ಪಾಲಿಕೆ ಪ್ಲಾನನ್ನು ಅಂಗೀಕರಿಸಿ ಅಗತ್ಯವಾದ ಪರವಾನಗಿ ನೀಡಿದೆ, ಕಾಯಿದೆ ರೀತ್ಯ ಖಾತೆ ನೀಡಿದೆ ಮತ್ತು ತೆರಿಗೆ ವಸೂಲಿ ಮಾಡಿಕೊಂಡಿದೆ. ಇದು ಒಂದೆರಡು ವರ್ಷಗಳಿಂದ ನಡೆದಿಲ್ಲ, ಹೆಚ್ಚು ಕಡಿಮೆ ಮೂವತ್ತು ವರ್ಷಗಳಿಂದ ನಡೆದುಕೊಂಡು ಬಂದಿದೆ. ದೊರೆತಿರುವ ಮಾಹಿತಿ ಪ್ರಕಾರ ಬೆಂಗಳೂರು ದಕ್ಷಿಣ ಭಾಗದಲ್ಲಿರುವ ಪುಟ್ಟೇನಹಳ್ಳಿ, ಇಟ್ಟುಮಡು, ಸಾರಕ್ಕಿ ಕೆರೆಗಳ ಒತ್ತುವರಿ ೧೯೮೦ರಿಂದಲೇ ನಡೆದುಕೊಂಡು ಬಂದಿದೆ. ಸಾರಕ್ಕಿ ಒಂದರಲ್ಲೇ ೧೮ ವ್ಯಾಪಾರೀ ಸಂಕೀರ್ಣಗಳು, ೭ ಅಪಾರ್ಟ್‌ಮೆಂಟ್ ಕಟ್ಟಡಗಳು, ಒಂದು ಇವುಗಳಲ್ಲಿ ಒಂದೊಂದರಲ್ಲೂ ಸುಮಾರು ೨೦ ಫ್ಲ್ಯಾಟ್‌ಗಳಿದ್ದುವು, ಒಂದು ಸರಕಾರಿ ಶಾಲೆ, ಒಂದು ಡೆಂಟಲ್ ಕಾಲೇಜು, ಒಂದು ಆಸ್ಪತ್ರೆ, ಅದಕ್ಕೆ ತಕ್ಕಹಾಗೆ ಹಲವು ದೇವಾಲಯಗಳು, ಚರ್ಚುಗಳೂ ಇದ್ದುವು. ಈಗ ಅವೆಲ್ಲ ನೆಲಸಮ. ಇಂಥದೇ ಪರಿಸ್ಥಿತಿ ಇತರ ಕಡೆಗಳಲ್ಲೂ, ಇಷ್ಟು ದೊಡ್ಡ ಪ್ರಮಾಣದ ಕಾರ್ಯ ನಡೆದಿರುವುದು ಅಧಿಕಾರಿಗಳ ಶಾಮೀಲಿನಿಂದಲೇ. ಈ ಬಗ್ಗೆ ಸರಕಾರ ನ್ಯಾಯಾಂಗ ತನಿಖೆ ನಡೆಸಿ ಸ್ಥಿರಾಸ್ತಿ ಕಳೆದುಕೊಂಡಿರುವ ಜನಸಾಮಾನ್ಯರಿಗೆ ಸೂಕ್ತವಾದ ಪರಿಹಾರಕ್ಕೆ ಏರ್ಪಾಟು ಮಾಡುವುದು ಅಗತ್ಯ. ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಕ್ರಮಕೈಗೊಳ್ಳುವುದು ಸರಕಾರದ ಕರ್ತವ್ಯ. ಏಕೆಂದರೆ ಈ ಒತ್ತುವರಿಗೆ ಸರಕಾರ ಮತ್ತು ನಗರಪಾಲಿಕೆಯೇ ಹೊಣೆ. ಮುಲಾಜಿಲ್ಲದೆ ವಾಸಸ್ಥಳಗಳನ್ನು ನೆಲಸಮ ಮಾಡಿದ ಅಧಿಕಾರಿಗಳು ದೇವಾಲಯಗಳ ಕಟ್ಟಡಗಳನ್ನು ಉಳಿಸಿ ಮುಜರಾಯಿ ಇಲಾಖೆಯ ಸುಪರ್ದಿಗೆ ನೀಡಿದ್ದಾರೆ. ಪಾಪಭೀತಿ ಇರಬೇಕು! ಅಕ್ರಮ ಎಸಗುವ ಈ ಅಧಿಕಾರಿಗಳಿಗೆ ಲಂಚ ತಿನ್ನುವಾಗ ಪಾಪಪ್ರಜ್ಞೆ ಇರುವುದಿಲ್ಲ.

ಮೊದಲಿನಿಂದಲೂ ಇಲ್ಲಿನ ನಿವಾಸಿಗಳು ಕ್ರಮಬದ್ಧವಾದ ಎಲ್ಲ ಕಾಗದ ಪತ್ರಗಳನ್ನೂ ಹೊಂದಿದ್ದಾರೆ. ಖಾತೆ, ತೆರಿಗೆ ರಸೀತಿ, ವಿದ್ಯುತ್ ಸರಬರಾಜು, ಕಾವೇರಿ ನೀರು ಎಲ್ಲ ಇದೆ ಅವರ ಬಳಿ. ಇವೆಲ್ಲ ಹೇಗಾಯಿತು? ಕಾರ್ಪೊರೇಶನ್ ಕಮೀಶನರ್ ಎಂ. ಲಕ್ಷ್ಮೀನಾರಾಯಣ ಅವರು "ಖಾತೆ ಇದ್ದ ಮಾತ್ರಕ್ಕೆ ಅದು ನಿವೇಶನದ ಒಡೆತನ ಖಾತ್ರಿಗೊಳಿಸುವುದಿಲ್ಲ" ಎಂದು ಹೇಳಿದ್ದಾರೆ. ಇದು ನಿಜವಾಗಿಯೂ ಬೇಜವಾಬ್ದಾರಿ ಹೇಳಿಕೆ. ಖಾತೆ ಕೊಡುವುದು ನಗರಪಾಲಿಕೆ. ಸಂಬಂಧಪಟ್ಟ ರೆವಿನ್ಯೂ ಅಧಿಕಾರಿಯ ವರದಿ ಆಧಾರದ ಮೇಲೆಯೇ ಈ ದಸ್ತಾವೇಜು ನಾಗರಿಕನ ಕೈ ಸೇರುವುದು. ಖಾತೆ ಇಲ್ಲದೆ ತೆರಿಗೆ ಕಟ್ಟುವುದಕ್ಕೆ ಅವಕಾಶವಿಲ್ಲ, ಹಾಗಿರುವಾಗ ಕಮೀಶನರ್ ಸಾಹೇಬರ ಹೇಳಿಕೆಗೆ ಏನಾದರೂ ಅರ್ಥವಿದೆಯೆ. ಹಾಗಾದರೆ ಸ್ಥಿರಾಸ್ತಿಗೆ ಖಾತರಿ ಏನು? ಸರಕಾರ ಕೆಲವು ವರ್ಷಗಳಿಂದ ಅಕ್ರಮ ಕಟ್ಟಡಗಳನ್ನು ಸಕ್ರಮಗೊಳಿಸುವ ಯೋಜನೆಯೊಂದನ್ನು ರೂಪಿಸುತ್ತಿದೆ. ಆ ಕುರಿತು ಈಚೆಗೆ ಒಂದು ನೋಟಿಫಿಕೇಶನ್ ಕೂಡ ಬಂದಿತ್ತು. ಆದರೆ ಮುಂದೆ ಏನಾಯಿತೋ ಅದು ಮತ್ತೆ ನೆನೆಗುದಿಗೆ ಬಿದ್ದಿದೆ. ಅಕ್ರಮವಾಗಿ ರೆವಿನ್ಯೂ ಭೂಮಿಯಲ್ಲಿ ನೂರಾರು ಸಾವಿರ ಮನೆಗಳು, ಅಪಾರ್ಟ್‌ಮೆಂಟ್ ಕಟ್ಟಡಗಳು ನಿರ್ಮಾಣ ಗೊಂಡಿವೆ. ಎಲ್ಲ ಅವ್ಯವಹಾರಗಳೂ ಕಾನೂನಿನಡಿಯಲ್ಲಿ ಸರಕಾರದ ಕಣ್ಣೆದುರಿನಲ್ಲೇ ನಡೆದಿದೆ. ಹಾಗಾಗಿ ನಿಜವಾದ ಅಪರಾಧಿಗಳು ಸರಕಾರ ಮತ್ತು ಅಧಿಕಾರಿಗಳು. ಸರಕಾರ ಕೂಡಲೇ ಇಂಥ ಅಧಿಕಾರಿಗಳ ಮೇಲೆ ಕ್ರಮ ಕೈಗೊಂಡು ಕ್ರಿಮಿನಲ್ ಮೊಕದ್ದಮೆ ದಾಖಲಿಸಿ ಅವರನ್ನೂ ಶಿಕ್ಷೆಗೆ ಒಳಪಡಿಸಬೇಕು. ಒತ್ತುವರಿ ಪ್ರದೇಶದ ಬಗ್ಗೆ ನ್ಯಾಯಾಂಗ ತನಿಖೆ ನಡೆಸಿ ಸಂಬಂಧಪಟ್ಟ ರಿಯಲ್ ಎಸ್ಟೇಟ್ ಧಣಿಗಳನ್ನು ಬಂಧಿಸಬೇಕು. ವಸತಿ ಕಳೆದುಕೊಂಡು ಕಂಗಾಲಾಗಿರುವ ಜನರಿಗೆ ಪರಿಹಾರ ನೀಡಬೇಕು. ಇದಕ್ಕಾಗಿ ನಾಗರಿಕರಿಂದ ಹೋರಾಟ ನಡೆಯಬೇಕು. ಮುಂದೆ ಇಂಥ ಪ್ರಕರಣಗಳು ನಡೆಯದಂತೆ ನೋಡಿಕೊಳ್ಳುವುದಕ್ಕೆ ಇಷ್ಟು ಅಗತ್ಯ ಆಗಬೇಕಾದ್ದು.

---

*(ಈ ತಿಂಗಳು : ೩ನೇ ಪುಟದಿಂದ)*

ಅದಕ್ಕೆ ದೇಶದ ರೈತಾಪಿ ಜನರನ್ನು ಬಲಿಕೊಡಲು ಅವರು ಸಿದ್ಧರಾಗಿದ್ದಾರೆ. ಎರಡನೇ ಸಲ ಸುಗ್ರೀವಾಜ್ಞೆ ಹೊರಡಿಸಿದ್ದಾರೆ. ಮುಂದಿನ ಆರು ತಿಂಗಳು ಕ್ಷೇಮ. ಅಷ್ಟರಲ್ಲಿ ಹೇಗಾದರೂ ಮಾಡಿ ಮಸೂದೆಯನ್ನು ರಾಜ್ಯಸಭೆಯಲ್ಲಿ ಅಂಗೀಕಾರವಾಗುವಂತೆ ಮಾಡ ಬಹುದು ಎನ್ನುವುದು ಲೆಕ್ಕಾಚಾರ. ಅವರಿಗೆ ರೈತರ ಆತ್ಮಹತ್ಯೆಯಾಗಲಿ ಬಡತನವಾಗಲಿ ತಟ್ಟುವುದಿಲ್ಲ. ನರ್ಮದ ಯೋಜನೆಯನ್ನು ಕಾರ್ಯಗತ ಮಾಡಿದ್ದರ ಅನುಭವ ಪ್ರಧಾನಿಗೆ ಇದೆ ಎಂಬುದು ಗೊತ್ತು. ಗುಜರಾತ್ ರೈತರು ಈಗಲೂ ಅದನ್ನು ಅನುಭವಿಸುತ್ತಿದ್ದಾರೆ. ಏಪ್ರಿಲ್ ತಿಂಗಳ ಮನದ ಮಾತಿನಲ್ಲಿ ಪ್ರಧಾನಿ ರೈತರ ಕುರಿತು ಕಣ್ಣೀರು ಸುರಿಸಿ ಆಯಿತು. ಇನ್ನೇನು ಬೇಕು. ಅದಕ್ಕೇ ಅವರು ಸುಗ್ರೀವಾಜ್ಞೆ ಹೊರಡಿಸಿದ್ದು. ರೈತರು ಭಾಜಪ ಸರಕಾರದ ರೈತ ವಿರೋಧಿ ನೀತಿ ವಿರುದ್ಧ ಪ್ರಬಲವಾದ ಹೋರಾಟ ಹಮ್ಮಿಕೊಂಡಿದ್ದಾರೆ. ಆದರೆ ಅದು ನಿರಂತರವಾದ ಹೋರಾಟವಾಗಿರಬೇಕು. ಅದಕ್ಕಾಗಿ ಎಲ್ಲ ಪ್ರತಿಪಕ್ಷಗಳೂ ಒಂದಾಗಿ ಮುಂದೆ ನಿಲ್ಲಬೇಕು. ಅದೇನೇ ಇರಲಿ ಕೆಲವು ಅಂಕಿಅಂಶ ಗಳನ್ನು ಪರಿಶೀಲಿಸೋಣ. ಮನಮೋಹನ ಸಿಂಗ್ ಅಧಿಕಾರದಲ್ಲಿದ್ದಾಗ ಇಂಥದೇ ರೈತರ ಹೊಟ್ಟೆಯ ಮೇಲೆ ಹೊಡೆಯುವ ಯೋಜನೆ ಜಾರಿಯಲ್ಲಿತ್ತು.

ಅದೇ ಸ್ಪೆಷಲ್ ಎಕನಾಮಿಕ್ ಜೋನ್ (ಎಸ್‌ಇಜೆಡ್). ಅದರ ಪ್ರಕಾರ ದೇಶದಲ್ಲಿ ಕೈಗಾರಿಕೆಗಳ ಸ್ಥಾಪನೆಗಾಗಿ ೩೭೭ ಪ್ರದೇಶಗಳನ್ನು ಗುರುತಿಸಲಾಯಿತು. ಆದರೆ ಕಾರ್ಯಗತ ವಾಗಿರುವುದು ೧೯೬ ಮಾತ್ರ. ಇದರಲ್ಲಿ ಕೂಡ ಸರಕಾರ ವಶಪಡಿಸಿಕೊಂಡಿರುವ ಜಮೀನಿನಲ್ಲಿ ಶೇ. ೬೩ರಷ್ಟು ಭೂಮಿ ಬರಡಾಗಿ ಹಾಗೇ ಬಿದ್ದಿದೆ, ಉಪಯೋಗವಾಗದೆ. ಮುಂದೆ ಒಂದು ದಿನ ಅದರ ಒಡೆಯರು ರಿಯಲ್ ಎಸ್ಟೇಟ್ ಆಗಿ ಜೇಬು ತುಂಬಿಸಿಕೊಂಡಾರು. ಕೃಷಿ ಮಂತ್ರಾಲಯದ ಪ್ರಕಟಣೆಯೊಂದರ ಪ್ರಕಾರ ೨೦೦೭–೧೧ರ ಅವಧಿಯಲ್ಲಿ ದೇಶದಲ್ಲಿ ಕೃಷಿ ಯೋಗ್ಯ ಜಮೀನು ೭,೯೦,೦೦೦ ಹೆಕ್ಟೇರುಗಳಷ್ಟು ಕಡಿಮೆಯಾಗಿದೆ. ಇದರಲ್ಲಿ ಹೆಚ್ಚಿನ ಪಾಲು ರಿಯಲ್ ಎಸ್ಟೇಟ್ ಆಗಿ ಪರಿವರ್ತನೆಗೊಂಡಿದೆ. ಜಮೀನು ಕಳೆದುಕೊಂಡ ರೈತರು ಈಗ ಬರಿಗೈಯಾಗಿ ಅದೂ ಇದೂ ಕೆಲಸ ಮಾಡಿಕೊಂಡು ಅರೆಹೊಟ್ಟೆ ಜೀವನ ನಡೆಸು ತ್ತಿದ್ದಾರೆ. ಇನ್ನು ಮೋದಿ ಸರಕಾರ ಭೂಸ್ವಾಧೀನ ಕಾಯಿದೆಯಿಂದ ಇನ್ನೆಷ್ಟು ರೈತರು ಬೀದಿ ಪಾಲಾಗುತ್ತಾರೋ ಏನೋ. ರೈತರ ಆತ್ಮಹತ್ಯೆ ಮಹಾರಾಷ್ಟ್ರ ಮಾದರಿಯಲ್ಲಿ ದೇಶದ ಎಲ್ಲೆಡೆ ಪಸರಿಸುವುದೇನೋ. ಜನರ ಬಗ್ಗೆ ಕಾಳಜಿ ಇರುವ ಪ್ರಧಾನಿ ಮೋದಿ ಮಾತ್ರ ದಿನಕ್ಕೊಂದು ಹೊಸ ಉಡುಪು ಧರಿಸಿ ವಿದೇಶೀ ಪ್ರವಾಸ ಕೈಗೊಳ್ಳುತ್ತಿದ್ದಾರೆ ಬಂಡವಾಳ ಹೊಂದಿಸಲು. ತಮ್ಮ 'ಭಾರತದಲ್ಲೇ ತಯಾರಿಸಿ' ಕನಸನ್ನು ನನಸಾಗಿಸಲು. ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಮಾತ್ರ ಭಗವದ್ಗೀತೆ ಪಾರಾಯಣ

ಮಾಡಿಕೊಂಡು ದೆಹಲಿಯಲ್ಲೇ ಇದ್ದಾರೆ.

* * *

ಮೋದಿ ಸರಕಾರ ಅಸ್ತಿತ್ವಕ್ಕೆ ಬಂದು ಇನ್ನೇನು ಒಂದು ವರ್ಷವಾಗುತ್ತ ಬಂತು. ದೆಹಲಿಗಿಂತ ಹೊರದೇಶಗಳಲ್ಲಿ ಇರುವುದೇ ಅವರಿಗೆ ಕ್ಷೇಮ ಎನಿಸಿರಬೇಕು ಪ್ರಧಾನಿಗೆ. ಏಕೆಂದರೆ ತಮ್ಮ ಬಾಡಿ ಲ್ಯಾಂಗ್ವೇಜ್‌ನಿಂದ ಪ್ರಭಾವಬೀರುವ ಮೋದಿ ಹೆಚ್ಚು ದಿನಗಳನ್ನು ಬೇರೆ ದೇಶಗಳಲ್ಲಿ ಕಳೆದಿದ್ದಾರೆ. ಏಕೋ ಏನೋ ಅವರಿಗೆ ಕಾಶ್ಮೀರ, ಮಹಾರಾಷ್ಟ್ರಗಳಲ್ಲಿ ಹೊಂದಾಣಿಕೆ ಸರಿ ಹೋಗುತ್ತಿಲ್ಲ. ತಮ್ಮ ಕ್ಯಾಬಿನೆಟ್ ಸಚಿವರನ್ನು ಹದ್ದುಬಸ್ತಿನಲ್ಲಿರಿಸಿಕೊಂಡಿರುವ ಮೋದಿ–ಷಾ ಜೋಡಿಗೆ ಮಹಾರಾಷ್ಟ್ರದಲ್ಲಿ ಶಿವಸೇನೆ ಮತ್ತು ಕಾಶ್ಮೀರ ಕಣಿವೆಯಲ್ಲಿ ಪಿಡಿಪಿ ಪೀಡೆಯಾಗಿ ಪರಿಣಮಿಸಿವೆ. ಹೊಂದಾಣಿಕೆ ಮಾಡಿಕೊಂಡು ಎರಡೂ ಕಡೆ ಅಧಿಕಾರ ಹಿಡಿದಿದ್ದರೂ ಭಾಜಪಕ್ಕೆ ಇಲ್ಲದ ಇರುಸುಮುರುಸು. ಪರಿಸ್ಥಿತಿ 'ಎತ್ತು ಏರಿಗೆ ಎಳೆಯಿತು. ಎಮ್ಮೆ ರೊಚ್ಚಿಗೆ ಎಳೆಯಿತು' ಎಂಬಂತಾಗಿದೆ ಪರಿಸ್ಥಿತಿ. ಕಾಶ್ಮೀರದಲ್ಲಿ ಮುಫ್ತಿ ಮಹಮದ್‌ರ ಪಿಡಿಪಿ ಪ್ರತ್ಯೇಕತಾವಾದಿಗಳಿಗೆ ಕುಮ್ಮಕ್ಕು ನೀಡುತ್ತಿದ್ದರೆ, ಮಹಾರಾಷ್ಟ್ರದಲ್ಲಿ ಶಿವಸೇನೆ ಉಗ್ರ ಹಿಂದುತ್ವವಾದ ಪ್ರದರ್ಶಿಸಹೊರಟಿದೆ. ಎರಡೂ ರಾಜ್ಯ ಸರ್ಕಾರಗಳೂ ಮೋದಿಗೆ ಕಸಿವಿಸಿ ಉಂಟುಮಾಡುತ್ತಿವೆ. ಇತ್ತೀಚೆಗೆ ಶಿವಸೇನೆಯ ಮುಖಪತ್ರ ಪ್ರಕಟಿಸಿದ ಸಂಪಾದಕೀಯ ಲೇಖನ ಮುಸ್ಲಿಮರಿಗೆ ಮತದಾನದ ಹಕ್ಕನ್ನು ರದ್ದುಗೊಳಿಸಬೇಕು ಎಂದು ಸೂಚನೆ ನೀಡಿದೆ. ಈ ಹೇಳಿಕೆ ಈಗಾಗಲೇ ಸಾಕಷ್ಟು ವಿವಾದವನ್ನು ಸೃಷ್ಟಿಸಿದೆ. ಇದರಲ್ಲಿ ಹೊಸದೇನೂ ಇಲ್ಲ. ಏಕೆಂದರೆ ಹಿಂದುತ್ವವಾದಿ ಅಜೆಂಡಾದ ಮುಖ್ಯಭಾಗವೇ ಅದು. ಶಿವಸೇನೆ ಹುಟ್ಟಿದ್ದೇ ದ್ವೇಷ ರಾಜಕಾರಣದಿಂದ. ಪ್ರಾರಂಭದಲ್ಲಿ ಶಿವಸೇನೆಯ ನಾಯಕ ಠಾಕ್ರೆ ಹುಚ್ಚಾಟಕ್ಕೆ ಬಲಿಯಾದವರು ಕನ್ನಡದವರೇ. ಏಕೆಂದರೆ ಅವರ ದಾಳಿಗೆ ಬಲಿಯಾದ್ದು ಉಡುಪಿ ಹೋಟೆಲ್‌ಗಳು ಮತ್ತು ಮುಸ್ಲಿಮರಿಗೆ ಸೇರಿದ್ದ ಇರಾನಿ ಹೋಟೆಲ್‌ಗಳು. ಹಾಗಾಗಿ ಶಿವಸೇನೆಯಿಂದ ಶ್ರೀರಾಮಸೇನೆಯಂತೆಯೇ ನೈತಿಕ ಪೊಲೀಸುಗಿರಿ ಮತ್ತು ದುಂಡಾವೃತ್ತಿಯನ್ನು ಬಿಟ್ಟು ಬೇರೇನನ್ನು ನಿರೀಕ್ಷಿಸಲು ಸಾಧ್ಯ?

ಮೋದಿ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಹಿಂದುತ್ವವಾದಿಗಳು ತುಂಬ ಕ್ರಿಯಾಶಾಲಿಗಳಾಗಿ ಬಿಟ್ಟಿದ್ದಾರೆ. ಆರೆಸ್ಸೆಸ್ ಸಂಚಾಲಕ ಮೋಹನ್ ಭಾಗವತ್ ಪ್ರತಿಸಲ ಸಾರ್ವಜನಿಕ ಸಭೆಯಲ್ಲಿ ಮಾತನಾಡಿದಾಗಲೂ ಏನಾದರೊಂದು ವಿವಾದ ಸೃಷ್ಟಿಸುತ್ತಾರೆ. ಸಂಘಪರಿವಾರದ ಇತರ ಉಗ್ರಗಾಮಿಗಳು ಅವರನ್ನೇ ಹಿಂಬಾಲಿಸಿ ಪ್ರಚೋದನಕಾರಿ ಹೇಳಿಕೆಗಳನ್ನು ನೀಡಿ ಅಲ್ಪಸಂಖ್ಯಾತರನ್ನು ಮೂದಲಿಸುತ್ತಾರೆ. ಹಿಂದೂ ರಾಷ್ಟ್ರದಲ್ಲಿ ಇತರರು ಅಂದರೆ ಹಿಂದೂಗಳಲ್ಲದವರು ಎರಡನೆಯ ದರ್ಜೆಯ ನಾಗರಿಕರು, ಹೇಳಿದಂತೆ ಕೇಳಿಕೊಂಡು ತೆಪ್ಪಗಿರಬೇಕು. ಈ ರೀತಿ ದಬಾದುಬಿ ನಡೆಸಿ, ಚರ್ಚ್‌ಗಳ ಮೇಲೆ, ದರ್ಗಾಗಳ ಮೇಲೆ ಅವಕಾಶ ಸಿಕ್ಕಾಗ ದಾಳಿ ನಡೆಸುತ್ತಿವೆ. ಒಂದು ಬಗೆಯ ಭಯದ ವಾತಾವರಣ ಸೃಷ್ಟಿಸುತ್ತಿವೆ. ಇದಕ್ಕೆ ಈಚೆಗೆ ಸೇರಿಕೊಂಡಿರುವವರು ಸುಬ್ರಮಣಿಯನ್ ಸ್ವಾಮಿ. ಇವರು ಹೊಸಬರೇನಲ್ಲ. ಮೊದಲಿನಿಂದಲೂ ಆರೆಸ್ಸೆಸ್‌ನಲ್ಲೇ ಇದ್ದವರು. ಇದುವರೆಗೆ ಅವರು ಕಾಂಗ್ರೆಸ್ ಸರಕಾರದ ಭ್ರಷ್ಟಾಚಾರ, ಅವ್ಯವಹಾರಗಳನ್ನು ಹೊರಗೆಡಹುವುದರಲ್ಲೇ ನಿರತರಾಗಿದ್ದರು. ಈಗ ಈತ ಉಗ್ರ ಹಿಂದುತ್ವವಾದಿ ಅಜೆಂಡಾವನ್ನು ಕಾರ್ಯಗತ ಮಾಡಹೊರಟಿದ್ದಾರೆ. ಇತ್ತೀಚೆಗೆ ನೀಡಿದ ಅವರ ಹೇಳಿಕೆಯೊಂದು ಭಾರತದಲ್ಲಿರುವ ಮುಸಲ್ಮಾನರೆಲ್ಲ ಹಿಂದೂಗಳೇ ಆಗಿದ್ದಾರೆ. ಪಾಕಿಸ್ತಾನ ಸ್ಥಾಪನೆಯಾದಾಗ ನಿಜವಾದ ಮುಸಲ್ಮಾನರೆಲ್ಲ ಅಲ್ಲಿಗೆ ಹೋಗಿ ನೆಲೆಸಿದ್ದಾರೆ. ಉಳಿದವರೆಲ್ಲ ಮುಸಲ್ಮಾನರಾಗಿ ಪರಿವರ್ತನೆಗೊಂಡ ಹಿಂದೂಗಳು. ಆದ್ದರಿಂದ ಅವರೆಲ್ಲ ಹಿಂದುಗಳೇ. ಇಂಥ ವಿತಂಡವಾದಗಳಿಗೆ ಕಮ್ಮಿ ಏನಿಲ್ಲ. ಅದಕ್ಕಿಂತ ಮಿಗಿಲಾಗಿ ಅವರು ಪಕ್ಷದ ಅಧ್ಯಕ್ಷ ಅಮಿತ್ ಷಾಗೆ ಪತ್ರ ಬರೆದು ಮೋದಿ ಸರ್ಕಾರ ಚುನಾವಣೆಯ ಕಾಲದಲ್ಲಿ ಪ್ರಣಾಳಿಕೆಯಲ್ಲಿ ಪ್ರಚುರಪಡಿಸಿದ್ದ ಹಿಂದುತ್ವವಾದಿ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕೆಂದು ಒತ್ತಾಯಪಡಿಸಿದ್ದಾರೆ. ಇನ್ನು ಯಾರ್‍ಯಾರು ಏನು ಹೇಳುತ್ತಾರೋ ನೋಡೋಣ.

* * *

ಯಥಾಪ್ರಕಾರ ವಿದೇಶಾಂಗ ಸಚಿವೆ ಶ್ರೀಮತಿ. ಸುಷ್ಮಾ ಸ್ವರಾಜ್ ಅವರನ್ನು ದೆಹಲಿಯಲ್ಲೇ ಕೂರಿಸಿ ಪ್ರಧಾನಿ ವಿದೇಶಗಳಿಗೆ ತೆರಳಿದ್ದರು. ಫ್ರಾನ್ಸ್‌ನಲ್ಲಿ ಲಡಕಾಸಿ ಯುದ್ಧ ವಿಮಾನಗಳನ್ನು ಕೊಳ್ಳಲು ಒಪ್ಪಂದ ಮಾಡಿಕೊಂಡರೆಂದು ದೆಹಲಿಯ ಮತ್ತು ಬೆಂಗಳೂರಿನ ಕೆಲವು ವಲಯಗಳಲ್ಲಿ ತೆರೆಯ ಹಿಂದೆ ಗುಸುಗುಸು ನಡೆದಿದೆ. ಫ್ರಾನ್ಸಿನ ವಾಯುದಳಕ್ಕೆ ನೀಡಲು ತಯಾರಾಗುತ್ತಿದ್ದ ಯುದ್ಧ ವಿಮಾನಗಳನ್ನು ಭಾರತಕ್ಕೆ ಕಳಿಸುವುದಾಗಿ ಡಸೋಲ್ ಕಂಪನಿ ಹೇಳಿದೆ. ಎಂಥದೇ ಕೊಡಲಿ, ಆ ಕಂಪನಿಗೆ ಮರುಹುಟ್ಟು ದೊರೆತಂತಾಗಿದೆ. ಅದಕ್ಕಿಂತಲೂ ಹೆಚ್ಚು ಸಹಾಯ ಫ್ರಾನ್ಸಿನ ಅರೇವಾ ಕಂಪನಿಗೆ. ಅದರ ಜೀವ ಕುಟುಕುತ್ತಿದೆ. ಮಹಾರಾಷ್ಟ್ರದ ಜೈತಾಪುರದಲ್ಲಿ ವಿದ್ಯುದುತ್ಪಾದನೆಗೆ ಅಣುಸ್ಥಾವರ ಯೋಜನೆಯೊಂದಿದೆ. ಸಹಸ್ರಾರು ಮೀನುಗಾರರು ಮತ್ತು ರೈತರು ಆಘಾತಕ್ಕೊಳಗಾಗಲಿದ್ದಾರೆ. ಆ ಸ್ಥಾವರದ ಕಾಂಟ್ರಾಕ್ಟ್ ಅರೇವಾಕ್ಕೆ. ಜೈತಾಪುರದಲ್ಲಿ ಜೀವಗಳು ಹಾಳಾಗುತ್ತವೆ, ಆದರೆ ಅರೇವಾಕ್ಕೆ ಮರುಜೀವ ದೊರೆಯಲಿದೆ. ಇದೆಲ್ಲಾ ಮೋದಿಯವರ 'ಅಭಿವೃದ್ಧಿ ಮೀಮಾಂಸೆಯ' ಫಲಗಳು. ಪ್ಯಾರಿಸ್‌ನಿಂದ ಬರ್ಲಿನ್‌ಗೆ ಹೋದ ಪ್ರಧಾನಿ ಹಿಟ್ಲರನ 'ಕಾನ್‌ಸೆಂಟ್ರೇಶನ್ ಕ್ಯಾಂಪ್'ಗಳಿಗೆ ಹೋಗಲು ಸಾಧ್ಯವಾಗಲಿಲ್ಲ; ಅವರಲ್ಲಿದ್ದುದು ಎರಡೇ ದಿನ. "ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಸದಸ್ಯತ್ವದ ಭಿಕ್ಷೆ ನಮಗೆ ಬೇಡ, ಅದು ನಮ್ಮ ಹಕ್ಕು" ಎಂದು ಅಲ್ಲಿ ಘೋಷಿಸಿದ್ದು ದಾಖಲೆಗಳಲ್ಲಿ ಸದಾ ಉಳಿಯುವಂತಹ ಮಾತು. ಆದರೆ ಭದ್ರತಾ ಮಂಡಲಿಯಲ್ಲಿ ಯಾವಾಗಲೂ ಅಮೆರಿಕಾ ಪರವಾಗಿ, ಅಮೆರಿಕಾ ಜೊತೆ, ಮತ ಚಲಾಯಿಸಲು ನಮಗೇಕೆ ಆ ಸದಸ್ಯತ್ವ ಎಂಬ ಬೇಜಾರು ಇದ್ದೇ ಇದೆ. ಬರ್ಲಿನ್ನಿನಿಂದ ಓಟ್ಟವಕ್ಕೆ ಹಾರಿದ ಮೋದಿ ಅವರು ಟೋರಂಟೋಗೆ ಭೇಟಿ ನೀಡಿ ಕೆನಡಾದ ಪ್ರಧಾನಿಯ ಜೊತೆ ಪತ್ರಿಕಾ ವರದಿಗಾರರೊಂದಿಗೆ ಮಾತನಾಡಿದರು. ಅವರ ಹೇಳಿಕೆಯ ಅದ್ಭುತ ತುಣುಕೊಂದು ಹೀಗಿದೆ: "ನಮ್ಮ ದೇಶವು ಹಿಂದಿನ ಸರ್ಕಾರದಡಿ ಭ್ರಷ್ಟಾಚಾರಕ್ಕೆ ಹೆಸರಾಗಿತ್ತು. ಒಂದಾದ ಮೇಲೊಂದು 'ಸ್ಕ್ಯಾಮ್'ಗಳು. ಅದನ್ನು ನಾವೀಗ ಬದಲಿಸಲಿದ್ದೇವೆ. ನಮ್ಮ ದೇಶವು ಕೌಶಲಗಳಿಗೆ ಹೆಸರುವಾಸಿಯಾಗಲಿದೆ." ಇದಲ್ಲದೆ ಬೇರೆ ಹತ್ತು ವಿಷಯಗಳನ್ನು ಹೇಳಿದ್ದರಾದರೂ ಗಮನ ಸೆಳೆದದ್ದು ಹೇಳಿಕೆಯ ಈ ಭಾಗ. ಟೋರಂಟೋದಲ್ಲಿ ವರದಿಗಾರರಿಗೆ ಇದನ್ನು ಕೆನಡಾ ಪ್ರಧಾನಿಯ ಸಮ್ಮುಖದಲ್ಲಿ ಹೇಳಬೇಕಾಗಿತ್ತೆ? ಭ್ರಷ್ಟಾಚಾರವು ಕಾಂಗ್ರೆಸ್‌ನ ಏಕಸ್ವಾಮ್ಯದಲ್ಲಿಲ್ಲ, ಮೋದಿಯವರ ಪಕ್ಷದಲ್ಲಿ ಭ್ರಷ್ಟ ಸಂಸ್ಕೃತಿಗೆ ಕೊರತೆ ಇಲ್ಲ. ವಿದೇಶಿ ನೆಲದಲ್ಲಿ ನಮ್ಮ ಕೊಳಕು ಬಟ್ಟೆ ಕಸಕಬೇಕಿತ್ತೆ? ಸಾಮಾನ್ಯವಾಗಿ ಇಂಥದನ್ನು ಮಾಡಬಾರದೆಂಬ ಅಲಿಖಿತ ನಿಯಮವಿದೆ, ಆದರೆ ನಮ್ಮ ಪ್ರಧಾನಿ ನಿಯಮಗಳ ಬಂಧನದಲ್ಲಿಲ್ಲವೆಂಬುದು ಗುಜರಾತಿನ ಮುಖ್ಯಮಂತ್ರಿ ಆಗಿದ್ದಾಗ ಸಾಬೀತುಗೊಳಿಸಿದ್ದಾರೆ. ಆ ಹೇಳಿಕೆಯು ಪ್ರಧಾನಿಯನ್ನು "ಹೀರೋ" ಮಾಡುತ್ತದೆ, ಆದರೆ ಕೆಲವು ಅನುಯಾಯಿಗಳ ನಡುವೆ ಮಾತ್ರ. ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದ್ದ ಪಕ್ಷ ಮೋದಿ ಅವರದು. ಅದರ ತರುವಾಯದಲ್ಲಿ ಭಾರತದ ಒಬ್ಬ ಸಚಿವ ವಿದೇಶದಲ್ಲಿ ಅದನ್ನು ಪ್ರಸ್ತಾಪಿಸಿದಾಗ ಮಾನ್ಯ ಶ್ರೀ. ವಾಜಪೇಯಿಯವರು ಹೇಳಿದ್ದರು, "ಆ ಬಗ್ಗೆ ವಿದೇಶದಲ್ಲೇಕೆ ಡಂಗೂರ ಹೊಡೆಯುತ್ತೀರಿ, ಅದು ಅನೈತಿಕ" ಎಂದು. ಆ ಮಾತನ್ನು ಹೇಳಲು ಶ್ರೀ. ವಾಜಪೇಯಿ ಅವರಿಗೆ ಈಗ ಸಾಧ್ಯವಾಗುವಂತಿಲ್ಲ. ಕೆಸರಿನ ಎರಚಾಟವೇ ನಮ್ಮ ದೇಶದ ರಾಜಕೀಯ ಸೂತ್ರವೆಂಬಂತಾಗಿರುವುದು ಒಂದು ಅನಿಷ್ಟ ಸ್ಥಿತಿ. ತಮ್ಮ ಆಳ್ವಿಕೆಯನ್ನು ಕನಿಷ್ಠ ೧೫ ವರ್ಷಗಳವರೆಗೆ ವಿಸ್ತರಿಸಿಕೊಳ್ಳುವ ಯೋಜನೆಗೆ ಹೀಗೆಲ್ಲಾ ನಿಯಮೋಲ್ಲಂಘನೆ ಮಾಡುವುದು ಶ್ರೀ. ಮೋದಿಯವರಿಗೆ ಅಗತ್ಯವಿರಬೇಕು. ಗುಜರಾತಿನ ಹತ್ಯಾಕಾಂಡದ ಬಗೆಗೆ ಭಾರತದ ಪ್ರತಿನಿಧಿಗಳು ವಿದೇಶಗಳಲ್ಲಿ ಎಂದೂ ಕೊಂಕು ನುಡಿಯಲಿಲ್ಲವೆಂಬುದು ಬಹುಶಃ ನಮ್ಮ ಪ್ರಧಾನಿಯವರಿಗೆ ಜ್ಞಾಪಕ ಬರುವುದಿಲ್ಲ.

* * *

ಜಮ್ಮು–ಕಾಶ್ಮೀರದಲ್ಲಿ ಭಾರತೀಯ ಜನತಾ ಪಕ್ಷದ ಪಾಲುಗಾರಿಕೆಯ ಆಡಳಿತವಿರುವಾಗಲೇ ಶ್ರೀನಗರದ ಒಂದು ಸಭೆಯಲ್ಲಿ ಪ್ರತ್ಯೇಕತಾವಾದಿಗಳು

ಪಾಕಿಸ್ತಾನದ ಬಾವುಟ ಹಾರಿಸಿರುವುದು ನಮ್ಮ ಕಾಲದ ಇತಿಹಾಸದ ಒಂದು ವ್ಯಂಗ್ಯ. ಆ ಪಕ್ಷ ಇರುವಾಗ ಇನ್ನೂ ಹೆಚ್ಚಿನ ಜಿದ್ದಿನಿಂದ ಇಂಥ ದನ್ನೆಲ್ಲಾ ಮಾಡಬೇಕೆಂಬುದು ಪ್ರತ್ಯೇಕತಾವಾದಿಗಳ ಹುನ್ನಾರ. ಗಿಲಾನಿಯನ್ನು ಕೇಳಿದರೆ 'ನಾನು ಬಾವುಟ ಹಾರಿಸಲಿಲ್ಲ' ಎಂದು ನುಣುಚಿ ಕೊಳ್ಳಬಹುದು. "ಹಾರಿಸಿದವರನ್ನು ಹಿಡಿಯಲು ಪೊಲೀಸರಿಗೆ ಸಾಧ್ಯವಾಗಿಲ್ಲ, ಆ ಜನಜಂಗುಳಿಯಲ್ಲಿ ಯಾವನೋ ಹಾರಿಸಿರಬಹುದು, ಅವನನ್ನು ಹಿಡಿಯಲಾಗಲಿಲ್ಲ" ಎಂದು ಸರ್ಕಾರವು ಕೇಂದ್ರಕ್ಕೆ ವರದಿ ಕಳಿಸಿದರೆ ಮುಗಿಯಿತು! ಅಂತಹ ವರದಿಯನ್ನು ಕಳಿಸಲಾಗದಂತೆ ಶ್ರೀ. ರಾಜನಾಥ ಸಿಂಗ್ ಅವರು ತಮ್ಮ ಪಕ್ಷದ ಜಮ್ಮು-ಕಾಶ್ಮೀರದ ಮಂತ್ರಿಗಳಿಗೆ ಆದೇಶ ನೀಡಬೇಕು. ಮುರಳಿ ಮನೋಹರ ಜೋಶಿ ಹಿಂದೊಮ್ಮೆ ಭಾರತದ ಬಾವುಟವನ್ನು ಶ್ರೀನಗರದಲ್ಲಿ ಹಾರಿಸಲು ಭಾರತೀಯ ಸೈನ್ಯವು ಸಕಲ ಸಹಾಯ ನೀಡಿತ್ತು. ಪಾಕಿಸ್ತಾನದ ಬಾವುಟವನ್ನು ಹಾರಿಸದಿರು ವಂತೆಯೂ ಆ ಸೈನ್ಯವೇ ಸಹಾಯ ಮಾಡಬೇಕು, ಆದರೆ ಅದು ಈವರೆಗೆ ಸಾಧ್ಯವಾಗಿಲ್ಲ. ಬದಲಿಗೆ ಸೈನ್ಯದ ವರ್ಚಸ್ಸು ಕಳೆಗುಂದುವಂತೆ ಕೆಲವು ಭೀಕರ ಘಟನೆಗಳಿಗೆ ಸೈನ್ಯವು ಕಾರಣವಾಗಿದೆ ಎಂಬ ಆಪಾದನೆ ಕೇಳಿಬಂದಿದೆ. ಕಾಶ್ಮೀರದ ಜನರ ಮನಸ್ಸನ್ನು ಗೆಲ್ಲಲಾಗದಂತಹ ಪರಿಸ್ಥಿತಿ ಉಂಟು ಮಾಡಿಕೊಂಡಿದ್ದೇವೆ, ಆದ್ದರಿಂದ ಯಾವ ಕ್ರಮಗಳು ಅದನ್ನು ಬದಲಿಸುತ್ತವೆಂಬುದರ ಬಗ್ಗೆ ಹೆಚ್ಚು ನಿಷ್ಕಲ್ಮಷ ಚಿಂತನೆ ಅಗತ್ಯವಾಗಿದೆ. ಇಡೀ ದೇಶವು ಇದನ್ನು ತನ್ನ ಜವಾಬ್ದಾರಿ ಎಂದು ಭಾವಿಸಿ ಕಾರ್ಯಪ್ರವೃತ್ತವಾಗಬೇಕಿದೆ. ಏಕೆಂದರೆ, ಕಾಶ್ಮೀರದ ಜನರ ಮನಸ್ಸು ಏನು ಭಾವಿಸಿಕೊಳ್ಳುತ್ತದೋ ಅದನ್ನು ಪ್ರಾಬಲ್ಯದಿಂದ ಮೆಟ್ಟಿನಿಲ್ಲಲಾಗುವುದಿಲ್ಲ.

* * *

ಭೂಸ್ವಾಧೀನ ಕಾಯಿದೆಯು ದೇಶದಲ್ಲಿ ಪ್ರಚಂಡ ಅಲೆಗಳನ್ನೆಬ್ಬಿಸಿದೆ. ಇತ್ತೀಚೆಗೆ ವರದಿಯಾದ ಒಂದು ಸಂಗತಿಯ ಪ್ರಕಾರ ಕೇಂದ್ರ ಸರ್ಕಾರವು ೧೮ ಔದ್ಯಮಿಕ ಕಾರಿಡಾರ್‌ಗಳನ್ನು ನಿರ್ಮಿಸುವ ಯೋಜನೆ ಹೊಂದಿದೆ. ಅದಕ್ಕಾಗಿ ಬೇಕಾಗುವ ಭೂಮಿಯ ಪರಿಮಾಣವನ್ನು ಅಂದಾಜು ಮಾಡ ಲಾಗಿದೆ. ಅದರ ಪ್ರಕಾರ ದೇಶದ ನಗರಗಳನ್ನೆಲ್ಲಾ ಒಳಗೊಳ್ಳುವಂತೆ ರೈಲ್ವೆ ಹಳಿಗಳ ಪಕ್ಕದಲ್ಲಿ ಉದ್ದಕ್ಕೂ ಒಂದು ಕಿಲೋಮೀಟರ್ ಅಗಲದವರೆಗಿನ ಭೂಮಿಯನ್ನು ವಶಪಡಿಸಿಕೊಳ್ಳಬೇಕು. ಹಾಗೆ ಒಟ್ಟು ಕೃಷಿಭೂಮಿಯಲ್ಲಿ ಶೇ. ೩೧.೩ರಷ್ಟು ಭೂಮಿಯನ್ನು ರೈತರಿಂದ ಸೆಳೆದುಕೊಳ್ಳ ಬೇಕಾಗುತ್ತದೆ. ಅಸಂಖ್ಯ ರೈತರು ಭೂಮಿಯಡಿ ಹೂತುಹೋಗುತ್ತಾರೆ. ಅವರಿಗೆ ಉದ್ಯಮಗಳಲ್ಲಿ ಎಂಥದೋ ಚಾಕರಿ ದೊರಕೀತು ಎಂಬ ಆಶ್ವಾಸನೆ ನೀಡಲಾಗುತ್ತಿದೆ. ಅದು ಫಲಿಸುವ ಸಾಧ್ಯತೆ ಕಡಿಮೆ, ಫಲಿಸಿದರೂ ರೈತರಿಗೆ ಸಿಗುವುದು ವಾಚ್‌ಮನ್ ಕೆಲಸದಂಥವು ಮಾತ್ರ. ಏಕೆಂದರೆ, ಔದ್ಯಮಿಕ ಪರಿಣತಿ ಅವರಿಗಿಲ್ಲ. ಇಷ್ಟು ಭೂಮಿ ಕೃಷಿಯೇತರ ವಾದಾಗ ಅದು ಯಾವ ಉತ್ಪಾದನೆಯನ್ನೂ ಕೊಡದೆ ಉಳಿದು ಬಿಡುವ ಸಂಭವವೂ ಇದೆ. ಏನೇ ಆದರೂ ದೇಶದ ಒಟ್ಟು ಕೃಷಿ ಉತ್ಪಾದನೆಯಲ್ಲಿ ಕನಿಷ್ಠ ಶೇ. ೨೫ರಷ್ಟು ಖೋತಾ ಆಗುವುದು ಅನಿವಾರ್ಯ. ಅಷ್ಟು ಆಹಾರವನ್ನು ಆಮದು ಮಾಡಿಕೊಳ್ಳಬೇಕಾದರೆ ಏನು ಸಂಕಷ್ಟವಿರುತ್ತದೆ ಎಂಬುದನ್ನು ಊಹಿಸಿಕೊಳ್ಳಬಹುದು. ಯಾರಿಂದ ಆಮದು ಮಾಡಿಕೊಳ್ಳುತ್ತೇವೋ ಅವರ ಕೈಗಳು ನಮ್ಮ ಕೊರಳನ್ನು ಹಿಚುಕಿಹಾಕಿಬಿಡುತ್ತವೆ. ಅದು ಬೇಡ ವೆಂದರೆ ಅವರು ಹೇಳಿದಂತೆ ಕೇಳುವ ಗುಲಾಮರು ನಾವಾಗಬೇಕಾಗುತ್ತದೆಂಬುದು ನೆನಪಿರಲಿ.

* * *

ಶಾಲೆಗಳಲ್ಲಿ ಭಾಷಾ ಮಾಧ್ಯಮದ ಬಗೆಗಿನ ಚರ್ಚೆಯು ತಾರಕಕ್ಕೇರಿದೆ. ಭಾರತೀಯ ಭಾಷೆಗಳ ಉಸಿರಾಟ ನಿಲ್ಲದಿರಬೇಕಾದರೆ ಸಂವಿಧಾನಕ್ಕೆ ಲೋಕಸಭೆಯು ತಿದ್ದುಪಡಿ ತರುವುದೊಂದೇ ಮಾರ್ಗ ಎನ್ನಲಾಗುತ್ತಿದೆ. "ಆ ತಿದ್ದುಪಡಿಯು ಅಸಿಂಧು, ಏಕೆಂದರೆ ಅದು ಸಂವಿಧಾನದ ಮೂಲ ಸಂರಚನೆಗೆ ವಿರೋಧವಾದ್ದು" ಎಂದು ಸರ್ವೋಚ್ಚ ನ್ಯಾಯಾಲಯವು ಪರಿಗಣಿಸುವುದಿಲ್ಲವೆಂಬ ಖಾತ್ರಿ ಏನಿಲ್ಲ. ಸಂವಿಧಾನದ ತಿದ್ದುಪಡಿಯ ಮಾತು ಬಂದಾಗ ನಮ್ಮ ಪ್ರಧಾನಿ ಏನು ಹೇಳಿಯಾರು? "ಇಂತಹ ಕ್ರಮ ಅನಗತ್ಯ. ಏಕೆಂದರೆ ನಮ್ಮ ಅಭಿವೃದ್ಧಿಯು ನಾವು ನೆನೆಸಿದಂತಾದರೆ ಎಲ್ಲ ಸಮಸ್ಯೆಗಳ ಪರಿಹಾರವೂ ಆಗುತ್ತದೆ. ಆದ್ದರಿಂದ ಭಾಷೆಯ ಪ್ರಶ್ನೆ ತೀರಾ ಗೌಣವಾದ್ದು" ಎಂದು ಕೂಡ ಹೇಳಬಹುದು. ನಮ್ಮ ರಾಜ್ಯದಲ್ಲಿ ಶ್ರೀ. ಮೋದಿಯವರ ಪಕ್ಷದ ಶಾಸಕರು ಮತ್ತು ಪಾರ್ಲಿಮೆಂಟ್ ಸದಸ್ಯರು ಈಗಲೇ ಕಾರ್ಯಾಸಕ್ತರಾಗಿ ಮಧ್ಯಪ್ರವೇಶ ಮಾಡಬೇಕು. ಇಲ್ಲದಿದ್ದರೆ ನಾವವರನ್ನು ಕೇಳಬೇಕಾಗುತ್ತದೆ, "ನೀವೇನು ಸುಮ್ಮನೆ ಮುದ್ದೆ ನುಂಗುತ್ತಿರುತ್ತೀರೋ, ಇಲ್ಲವೆ ನಿಮ್ಮ ಪಕ್ಷದ ನಾಯಕರ ಕಣ್ಣು ತೆರೆಸುತ್ತೀರೋ" ಎಂದು. ಅವರಾರೂ ನೇರವಾಗಿ ಸಂವಿಧಾನದ ತಿದ್ದುಪಡಿಯ ಅಗತ್ಯದ ಬಗ್ಗೆ ಬಾಯಿ ಬಿಡದಿರುವುದು ಸಂಶಯಕ್ಕೆ ಎಡೆಮಾಡಿ ಕೊಡುತ್ತಿದೆ. ಜನಸಮುದಾಯವು ಅವರಿಗೆಲ್ಲಾ ಪತ್ರ ಬರೆದು ಅವರ ನಿಲುವನ್ನು ಬಹಿರಂಗ ಗೊಳಿಸಬೇಕೆಂದು ಕೇಳುವುದು ಔಚಿತ್ಯಪೂರ್ಣ.

* * *

ಎಡಪಕ್ಷಗಳಾದ ಭಾರತ ಕಮ್ಯುನಿಸ್ಟ್ ಪಕ್ಷ ಮತ್ತು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಯಥೋಕ್ತವಾಗಿ ತಮ್ಮ ತಮ್ಮ ರಾಷ್ಟ್ರ ಸಮ್ಮೇಳನಗಳನ್ನು ಪುದುಚೇರಿ ಮತ್ತು ವಿಶಾಖಪಟ್ಟಣಗಳಲ್ಲಿ ನಡೆಸಿವೆ. ಬೇರೆ ಎಡಪಕ್ಷಗಳನ್ನು ಸಮ್ಮೇಳನಗಳಿಗೆ ಆಹ್ವಾನಿಸಿ ಭಾಷಣ ಗಳನ್ನೂ ಮಾಡಿಸಿಕೊಂಡಿವೆ. ಹೀಗೆ ಆರೋ ಏಳೋ ಕಮ್ಯುನಿಸ್ಟ್ ಪಕ್ಷಗಳು ಒಟ್ಟಾಗಿ ಸಮ್ಮೇಳನಗಳಲ್ಲಿ ಭಾಗವಹಿಸಿವೆ. ಎಲ್ಲರೂ ಎಡಪಕ್ಷಗಳ ಐಕ್ಯತೆ ಇಲ್ಲವೆ ಐಕ್ಯಹೋರಾಟಗಳ ಅನಿವಾರ್ಯತೆಯನ್ನು ಪ್ರತಿಪಾದಿಸಿದ್ದಾರೆ. ಈ ಪಕ್ಷಗಳಲ್ಲಿ ಪ್ರತಿಪಾದನಾ ಶೂರತ್ವಕ್ಕೆ ಕೊರತೆಯಿಲ್ಲ. ಆದರೆ ಕಾರ್ಯಾಚರಣೆಯ ಪ್ರಶ್ನೆ ಬಂದಾಗ "ನಾವು ನಾವೇ, ನೀವು ನೀವೆ" ಎಂಬ ಸಿದ್ಧಾಂತದ್ದು ಮೇಲುಗೈ ಆಗುತ್ತದೆ. ಮೇ ೧ರಂದು ಮೇ ದಿನಾಚರಣೆಯನ್ನು ಸಹ ಪ್ರತ್ಯೇಕವಾಗಿ ಆಚರಿಸಿಕೊಳ್ಳುವ ಎಡಪಕ್ಷಗಳು ಐಕ್ಯ ಹೋರಾಟ ಮಾಡುವುದು ನಿಜವೇ? ಇದು ನಮ್ಮ ದೇಶದ ಎಡ ರಾಜಕೀಯವು ಎದುರಿಸಬೇಕಾದ ಪ್ರಶ್ನೆ.

ಸೋವಿಯೆತ್ ಒಕ್ಕೂಟವು ಅಸ್ತಿತ್ವದಲ್ಲಿದ್ದಾಗ ಉಕ್ರೇನ್ ಅದರಲ್ಲಿ ಪ್ರಧಾನ ಅಂಗವಾಗಿತ್ತು. ಉಕ್ರೇನಿನ ಕ್ರಾಂತಿಕಾರಿ ಪರಂಪರೆಯು ಚರಿತ್ರಾರ್ಹ ವಾದ್ದು. ಶೊಲೋಕೋವ್ ಬರೆದ "ಅಂಡ್ ಕ್ವಯಟ್ ಫ್ಲೋಸ್ ದ ಡಾನ್" ಎಂಬ ಲೋಕಪ್ರಸಿದ್ಧ ಕಾದಂಬರಿಯಲ್ಲಿ ಉಕ್ರೇನ್‌ನ ಪಾತ್ರ, ಅನುಭವ, ಹೋರಾಟ, ಸ್ಥಿತ್ಯಂತರ, ಹೆಮ್ಮೆ, ಗೆಲುವು, ಎಲ್ಲವೂ ಮನೋಜ್ಞವಾಗಿ ಚಿತ್ರಿತವಾಗಿವೆ. ಹಿಟ್ಲರನ ನಾಜಿ ಪಡೆಗಳ ವಿರುದ್ಧ ಅವಿಸ್ಮರಣೀಯ ಕದನ ನಡೆಸಿ ವಿಜಯಿಯಾದ್ದು ಉಕ್ರೇನಿನ ವಿಖ್ಯಾತಿ. ಹಿಟ್ಲರನ ಸೈನ್ಯದ ಫುಟ್‌ಬಾಲ್ ಆಟಗಾರರ ವಿರುದ್ಧ ಉಕ್ರೇನಿನ ಪಂಗಡವು ಬಲವಂತವಾಗಿ ಹೇರಲಾದ ಆಟದಲ್ಲಿ ಗೆದ್ದಾಗ ಕಿಯೇವ್ ಡೈನಮೋ ಕ್ಲಬ್‌ನ ಏಳು ಮಂದಿ ಆಟಗಾರರನ್ನು ಹಿಟ್ಲರನ ಸೇನಾನಿ ಗುಂಡಿಕ್ಕಿ ಕೊಂದಿದ್ದ. ಅವರ ಸ್ಮಾರಕವು ಡೈನಮೋ ಕ್ಲಬ್‌ನ ಕ್ರೀಡಾಂಗಣದ ಪ್ರವೇಶದ್ವಾರದಲ್ಲಿ ಈಗಲೂ ಇದೆ. ಆದರೆ ಇದೆಲ್ಲಾ ೨೦ನೆಯ ಶತಮಾನದ ಕತೆ. ಈಗ ೨೧ನೆಯ ಶತಮಾನದ ದುರಂತಗಳ ಸರಮಾಲೆ ನಮ್ಮೆದುರಿಗಿದೆ. ಉಕ್ರೇನ್ ಅಮೆರಿಕಾದ ನೆಚ್ಚಿನ ಭಂಟ. ನ್ಯಾಟೋ ಕೂಟದ ಕಾಟ ಉಕ್ರೇನ್‌ನಲ್ಲಿ ಹಬ್ಬಿದೆ. ನ್ಯಾಟೋ ಯುದ್ಧವಿಮಾನ ಗಳಿಗೆ ಉಕ್ರೇನ್‌ನಲ್ಲಿ ತಾಣಗಳಿವೆ. ರಷ್ಯ ಎಂದರೆ ಕೀರಲು ಧ್ವನಿಯಲ್ಲಿ ಅರಚುವ ದೇಶವಾಗಿದೆ ಉಕ್ರೇನ್. ಅಲ್ಲಿನ ಈಚಿನ ಒಂದು ತೀರ್ಮಾನ ಹೊರಬಿದ್ದಿದೆ. ಉಕ್ರೇನಿನಲ್ಲಿ ಎಲ್ಲೂ ಸೋವಿಯೆತ್ ಕ್ರಾಂತಿಯ ನೆನಪು ಉಳಿಯಬಾರದಂತೆ. ಯಾವ ರಸ್ತೆಗೂ ಲೆನಿನ್ ಮುಂತಾದವರ ಹೆಸರು ಕೂಡದು, ಎಲ್ಲೂ ಕಮ್ಯುನಿಸ್ಟರ ಪುತ್ಥಳಿಗಳು ಕೂಡದು, ಚಿತ್ರಪಟಗಳು ಕೂಡದು, ಎಂಬುದು ಹೊಸ ಶಾಸನ. ಪುಸ್ತಕ ಭಂಡಾರಗಳು ಮತ್ತು ಚಿತ್ರಕಲಾ ಮಂದಿರಗಳ ಶೋಧನೆಯನ್ನೂ ನಡೆಸಲಾಗುತ್ತದಂತೆ. ಉಕ್ರೇನ್‌ನ ಈಗಿನ ಕುಬ್ಜ ನಾಯಕರು ಹೇಳಿಕೊಳ್ಳುತ್ತಾರೆ, "ನಮಗೆ ಎಪ್ಪತ್ತು ವರ್ಷಗಳ ನಂತರ ಮುಕ್ತ ಸ್ವಾತಂತ್ರ್ಯ ದೊರೆತಿದೆ, ಅಮೆರಿಕಾಕ್ಕೆ ನಾವು ಋಣಿಗಳು, ರಷ್ಯ ಬಹಳ ಮಲಿನವಾದ ದೇಶ" ಎಂದು. ಸ್ವಾತಂತ್ರ್ಯ ವೆಂದರೆ ಇತಿಹಾಸವನ್ನು ಸಾಯಿಸುವುದು, ಅಮೆರಿಕಾದ ಅಡಿಯಾಳುಗಳಾಗಿ ವರ್ತಿಸುವುದು, ಜೊತೆಯಲ್ಲಿ ಹೋರಾಟ ಮಾಡಿ ಮಡಿದ ಎಲ್ಲ ಕ್ರಾಂತಿವೀರರನ್ನೂ ತುಚ್ಛವಾಗಿ ಕಾಣುವುದು ಎಂದರ್ಥವೆ? ಇತಿಹಾಸದ ಚಕ್ರ ಸುತ್ತುತ್ತಿದೆ, ಅದು ಸ್ತಬ್ಧವಾಗಿಲ್ಲ. ಉಕ್ರೇನ್‌ನ ಪರತಂತ್ರಜೀವಿ ನಾಯಕರು ಅದನ್ನು ಮರೆಯದಿರಲಿ.




## ವೈಜ್ಞಾನಿಕ ಮನೋಭಾವ : ಒಂದು ಸ್ಪಷ್ಟೀಕರಣ

✉ ಶ್ರೀ ಎಸ್. ಮಂಜುನಾಥ (ಏಪ್ರಿಲ್ ಸಂಚಿಕೆ) ಅವರ ಪತ್ರಕ್ಕೆ ಸಂಕ್ಷಿಪ್ತ ಪ್ರತಿಕ್ರಿಯೆ ಇದು :

"ದೇವರು, ದೈವತ್ವದ ಮೊರೆ ಹೋದವರು, ಒಣ ಸಂಪ್ರದಾಯಗಳಿಗೆ ಶರಣಾಗತರಾದವರಿಂದ ಇನ್ನೆಂಥ ವೈಜ್ಞಾನಿಕ ಮನೋಧರ್ಮ ಅಪೇಕ್ಷಿಸಲು ಸಾಧ್ಯ?" ಎಂದು ಮಂಜುನಾಥ್ ಕೇಳುತ್ತಾರೆ. ಅಂದರೆ, ದೇವರ ಮೇಲೆ ನಂಬಿಕೆ ಇರುವವರನ್ನೂ ಒಣ ಸಂಪ್ರದಾಯಗಳಿಗೆ ಶರಣಾಗತರಾದವರನ್ನೂ ಒಂದೇ ತಕ್ಕಡಿಯಲ್ಲಿಟ್ಟು ಇವರು ತೂಗುತ್ತಿದ್ದಾರೆ ಎನ್ನುವುದು ಸ್ಪಷ್ಟವಾಗಿದೆ. ದೇವರ ಮೇಲೆ ನಂಬಿಕೆ ಇದ್ದಮಾತ್ರಕ್ಕೆ ಅವರೆಲ್ಲ ಒಣ ಸಂಪ್ರದಾಯಗಳಿಗೆ ಬಲಿಯಾದವರು ಎಂಬ ಇಂತಹ ಸರಳ ಸಮೀಕರಣ ಅಪಾಯಕಾರಿ. ವಿಜ್ಞಾನಿಗಳು ತಮ್ಮ ಅರಿವಿನ ದಿಗಂತದ ಅಂಚಿಗೆ ಬಂದು ಮುಟ್ಟಿದಾಗಷ್ಟೇ ಅದರಾಚೆ ತಮಗೆ ಕಾಣದ, ತಿಳಿಯದ ಸತ್ಯವನ್ನು ಕೆಲವೇಳೆ "ದೇವರು" ಎನ್ನುತ್ತಾರೆ. ನ್ಯೂಟನ್, ಕ್ಯಾಂಟರ್, ಕೋಪರ್ನಿಕಸ್, ಡೇಕಾರ್ಟ್ ಮುಂತಾದವರು ಈ ಬಣಕ್ಕೆ ಸೇರುತ್ತಾರೆ.

"ಶಿಕ್ಷಕರು ಮಕ್ಕಳಿಗೆ ಚಮ್ಮಾರ, ನೇಕಾರ, ಕಾಡುಸಿದ್ದರು, ಗೊಲ್ಲರು, ಹಕ್ಕಿಪಿಕ್ಕಿ ಜನಾಂಗದವರನ್ನೆಲ್ಲಾ ವಿಜ್ಞಾನಿಗಳು ಎಂದು ಹೇಳಿದರೆ ಮಕ್ಕಳು ಗೊಳ್ ಎಂದು ನಗಬಹುದು" ಎನ್ನುವ ಮಂಜುನಾಥ್ ಅವರ ಮಾತು ಕೇವಲ ಕುಹಕವಷ್ಟೇ ಅಲ್ಲ, ಅವರ ಚಿಂತನೆ ಎಷ್ಟು ಸಂಕುಚಿತವಾಗಿದೆ ಎನ್ನುವುದನ್ನೂ ಅನಾವರಣ ಮಾಡುವಂತಿದೆ. ಅವರ ಪ್ರಕಾರ, ಇವರೆಲ್ಲ ಕಸುಬಿನ ಪರಿಣಿತರೇ ಹೊರತು "ವಿಜ್ಞಾನಿ"ಗಳಲ್ಲ. ಅವರ ಪ್ರಕಾರ ಸಮಾಜದಿಂದ "ವಿಜ್ಞಾನಿ" ಎಂಬ ಉಪಾಧಿ ಪಡೆದವರು ಮಾತ್ರ ಹಾಗೆಂದು ಕರೆಸಿಕೊಳ್ಳಲು ಅರ್ಹರು, ಉಳಿದವರು ಅಲ್ಲ! ಸಿಡುಬು ರೋಗಕ್ಕೆ ಎಡ್ವರ್ಡ್ ಜೆನ್ನರ್ ಲಸಿಕೆ ಕಂಡುಹಿಡಿದದ್ದು ಹೇಗೆ ಎನ್ನುವುದನ್ನು ತಿಳಿದರೆ ಸಾಕು. ಜಗತ್ತಿನ ಮಹಾ ವೈದ್ಯರು ಮತ್ತು ವಿಜ್ಞಾನಿಗಳಿಗೆ ತಲೆನೋವಾಗಿದ್ದ ಸಿಡುಬಿಗೆ ಶಾಲೆ ಕಲಿಯದ ಹಳ್ಳಿಯ ಗೊಲ್ಲರು ಪರಿಹಾರ ಕಂಡುಹಿಡಿದಿದ್ದರು! ಇನ್ನು ಅಯಸ್ಕಾಂತದ ಮಹತ್ವವನ್ನು ಕಂಡು ಜಗತ್ತಿಗೆ ತಿಳಿಸಿದವನು ಒಬ್ಬ ಅನಾಮಧೇಯ ಕುರುಬರ ಹುಡುಗ!

ಮೂಢನಂಬಿಕೆಗಳಿಗೆ ಬೆನ್ನು ತಿರುಗಿಸಿ, ಮೃದು ಧೋರಣೆ ತಳೆಯಬೇಕು ಎಂದು ನಾನು ಲೇಖನದಲ್ಲಿ ಹೇಳಿಲ್ಲ. ವಿಜ್ಞಾನ, ಅವಿಜ್ಞಾನ (ಅಥವಾ ನಂಬಿಕೆ/ಶ್ರದ್ಧೆ) ಮತ್ತು ಮೌಢ್ಯ – ಎಂಬ ಮೂರು ವಿಭಾಗಗಳನ್ನು ಸ್ಪಷ್ಟವಾಗಿ ಗುರುತಿಸಿ, ಇವುಗಳಲ್ಲಿ ವಿಜ್ಞಾನದ ಬಗ್ಗೆ ಪ್ರೀತಿ ಬೆಳೆಸಿಕೊಳ್ಳಬೇಕು; ನಂಬಿಕೆಯ ಬಗ್ಗೆ ಅನಾಸಕ್ತರಾಗಿರಬೇಕು ಮತ್ತು ಮೌಢ್ಯಗಳನ್ನು ಸಾಧ್ಯವಿದ್ದಲ್ಲೆಲ್ಲ ಖಂಡಿಸಬೇಕು ಎಂದೇ ಹೇಳಿದ್ದೇನೆ. ತೋರಣ, ಮುಂಜಿ, ಮಂತ್ರೋಚ್ಚಾರಣೆ, ವಿಗ್ರಹಾರಾಧನೆ ಮುಂತಾದವುಗಳ ಬಗ್ಗೆ ನಾನು ವ್ಯಂಗ್ಯದ ಧಾಟಿಯಲ್ಲಿ ಹೇಳಿದ್ದೇನೆ. ಅದರರ್ಥ, ಅಲ್ಲಿ ಪಟ್ಟಿ ಮಾಡಿದ್ದನ್ನೆಲ್ಲಾ ವೈಜ್ಞಾನಿಕ ಎಂಬ ಕಾರಣ ಕೊಟ್ಟು ನಾನು ಅನುಮೋದಿಸುತ್ತೇನೆ ಎಂದಾಗುತ್ತದೆಯೆ? ಲೇಖನವನ್ನು ಸರಿಯಾಗಿ ಓದಿಕೊಂಡವರಿಗೆ ಅಲ್ಲಿ ಲೇಖಕ ಸಂಪ್ರದಾಯ–ನಂಬಿಕೆಗಳನ್ನು ಸಮರ್ಥಿಸಿಕೊಳ್ಳುತ್ತಿದ್ದಾನೆ ಎನ್ನುವ ಭಾವನೆ ಬರಲು ಅವಕಾಶವಿಲ್ಲ. ಇಡೀ ಲೇಖನದಲ್ಲಿ ನಾನು ಯಾವ ನಂಬಿಕೆಗೂ ಸಮರ್ಥನೆ ಕೊಡುವ




ಪ್ರಯತ್ನ ಮಾಡಿಲ್ಲ. "ನಂಬಿಕೆಯನ್ನು ವಿಜ್ಞಾನ ಎಂದು ಪರಿಗಣಿಸಬೇಡಿ" ಎನ್ನುವ ಧಾಟಿಯೇ ಎಲ್ಲ ಕಡೆಯೂ ಬಂದಿದೆ. "ಕಾಶಿ ವಿಶ್ವನಾಥನಿಗೆ ಕಾಯಿ ಒಡೆಸಿಕೊಂಡು ಬರುವುದು ಕೇವಲ ನಂಬಿಕೆಯ ಪ್ರಶ್ನೆ. ಆದರೆ ರಾಕೆಟ್‌ನಲ್ಲಿ ಪೆಟ್ರೋಲ್ ಬದಲು ಗಂಗಾತೀರ್ಥ ತುಂಬಿಸಿ ದೇವರೇ ಹಾರಿಸಿಯಾನು ಎಂದು ಕಾಯುವುದು ವಿಜ್ಞಾನದ ಅಪಹಾಸ್ಯ ಮತ್ತು ಮೂರ್ಖತನ" ಎಂದು ಹೇಳಿದ್ದೇನೆ. ಇಲ್ಲಿ ನಂಬಿಕೆಯನ್ನು ಸಮರ್ಥಿಸಿಕೊಳ್ಳುವ ಮಾತೆಲ್ಲಿ ಬಂತು? ನನ್ನ ಮಟ್ಟಿಗೆ ವೈಜ್ಞಾನಿಕ ಮನೋಧರ್ಮ ಎಂದರೆ ಯಾವುದು ನಂಬಿಕೆ, ಯಾವುದು ವಿಜ್ಞಾನ, ಯಾವುದು ಮೌಢ್ಯ ಎನ್ನುವುದನ್ನು ತಿಳಿಯಲು ನಮ್ಮೊಳಗೆ ಬೆಳೆಯಬೇಕಾದ ವಿವೇಚನೆ. ವೈಜ್ಞಾನಿಕ ಮನೋಧರ್ಮ ವ್ಯಕ್ತಿಯ ಒಳಗಿನಿಂದ ಹುಟ್ಟಬೇಕಾದ ಅರಿವೇ ಹೊರತು ಸಾರ್ವಜನಿಕವಾಗಿ ಪ್ರದರ್ಶಿಸಬೇಕಾದ "ದಾಢಸಿತನ" ಅಲ್ಲ.

*ಬೆಂಗಳೂರು* **ರೋಹಿತ್ ಚಕ್ರತೀರ್ಥ**

*(ಈ ಬಗ್ಗೆ ಪತ್ರ ವ್ಯವಹಾರವನ್ನು ಮುಕ್ತಾಯಗೊಳಿಸಲಾಗಿದೆ. ಸ್ವತಂತ್ರ ವೈಚಾರಿಕ ಲೇಖನಗಳಿಗೆ ಎಂದಿನಂತೆ ಸ್ವಾಗತವಿರುತ್ತದೆ. – ಸಂ.)*

## ಜಾಣ ಮಕ್ಕಳಿಗೊಂದು ಚಾರಣ ಪಾಠ

✉ ಇಂದಿನ ಮಕ್ಕಳಿಗೆ ಪುಸ್ತಕ ಪಾಠದ ಜೊತೆಗೆ ನಿಸರ್ಗ ಪಾಠವೂ ಅಗತ್ಯ. ಮಕ್ಕಳ ಜ್ಞಾನವಲಯ, ಭಾವನಾತ್ಮಕವಲಯ ಮತ್ತು ಮನೋಜನ್ಯ ವಲಯಗಳ ಜೊತೆಯಲ್ಲಿ ಕ್ರಿಯಾವಲಯವೂ ವೃದ್ಧಿಗೊಳ್ಳಬೇಕಾಗಿದೆ. ಅದಕ್ಕಿಲ್ಲಿ ಪರ್ಯಾಯ ಪಾಠವೇ 'ಚಾರಣ ಪಾಠ'. ವರ್ಷದ ೩೬೫ ದಿನಗಳಲ್ಲೂ ಒತ್ತಡದಲ್ಲಿ ಕಾರ್ಯ ನಿರ್ವಹಿಸುವ ಮಕ್ಕಳಿಗೆ ನಿಸರ್ಗದಲ್ಲಿ ಪ್ರಾಯೋಗಿಕ ಪಾಠದ ಅಗತ್ಯವಿದೆ. ಈ ಒತ್ತಡವನ್ನರಿತ ಪೋಷಕರು ತಮ್ಮ ಮಕ್ಕಳನ್ನು ಯಾವುದಾದರೂ ಸಹಪಠ್ಯ ಚಟುವಟಿಕೆಗಳಲ್ಲಿ ಭಾಗಿಯಾಗಿಸಲು ಹವಣಿಸುತ್ತಾರೆ. ಮಕ್ಕಳೂ ಸಹ ಇಂತಹ ಹೊಸ ಕಲಿಕೆಗಳತ್ತ ಆಸಕ್ತಿ ತೋರುತ್ತಿದ್ದಾರೆ.

**ನಾಲ್ಕು ಗೋಡೆಗಳ ಮಧ್ಯೆ:** ಶಾಲೆ ಕೊಠಡಿಯಲ್ಲಿನ ಕಲಿಕೆ ಸಂಪೂರ್ಣ ತೃಪ್ತಿ ತರದು. ಇದಕ್ಕೆಂದೆ ಬೋಧನೆಯ ಹಂತಗಳಲ್ಲಿ ಕೆಲ ಹೊಸ ರೂಪುರೇಷೆಗಳುಂಟು. ಪುಸ್ತಕ ಓದಿ ತಿಳಿಸುವ ತಾತ್ವಿಕ ಪಾಠ ಮಕ್ಕಳಿಗೆ ಅಲ್ಪಾವಧಿಯ ತಿಳುವಳಿಕೆ ನೀಡಿದರೆ, ಪ್ರಾಯೋಗಿಕವಾಗಿ ಕಲಿಸುವ ಪಾಠ ಜೀವಮಾನದ ತಿಳುವಳಿಕೆಗೆ ಸಾಕ್ಷಿಯಾಗಿರುತ್ತದೆ. ದಿನವಿಡೀ ತಿಳಿಸುವ ತಾತ್ವಿಕ ಮಾಹಿತಿಗಿಂತ, ಕೇವಲ ಅರ್ಧ ಗಂಟೆಯಲ್ಲಿ ತಿಳಿಸಿಕೊಡುವ ಪ್ರಾಯೋಗಿಕ ಪಾಠದತ್ತ ನಾವುಗಳು ಗಮನ ಹರಿಸಬೇಕಾಗಿದೆ. ನಿಸರ್ಗ ಪಾಠಗಳಲ್ಲಿ ಹಲವು ವಿಧಗಳು. ಅದರಲ್ಲಿ ಚಾರಣ, ಪಕ್ಷಿವೀಕ್ಷಣೆ, ಛಾಯಾಗ್ರಹಣ, ಕಾಡುಗಳ ವಿಧಗಳು, ದೂರ ದಿಂದಲೇ ನಿಸರ್ಗ ಸೌಂದರ್ಯ ಸವಿಯುವುದು, ಸಸಿಗಳನ್ನು ಬೆಳೆಸುವುದು, ವನ್ಯಜೀವಿಗಳ ಕುರಿತ ಜ್ಞಾನ ಮೂಡಿಸುವುದು ಇತ್ಯಾದಿ ಹವ್ಯಾಸಿ ಪಾಠಗಳಿರುತ್ತವೆ. ಇಂದಿನ ಮಕ್ಕಳು ಪ್ರೌಢಾವಸ್ಥೆಗೆ ತಲುಪುವ ಮೊದಲೇ ನಿಸರ್ಗ ಪಾಠ ಕಲಿಸುವ ಅಗತ್ಯವಿದೆ.

**ನಿಸರ್ಗ ಪಾಠ** : ವೃತ್ತಿಯಲ್ಲಿ ಚಿತ್ರಕಲಾ ಶಿಕ್ಷಕನಾಗಿರುವುದು ನನ್ನ ಭಾಗ್ಯ. ನನ್ನ ಬಿಡುವಿನ ವೇಳೆಯಲ್ಲಿ ಆಸಕ್ತರಿಗೆ ಮತ್ತು ಹಲವು ಶಾಲಾಮಕ್ಕಳಿಗೆ ನಿಸರ್ಗ ಪಾಠ ಬೋಧಿಸುವಲ್ಲಿ ತೃಪ್ತನಾಗಿದ್ದೇನೆ. ೧೦ ತಿಂಗಳ ಶೈಕ್ಷಣಿಕ ಸಮಯದಲ್ಲಿ ಪ್ರತಿ ತಿಂಗಳಿಗೊಮ್ಮೆ ಭಾನುವಾರಗಳಂದು ಮಕ್ಕಳಿಗಾಗಿ ಚಾರಣ, ಪಕ್ಷಿವೀಕ್ಷಣೆ ಮತ್ತು ಪರಿಸರ ಶಿಬಿರಗಳನ್ನು ಹಮ್ಮಿಕೊಂಡು ನಿಸರ್ಗದ ಸಹಜತೆಯನ್ನು ತಿಳಿಸಲು ಪ್ರಯತ್ನಿಸುತ್ತೇನೆ. ಸಹಜ ಪರಿಸರದಲ್ಲಿ ನಾಲ್ಕು ಹೆಜ್ಜೆ ಹಾಕಿದರೆ ನಮ್ಮ ಕಲಿಕೆಯಲ್ಲೂ ಸಹಜತೆ ಮೂಡುತ್ತದೆ. ಚಾರಣದಿಂದ ನಾವುಗಳು ಹಲವು ಜಾತಿಯ ಗಿಡ – ಮರಗಳನ್ನು

ಗುರುತಿಸಲು ಸಹಾಯವಾಗುತ್ತದೆ. ಸಸ್ಯವರ್ಗದ ಮರುಸೃಷ್ಟಿಯ ಪರಿಕಲ್ಪನೆ ಮೂಡುತ್ತದೆ. ಸುದೀರ್ಘವಾಗಿ ಕಾಡಿನಲ್ಲಿ ಚಲಿಸುವುದರಿಂದ ನಮ್ಮ ದೇಹಕ್ಕೆ ಉತ್ತಮ ವ್ಯಾಯಾಮ ಮತ್ತು ಆಮ್ಲಜನಕ ದೊರಕುತ್ತದೆ. ಪರಿಶುದ್ಧತೆಯ ನೈಸರ್ಗಿಕ ಚಿಕಿತ್ಸೆ ದೊರಕುತ್ತದೆ. ಸಾಗುವ ಹಾದಿಯಲ್ಲಿ ಹಲವು ಪಕ್ಷಿಗಳ ಮತ್ತು ವನ್ಯಜೀವಿಗಳ ಸಚಿತ್ರ ದೃಶ್ಯಗಳು ಲಭಿಸುತ್ತವೆ. ಇವೆಲ್ಲವುದರ ಜೊತೆಯಲ್ಲಿ ಅಲ್ಲಲ್ಲಿ ನಿಂತ ನೀರಿನ ಮಹತ್ವ ಮತ್ತು ಕೆರೆ – ಹಳ್ಳಗಳ ಪರಿಸರಾತ್ಮಕ ವ್ಯವಸ್ಥೆಯ ಜೈವಿಕ ಅಂಶಗಳು ಪ್ರಾಯೋಗಿಕವಾಗಿ ಗಮನಕ್ಕೆ ಬರುತ್ತವೆ. ಇದರಿಂದ ನಮ್ಮ ಪಠ್ಯವಸ್ತುವಿನ ವಿಷಯಕ್ಕೂ ಹೆಚ್ಚಿನ ಉಪಯೋಗವಾಗುತ್ತದೆ. ಸಾಲದ್ದಕ್ಕೆ ಹೊಟ್ಟೆ ಹಸಿವಿನ ಮಹತ್ವವೇನು ಎಂಬುದು ನಮ್ಮ ಗಮನಕ್ಕೆ ಬರುತ್ತದೆ. ಅರಣ್ಯ ಸಂರಕ್ಷಣೆ ನಮಗೇಕೆ ಬೇಕು ಎಂಬ ಪರಿಕಲ್ಪನೆ ಬಾಲ್ಯದಲ್ಲೇ ಮೂಡಿದಂತಾಗುತ್ತದೆ. ಮಕ್ಕಳು ಕ್ರಮೇಣ ಪರಿಸರ ಕಾಳಜಿ ಬೆಳೆಸಿಕೊಂಡು, ಪರಿಸರ ಅಧ್ಯಯನಕ್ಕೆ ಮುಂದಾಗಲು ಸಹಕಾರಿಯಾಗುತ್ತದೆ ಈ ಚಾರಣ ಪಾಠ. ಸದಾ ಒತ್ತಡ ಸಹಿತವಾಗಿರುವ ಮಕ್ಕಳಿಗೆ ನವಚೈತನ್ಯ ಲಭಿಸುತ್ತದೆ. ಒಮ್ಮೆ ನಡೆಸಿದ ಚಾರಣ ಮುಂಬರುವ ಎರಡರಿಂದ ಮೂರು ತಿಂಗಳವರೆಗೂ ಉತ್ಸಾಹದಿಂದಿರಲು ಪ್ರೇರೇಪಿಸುತ್ತದೆ. ಇಂತಹ ಚಟುವಟಿಕೆಗಳಿಂದ ಮಕ್ಕಳ ಕ್ರಿಯಾವಲಯ ವೃದ್ಧಿಸಿ ಸರ್ವತೋಮುಖ ಬೆಳವಣಿಗೆಗೆ ಸ್ಫೂರ್ತಿ ನೀಡುತ್ತದೆ. ಪ್ರೀತಿಯ ಮಕ್ಕಳೇ, ನೀವು ಕಲಿತು, ಅನ್ಯರಿಗೂ ಕಲಿಸಿರಿ.

*ಚಿತ್ರದುರ್ಗ* **ಡಿ. ಎನ್. ರವಿಕುಮಾರ್**

✉ 'ನಾಗಿ ಮತ್ತ ಸೀರೆ' ಕಥೆ ಓದಿ, ನನಗೆ ಹೊಳೆದದ್ದು ದುಡಿಯಲಿಕ್ಕೆ ಕೆಲಸ, ಹೊಟ್ಟೆ ತುಂಬಾ ಊಟ, ಕಣ್ತುಂಬ ನಿದ್ದೆ, ಅನನ್ಯ ಪ್ರೀತಿ, ಇಷ್ಟಿದ್ದರೆ ಬದುಕಲು ಆಗುವುದಿಲ್ಲವೆ? ಈಗಿನ ಸಮಾಜದ ಜನರ ನಡುವೆ ಬದುಕುತ್ತಿರುವಾಗ, ಆಸೆಗಳು ಹುಟ್ಟಿಕೊಳ್ಳದೆ ಇರದು. ಆಸೆ ಹುಟ್ಟಿತೆಂದರೆ ಸಂಶೋಧನೆಗಳೂ ಹುಟ್ಟಿಕೊಳ್ಳುತ್ತವೆ. ಆಗ ಮಿತಿಯಿಲ್ಲದ ಆಸೆಗಳು ಬೆಳೆಯುತ್ತವೆ. ಆಸೆಗಳು ದುರಾಸೆಗಳೂ ಆಗುತ್ತವೆ.

ಈಗಿನ ಸಮಾಜದಲ್ಲಿ ಆಸೆಗಳು ಹೆಚ್ಚಾಗಿ, ಜನರ ನಡುವೆ ಪ್ರೀತಿ ಉಳಿದಿಲ್ಲ. ಪ್ರೀತಿ ಇದ್ದರೂ ಅದು ನಿಷ್ಕಲ್ಮಶವಾಗಿ ಉಳಿದಿಲ್ಲ. ಎಲ್ಲಿ ನೋಡಿದರಲ್ಲಿ ಅನುಮಾನ, ಬಲಾತ್ಕಾರ. ಮಾನಸಿಕವಾಗಿ ನೆಮ್ಮದಿಯನ್ನು ಕಳೆದುಕೊಂಡಿದ್ದೇವೆ. ಹೀಗಾಗಲಿಕ್ಕೆ 'ಸಾಕು' ಎನ್ನುವ ಮನಸ್ಸಿಲ್ಲದೆ ಇರುವುದೇ ಕಾರಣ. ಇದರಿಂದ ಮನುಷ್ಯ ಮನುಷ್ಯರನ್ನು ಪ್ರೀತಿಸುವುದನ್ನು ಕಳೆದುಕೊಂಡಿದ್ದೇವೆ.

ಮುದ್ದೇಬಿಹಾಳ **ಸುರೇಶಬಾಬು ಶಿ. ಬಾದರಬಂಡಿ**

✉ ಪ್ರತಿ ತಿಂಗಳೂ 'ಸಂಪಾದಕೀಯ'ದಿಂದ ಆರಂಭಿಸಿ 'ತಿಳಿವು' ಪುಟದವರೆಗೆ ಆಸಕ್ತಿಯಿಂದ ಓದುವ ಹಲವು ವೈವಿಧ್ಯಮಯ ವಿಷಯಗಳನ್ನು ಹೊತ್ತುತರುತ್ತಿರುವ 'ಹೊಸತು' ಈ ಏಪ್ರಿಲ್ ತಿಂಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸಿ ಉಪಕರಿಸಿದೆ, ಚಿಂತನೆಗೆ ಹಚ್ಚಿದೆ.

ಡಾ॥ ವೀಣಾರಾವ್ ಅವರ ಜೆ. ಬಿ. ಎಸ್. ಹಾಲ್ಡೇನರನ್ನು ಕುರಿತ ಲೇಖನ ಅವಸರದಲ್ಲಿ ಬರೆದಂತಿದ್ದು, ವೈಜ್ಞಾನಿಕ ಪಾರಿಭಾಷಿಕಗಳನ್ನು ಸೂಕ್ತವಾಗಿ ಬಳಸಬಹುದಿತ್ತೇನೋ ಅನ್ನಿಸಿತು. 'ವಿಜ್ಞಾನ ಸಮ್ಮೇಳನಗಳಲ್ಲಿ ಕೆಲವು ಹಿರಿಯ ವಿಜ್ಞಾನಿಗಳು ತಮ್ಮ ವಿದ್ಯಾರ್ಥಿಗಳು ಮಾಡಿದ ಸಂಶೋಧನೆಗಳನ್ನು ತಾವೇ ಮಾಡಿದ್ದೆಂದು ಬಿಂಬಿಸಿ ಪ್ರತಿನಿಧಿಗಳ ಪ್ರಶಂಸೆಗೆ ಪಾತ್ರರಾಗಲು ಹಾತೊರೆಯುತ್ತಿದ್ದದ್ದು..., ಅಂದಿನ ದಿನಗಳಲ್ಲಿ ನಡೆಯುತ್ತಿದ್ದ ಸಮ್ಮೇಳನಗಳು ಭಾರತೀಯ ವಿಜ್ಞಾನದ ಸ್ವಂತಿಕೆ, ಸ್ವೋಪಜ್ಞತೆಗಳ ವಿರುದ್ಧ ಹೂಡುತ್ತಿದ್ದ ಪಿತೂರಿ ಗಳಾಗಿದ್ದುವಷ್ಟೆ. ಹಿರಿಯರೆನಿಸಿಕೊಂಡವರು ಯುವ ವಿಜ್ಞಾನಿಗಳನ್ನು ಮುಂದೆ ಬರಲು ಬಿಡದೆ ಅವರಿಗಿದ್ದ ಅವಕಾಶಗಳನ್ನು ಹೊಸಕಿಹಾಕಿ ಬಿಡುತ್ತಿದ್ದರು...,' ಎನ್ನುವ ಮಾತುಗಳು ಅರ್ಧ ಶತಮಾನ ಕಳೆದರೂ ಭಾರತೀಯ ವಿದ್ವತ್ ಜಗತ್ತಿನಲ್ಲಿ ನಡೆಯುತ್ತಿರುವ ಶೋಷಣೆಯನ್ನು ತೋರಿಸುತ್ತಿರುವುದರ ಜೊತೆಗೆ ಅದು ಇನ್ನೂ ಮುಂದುವರಿಯುತ್ತಲೇ ಇದೆ ಎನ್ನುವುದು ಆತಂಕಕ್ಕೀಡುಮಾಡುತ್ತದೆ. ನಮ್ಮ ಹಿರಿಯರಿಗೆ ಬುದ್ಧಿ ಬರುವುದು ಯಾವಾಗ?

ಶಿಥಿಲವಾಗುತ್ತಿರುವ ಶಿಕ್ಷಣದ ಬುನಾದಿಯ ಬಗೆಗಿನ ಪ್ರೊ. ಆರ್. ಪಿ. ಪುನಗಿನ ಅವರ ಲೇಖನ, ಸ್ಮಿತಾ ಅಮೃತರಾಜ್ ಅವರ 'ಶ್ರೀ ಸ್ಟಾರ್ ಮಹಿಮೆ' ಮಕ್ಕಳ ಶಿಕ್ಷಣದ ಬಗ್ಗೆ ತೋರಲ್ಪಡುತ್ತಿರುವ ಕನಿಷ್ಠ ಕಾಳಜಿಯನ್ನು ತೋರಿಸಿಕೊಟ್ಟು, ಹೊಸ ಆಲೋಚನೆಗಳಿಗೆ ಅವಕಾಶ ಬೇಕು ಎನ್ನುವುದನ್ನು ಒತ್ತಿ ಹೇಳುತ್ತದೆ.

ಪ್ರೊ॥ ಬರಗೂರು ರಾಮಚಂದ್ರಪ್ಪ ಅವರ 'ತಿಳಿವು' ತತ್ವಶಾಸ್ತ್ರ ಮತ್ತು ತತ್ವಜ್ಞಾನದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದರೂ 'ತತ್ವಜ್ಞಾನ'ದ ಬಗ್ಗೆ ಅರಿವು ಮೂಡಿಸಿಕೊಳ್ಳಲೇಬೇಕಾದ ಅನಿವಾರ್ಯತೆಯನ್ನು ಪ್ರತಿಪಾದಿಸುತ್ತದೆ.

ಹಾಸನ **ಬೇದ್ರೆ ಎನ್. ಮಂಜುನಾಥ**

## ಗಝಲ್

ಕಫ಼್‌ನ್ ತಂದಿಟ್ಟಿದ್ದೇನೆ ಸುತ್ತಲು ಇನ್ನೇನು ದೇವರು ಸಾಯಬಹುದೆಂದು
ದೈವದವರಿಗೆಲ್ಲ ಹೇಳಿಕಳಿಸಿದ್ದೇನೆ ಹೆಗಲು ಕೊಟ್ಟು ಹೋಗಲು ಇನ್ನೇನು ದೇವರು ಸಾಯಬಹುದೆಂದು.

ಮೊನ್ನೆ ಮೈ ತೊಳೆಯುವಾಗ ಅಕ್ಕಳ್ಳಿ ಅಕ್ಕಳ್ಳಿ ಬಿಚ್ಚಿತು ಕಲ್ಲಿನಂತ ಚರ್ಮ
ಮ(ತ)ಂತ್ರ ಬಲ್ಲವರನ್ನು ಕರೆಸಿದ್ದೇನೆ ಬಿಕ್ಕಳಿಕೆ ತಿಳಿದುಕೊಳ್ಳಲು ಇನ್ನೇನು ದೇವರು ಸಾಯಬಹುದೆಂದು.

ನನಗೆ ಗೊತ್ತು ಸಾಯುವ ದೇವರಿಗೆ ಹಿಂದೆ ಮುಂದೆ ಯಾರೂ ಇಲ್ಲ ಅನಾಥವಿಂದು
ಅದರ ಪಾಪ ಕರ್ಮ ಸಕಲರ ಮೇಲಿಟ್ಟಿದ್ದೇನೆ ದಫ಼್‌ನ್‌ಗೆ ಚಂದಾ ಎತ್ತಲು ಇನ್ನೇನು ದೇವರು ಸಾಯಬಹುದೆಂದು.

ಏಸೊಂದು ಕಾಲ ಅವರು ಇವರು ಅಲ್ಲಿ ಇಲ್ಲಿ ಆಶ್ರಯ ಕೊಟ್ಟವರಿಗೆ ಈಗ ಪುರುಸೊತ್ತಿಲ್ಲ
ಅದಕ್ಕೆಂದೇ ಎಲ್ಲರನ್ನು ಸೇರಿಸಿದ್ದೇನೆ ಕೊನೆಯ ಆಸೆ ಬೇಡಿಕೊಳ್ಳಲು ಇನ್ನೇನು ದೇವರು ಸಾಯಬಹುದೆಂದು.

ಗೋರಿ ತೋಡಲು ಮನೆಗೊಬ್ಬರು ಹೋಗಿದ್ದಾರೆ ಗುದ್ದಲಿ ಚಲ್ಕಿ ಹಣಸಿಕೊಂಡು
ಸಾವು ಬರಬಹುದೆಂದು ಕಾಯುತ್ತಿದ್ದೇನೆ ವಿಷದ ಬಾಯಿ ತೊಳೆಯಲು ಇನ್ನೇನು ದೇವರು ಸಾಯಬಹುದೆಂದು.

ಬಿಕ್ಕುವ ದೇವರಿಗೆ 'ಗಿರಿರಾಜ' ಗುಟ್ಕು ನೀರು ಕೇಳಿದರೆ ಈ ಲೋಕ ದೇವರ ಜಾತಿ ಕೇಳುತ್ತಿದೆ
ಸಾಯದೆ ನರಳುತ್ತಿದ್ದೇನೆ ಎನ್ನುವ ದೇವರಿಗೂ ಗೊತ್ತಿದೆ ಒಂದು ದಿನ ಇನ್ನೇನು ದೇವರು ಸಾಯಬಹುದೆಂದು.

**ಅಲ್ಲಾಗಿರಿರಾಜ್ ಕನಕಗಿರಿ**
'ಸಮೀರ್ ಸದನ', ಕನಕಗಿರಿ – ೫೮೩ ೨೮೩, ಕೊಪ್ಪಳ ಜಿಲ್ಲೆ



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



ಆಳವಾದ ಮತ್ತು ಮೇಲ್ಪದರದ ದೃಷ್ಟಿಯನ್ನುಳ್ಳ ಜ್ಞಾನಾಸಕ್ತರನ್ನು ಪಕ್ಷಿಗಳ ರೂಪಕದಿಂದ ಭಿನ್ನೈಸಿರುವುದು 'ಅಸ್ಯ ವಾಮಸ್ಯ ಸೂಕ್ತ'ದ ಒಂದು ವೈಶಿಷ್ಟ್ಯವೆಂಬುದನ್ನು ನೋಡಿದ್ದೇವೆ. ಸೂಕ್ತದ ಇನ್ನುಳಿದ ಭಾಗವನ್ನು ಪ್ರಸ್ತುತ ಇಪ್ಪತ್ತಮೂರನೆಯ ಕಂತಿನಲ್ಲಿ ಪರಿಚಯಿಸಿಕೊಳ್ಳೋಣ.

**ಜಿ. ರಾಮಕೃಷ್ಣ**

"ದ್ವಾ ಸುಪರ್ಣಾ" ಮಂತ್ರದಲ್ಲಿ (೧.೧೬೪.೨೦) ಜೀವಾತ್ಮ ಮತ್ತು ಪರಮಾತ್ಮರನ್ನು ಕಲ್ಪಿಸಿಕೊಳ್ಳುವುದು ಅತಾರ್ತಿಕವೆಂಬುದು ಅದರ ಮುಂದಿನ ಮಂತ್ರಗಳಿಂದ ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ. ಉದಾಹರಣೆಗೆ, 'ದ್ವಾ ಸುಪರ್ಣಾ' ಮಂತ್ರದ ನಂತರದ ಮಂತ್ರದಲ್ಲಿ "ಸಭೆ ಎದುರು (ಅಂದರೆ, ಯಜ್ಞಗೃಹದಲ್ಲಿ ಸೇರಿರುವ ಜನರ ನಡುವೆ) ಪಕ್ಷಿಗಳು ಅಮೃತತ್ವವನ್ನು ಕುರಿತು ನಿರಂತರವಾಗಿ ಗಾಯನ ಮಾಡುತ್ತವೆ" ಎನ್ನಲಾಗಿದೆ. ಇದು ಯಜ್ಞಸಂದರ್ಭದಲ್ಲಿನ ಮಂತ್ರ ಪಠಣವನ್ನು ಸೂಚಿಸುವಂಥದು. ಅಂದರೆ, ಹೋತೃವಿನೊಡನೆ ಇತರರೂ ಸೇರಿ ಮಂತ್ರಗಳನ್ನು ಹಾಡುತ್ತಿದ್ದಾರೆ ಎಂದರ್ಥ. ಇಲ್ಲಿ ಜೀವಾತ್ಮ ಮತ್ತು ಪರಮಾತ್ಮ ಎಂಬ ಪ್ರಸ್ತಾಪವು ಅಸಂಬದ್ಧವಾಗುತ್ತದೆ. ಮಂತ್ರದ ಪಠಣವು ಮುಂದುವರಿಯುತ್ತಿದ್ದಂತೆ ಕವಿಗೆ ಭಾಸವಾಗುವುದೇನೆಂಬುದನ್ನು ಮಂತ್ರದ ಎರಡನೆಯ ಭಾಗವು ಹೇಳುತ್ತದೆ. ಅದರಲ್ಲಿ ಮಂತ್ರವನ್ನು ರಚಿಸುವುದಕ್ಕೆ ಅನುವಾಗಿರುವ ಕವಿತ್ವವನ್ನು ಶ್ಲಾಘಿಸಲಾಗಿದೆ. "ನಾನೊಬ್ಬ ಅಲ್ಪಮತಿ, ಆದರೆ ವಿಶ್ವವನ್ನು ಕಾಪಾಡುವ ಆ ಧೀಮಂತನು ನನ್ನ ಮನಸ್ಸನ್ನು ಪ್ರವೇಶಿಸಿದ್ದಾನೆ" (ಆದ್ದರಿಂದಲೇ ಕವಿಗೆ ಕವಿತ್ವವು ಸಿದ್ಧಿಸಿದೆ). (೨೧ : ಯತ್ರ ಸುಪರ್ಣಾಃ ಅಮೃತಸ್ಯ ಭಾಗಂ ಅನಿಮೇಷಂ ವಿದಥಾ ಅಭಿಸ್ವರಂತಿ । ಇನಃ ವಿಶ್ವಸ್ಯ ಭುವನಸ್ಯ ಗೋಪಾಃ ಸಃ ಮಾ ಧೀರಃ ಪಾಕಂ ಅತ್ರ ಆ ವಿವೇಶ ॥). "ಸುಪರ್ಣಾ" (ಹಕ್ಕಿಗಳು) ಎಂಬುದು ಮಹತ್ತರ ತಿಳಿವಳಿಕೆಯನ್ನುಳ್ಳವರನ್ನು ಸಂಕೇತಿಸುತ್ತದೆ. ಹಂಸ ಮತ್ತು ಪರಮಹಂಸ ಎಂಬ ಪದಗಳ ಬಳಕೆಯನ್ನದು ನೆನಪಿಸುತ್ತದೆ. ಯಜ್ಞಶಾಲೆಯಲ್ಲಿ 'ಪರಮಹಂಸರು' ಅಮೃತತ್ವದ ಬಗ್ಗೆ ಗಾಯನ ಮಾಡುತ್ತಾರೆ. ಆ ಸಭೆಯಲ್ಲಿರುವ ಕವಿಗೆ ಅದು ಧೀಮಂತಿಕೆಯನ್ನು ನೀಡುತ್ತದೆಂಬ ಅರ್ಥವು ಇಲ್ಲಿ ಗ್ರಾಹ್ಯ. ಧೀಮಂತಿಕೆಯನ್ನು ನೀಡುವ ಮಹಾನ್‌ಶಕ್ತಿಯ ನೆರವಿಲ್ಲದೆ ಹಕ್ಕಿಯು ಮರದ ತುದಿಯನ್ನೇರಲು ಸಾಧ್ಯವಾಗುತ್ತಿರಲಿಲ್ಲವೆಂದು ಮುಂದಿನ ಮಂತ್ರವು ಹೇಳುತ್ತದೆ. ೨೦ನೆಯ ಮಂತ್ರದ ಎರಡು ಹಕ್ಕಿಗಳ ಪ್ರಸಂಗವು (ದ್ವಾ ಸುಪರ್ಣಾ) ಇಲ್ಲಿ ಮರುಕಳಿಸಿದೆ. ಮರದ ತುದಿಯನ್ನೇರುವುದೆಂದರೆ ಧೀಮಂತಿಕೆಯ ಪರಾಕಾಷ್ಠೆಯತ್ತ (ಪರಮಹಂಸತ್ವದತ್ತ) ಚಲಿಸುವುದು; ಕವಿಯ ಅಭಿಲಾಷೆ ಮತ್ತು ಸಾಧನೆ ಅದರಿಂದ ಸೂಚಿತವಾಗುತ್ತದೆ. ಸಿಹಿ ಹಣ್ಣು ಮತ್ತು ಕಹಿ ಹಣ್ಣು (೨೦ : ಪಿಪ್ಪಲಂ ಸ್ವಾದು ಅತ್ತಿ) ತಿನ್ನುವುದೆಂದರೆ ಅಲ್ಪತ್ವದಿಂದ ಮಹತ್ವಕ್ಕೇರುವ ಕವಿಯ ಸಾಧ್ಯತೆ ಮತ್ತು ಸಾಧನೆ. ಸಿಹಿ ಹಣ್ಣು (ಅಂದರೆ, ಮಹತ್ವ) ಎಲ್ಲರಿಗೂ ಲಭ್ಯವಲ್ಲ. "ಭುವನಸ್ಯ ಗೋಪಾಃ" (ವಿಶ್ವದ ರಕ್ಷಕರು) ಧೀಮಂತಿಕೆಯನ್ನು ನೀಡಿದಾಗ ಕವಿಗೆ ಮಹತ್ವವು ಸಿದ್ಧಿಸುತ್ತದೆ. ಕಠೋಪನಿಷತ್ತಿನಲ್ಲಿ ವಿಶ್ವವನ್ನು ಒಂದು ಮರದಿಂದ ಸಂಕೇತಿಸಿರುವುದನ್ನು ಇಲ್ಲಿ ನೆನೆಯಬಹುದು. ನೆರಳು ಮತ್ತು ಬಿಸಿಲುಗಳ ಪ್ರಸ್ತಾಪವು ಅಲ್ಲಿ ಬಂದಿದೆ (೩.೧ : ...ಛಾಯಾತಪೌ...). ಇದನ್ನೆಲ್ಲಾ ಗಮನಿಸಿ ಎಫ್. ಗೆಲ್ಡ್‌ನರ್ ಈ ಮೂರು ಮಂತ್ರಗಳಲ್ಲಿ (೨೦–೨೨) ಹೇಳಲಾಗಿರುವ ಮರವು ಜ್ಞಾನವನ್ನು ಸಂಕೇತಿಸುತ್ತದೆಂದು ಬಗೆದಿದ್ದಾನೆ. ೨೨ನೆಯ ಮಂತ್ರವು ಹೀಗಿದೆ : ಸಿಹಿಯ ಹಣ್ಣನ್ನು ತಿನ್ನುತ್ತಾ ಮರದ ಮೇಲೆ ಕುಳಿತಿರುವ ಹಕ್ಕಿಗಳು ಅಲ್ಲಿಯೇ ವಿಶ್ರಮಿಸಿಕೊಳ್ಳುತ್ತವೆ, ಸಂತತಿಯ ವೃದ್ಧಿ ಮಾಡಿಕೊಳ್ಳುತ್ತವೆ; ಆ ಮರದ ಅತಿ ಎತ್ತರದಲ್ಲಿ ಸಿಹಿಯ ಹಣ್ಣುಗಳಿವೆ; ಅವು ಲಭಿಸುವುದು ಅಮೃತತ್ವವನ್ನು ಸಿದ್ಧಿಸಿಕೊಂಡವರಿಗೆ ಮಾತ್ರ. (೨೨ : ಯಸ್ಮಿನ್ ವೃಕ್ಷೇ ಮಧ್ವದಃ ಸುಪರ್ಣಾಃ ನಿವಿಶಂತೇ ಸುವತೇ ಚ ಅಧಿ ವಿಶ್ವೇ । ತಸ್ಯ ಇತ್ ಆಹುಃ ಪಿಪ್ಪಲಂ ಸ್ವಾದು ಅಗ್ರೇ ತತ್ ನ ಉತ್ ನಶತ್ ಯಃ ಪಿತರಂ ನ ವೇದ ॥). "ದ್ವಾ ಸುಪರ್ಣಾ" (೨೦) ಮಂತ್ರವನ್ನು ಜೀವಾತ್ಮ ಮತ್ತು ಪರಮಾತ್ಮ ಸಂಬಂಧಿ ವಿವೇಚನೆಯೆಂಬಂತೆ ವ್ಯಾಖ್ಯಾನಿಸಿದ ಉಪನಿಷತ್ತಿಗೆ ಮತ್ತು ಅದನ್ನು ವಿಶೇಷವಾಗಿ ವೈಭವೀಕರಿಸಿದ ಆಚಾರ್ಯರಿಗೆ ಈ ಮಂತ್ರವು ತೊಡಕನ್ನುಂಟುಮಾಡಬೇಕು, ಆದರೆ ಆಚಾರ್ಯರು ಯಾರೂ ಋಗ್ವೇದದ ಈ ಮಂತ್ರಗಳನ್ನು ಗಮನಿಸಹೋಗಿಲ್ಲ. ೨೦ನೆಯ ಮಂತ್ರದ "ಎರಡು ಹಕ್ಕಿಗಳ" ಜಾಗದಲ್ಲಿ ಈಗ (೨೨) "ಅನೇಕ ಹಕ್ಕಿಗಳು" ಪ್ರಸ್ತಾಪಕ್ಕೆ ಬಂದಿವೆ. ಇಂತಹ ಹಿನ್ನೆಲೆಯಿಂದಾಗಿ "ದ್ವಾ ಸುಪರ್ಣಾ" ಮಂತ್ರದ ಎರಡು ಹಕ್ಕಿಗಳನ್ನು ಪರಂಪರೆಯಲ್ಲಿ ವಿವಿಧವಾಗಿ ಅರ್ಥೈಸಲಾಗಿದೆ. "ಎರಡು ವಿಧದ ಆತ್ಮಗಳು" ಎಂಬುದು ಒಂದು ಅರ್ಥವಾದರೆ, ದಿನ ಮತ್ತು ರಾತ್ರಿ, ಸೂರ್ಯ ಮತ್ತು ಚಂದ್ರ, ಛಂದಸ್ಸುಗಳು, ಪುರೋಹಿತರು, ಸೂರ್ಯರಶ್ಮಿಗಳು, ಹೀಗೆ ಬೇರೆ ಬೇರೆ ಅರ್ಥಗಳಲ್ಲಿ ಅವನ್ನು ಗ್ರಹಿಸಲಾಗಿದೆ. ಕವಿಯ ಕವಿತ್ವದ ಹಾಗೂ ಧೀಮಂತಿಕೆಯ ಅರ್ಥವನ್ನು ಗ್ರಹಿಸಿರುವವರು ವಿರಳ, ಆದರೆ ನಿಜಕ್ಕೂ ಆ ಅರ್ಥವೇ ಇಲ್ಲಿ ಹೆಚ್ಚು ಅನ್ವರ್ಥವಾಗಿದೆ. ಮುಂದಿನ ಮಂತ್ರಗಳಿಂದ ಅದು ಇನ್ನೂ ಹೆಚ್ಚು ಸಮಂಜಸವೆಂಬುದು ಸ್ಪಷ್ಟವಾಗುತ್ತದೆ. ಅಲ್ಲಿ ಋಗ್ವೇದದ ಮಂತ್ರಗಳ ವಿವಿಧ ಛಂದಸ್ಸುಗಳು ಮೂಡಿದ ಬಗೆಗೆ ಅಚ್ಚರಿಯೆನಿಸುವ ವಿವರಣೆ ನೀಡಲಾಗಿದೆ. ಗಾಯತ್ರಿ ಛಂದಸ್ಸು ಹೇಗೆ ಕಲ್ಪನೆಗೆ ಬಂತು ? ಹೇಗೆಂದರೆ, ಅದು ಗಾಯತ್ರಿ ಛಂದಸ್ಸನ್ನು ಆಧರಿಸಿ ಬಂದಿತು ! ಅಂತೆಯೇ, ಜಗತೀ, ತ್ರಿಷ್ಟುಪ್, ಇತ್ಯಾದಿಗಳು. ಅಂದರೆ, ಕವಿತ್ವ ಶಕ್ತಿಯ ಆವಿರ್ಭಾವ, ಅಭಿವ್ಯಕ್ತಿ, ಇವುಗಳ ಬಗ್ಗೆ ಆಶ್ಚರ್ಯವನ್ನು ವ್ಯಕ್ತಪಡಿಸಲಾಗಿದೆ. ಆ ಛಂದಸ್ಸುಗಳನ್ನು ತಿಳಿದವರು ಕಾವ್ಯಪ್ರತಿಭೆಯನ್ನು ಮೆರೆದು ಅಮರರಾದರೆಂಬ ಭಾವ ಇಲ್ಲಿದೆ. ಆದರೆ ಸಾಯಣನು ಈ ಮಂತ್ರವನ್ನು ಅರ್ಥೈಸುವಾಗ ಅಗ್ನಿ, ವಾಯು, ಸವಿತೃ ದೇವತೆಗಳನ್ನು ಎಳೆದು ತಂದಿದ್ದಾನೆ; ಗಾಯತ್ರಿ ಎಂದರೆ ಅಗ್ನಿ, ತ್ರಿಷ್ಟುಪ್ ಎಂದರೆ ವಾಯು, ಜಗತೀ ಎಂದರೆ ಸವಿತೃ, ಇತ್ಯಾದಿ. ಆದರೆ ಅದು



ಅಪ್ರಕೃತ. (೨೩ : ಯತ್ ಗಾಯತ್ರೀ ಅಧಿ ಗಾಯತ್ರಂ ಆಹಿತಂ... ಪದಂ ಯೇ ಇತ್ ತತ್ ವಿದುಃ ತೇ ಅಮೃತತ್ವಂ ಆನಶುಃ ॥). ಮುಂದಿನ ಮಂತ್ರದಲ್ಲಿ ಛಂದಸ್ಸುಗಳ ಮಾತ್ರೆಗಳನ್ನು ಕುರಿತಂತೆ ಕಾಲ್ಪನಿಕ ವಿವರಣೆ ಇದೆ : ಗಾಯತ್ರೀ ಛಂದಸ್ಸಿನ ಪ್ರಯೋಗ ದೇವತೆಗಳ ಶ್ಲಾಘನೆಗೆ; ಎರಡು ಅಥವಾ ಮೂರು ಸಂಬಂಧಿತ ಮಂತ್ರಗಳಿಗಾದರೆ ತ್ರಿಷ್ಟುಪ್ ಛಂದಸ್ಸು ಉತ್ತಮ. ಅಲ್ಲದೆ, ಪ್ರತ್ಯೇಕ ಛಂದಸ್ಸುಗಳಿಗೆ ಇಂತಿಷ್ಟು ಮಾತ್ರೆಗಳಿರಬೇಕೆಂದು ನಿಗದಿಗೊಳಿಸಲಾಗಿದೆ : ಗಾಯತ್ರಿಯಲ್ಲಿ ಎಂಟು, ತ್ರಿಷ್ಟುಪ್‌ನಲ್ಲಿ ಹನ್ನೊಂದು, ಜಗತೀ ಆದರೆ ಹನ್ನೆರಡು, ಇತ್ಯಾದಿ. ಒಟ್ಟಿನಲ್ಲಿ ಇವೆಲ್ಲಾ ಕವಿತ್ವವನ್ನು ಕುರಿತ ವಿವರಣೆಗಳು. (೨೪ : ಗಾಯತ್ರೇಣ ಪ್ರತಿ ಮಿಮೀತೇ ಅರ್ಕಂ ಅರ್ಕೇಣ ಸಾಮ ತ್ರೈಸ್ತುಭೇನ ವಾಕಂ । ವಾಕೇನ ವಾಕಂ ದ್ವಿಪದಾ ಚತುಷ್ಪದಾ ಅಕ್ಷರೇಣ ಮಿಮತೇ ಸಪ್ತ ವಾಣೀಃ ॥). ಜಗತೀ ಛಂದಸ್ಸಿನಿಂದ ದ್ಯುಲೋಕದಲ್ಲಿ ಹೊಳೆಯೇ ಹರಿದುಬಿಟ್ಟಿತಂತೆ; ಸಾಮವೇದದಲ್ಲಿ ಹೆಚ್ಚು ಪ್ರಯೋಗಕ್ಕೆ ಬರುವ ರಥಂತರ ಎಂಬ ಗಾನರೂಪದ ಛಂದಸ್ಸಿನಿಂದ ಸೂರ್ಯನನ್ನು ಕಾಣಬಹುದಂತೆ. ಆದರೆ ಮೂರು ಪಾದಗಳನ್ನುಳ್ಳ ಗಾಯತ್ರೀ ಛಂದಸ್ಸು ಅತ್ಯುತ್ಕೃಷ್ಟವೆಂದು ಮುಂದಿನ ಮಂತ್ರವು ಹೇಳಿದೆ. (೨೫ : ...ಗಾಯತ್ರಸ್ಯ ಸಮಿಧಃ ತಿಸ್ರಃ ಆಹುಃ ತತಃ ಮಹಾ ಪ್ರ ರಿರಿಚೇ ಮಹಿತ್ವಾ ॥). ಹೊಳೆ ಮತ್ತು ಸೂರ್ಯನ ಬೆಳಕು ಕವಿಯ ಪ್ರತಿಭೆಯ ಫಲವಾಗಿ ಓದುಗನ ಅಥವಾ ಕೇಳುಗನ ಅನುಭವಕ್ಕೆ ಬರುವ ಆಹ್ಲಾದವನ್ನು ಸಂಕೇತಿಸುತ್ತವೆಂದು ತೋರುತ್ತದೆ.

೨೬ನೆಯ ಮಂತ್ರದಲ್ಲಿ ಹಾಲು ಕರೆಯುವ ಹಸು ಮತ್ತು ಅದರ ಕರು ಪ್ರಸ್ತಾಪಿಸಲ್ಪಟ್ಟಿವೆ; ಆದ್ದರಿಂದ ಯಜ್ಞದ ವೇಳೆಯಲ್ಲಿ ಹಾಲು ಕರೆಯಲು ಹಸು ಮತ್ತು ಕರುವಿಗೆ ಆಹ್ವಾನ ನೀಡುವ ಸಂದರ್ಭದಲ್ಲಿ ಅದನ್ನು ಪ್ರಯೋಗಿಸುವುದು ರೂಢಿಗೆ ಬಂದಿರಬೇಕು. ಸಾಯಣನ ಪ್ರಕಾರ ಹಸುವು ಮಳೆ ಸುರಿಸುವ ಮೋಡವನ್ನೂ, ಕರುವು ಮಳೆಯನ್ನು ಸಂತಸದಿಂದ ಬರಮಾಡಿಕೊಳ್ಳುವ ಭೂಮಿಯನ್ನೂ ಪ್ರತಿನಿಧಿಸುತ್ತವೆ. ಹಸುವು ನೀಡುವ ಹಾಲೇ ಮಳೆ ಮತ್ತು ಮಳೆಯನ್ನು ಸುರಿಸಲು ಅನುವಾಗುವ ವಾಯುವು ಗೋವಳಿಗ. ಈ ಹಿನ್ನೆಲೆಯಲ್ಲಿ ಸವಿತೃವು ಶ್ರೇಷ್ಠವಾದ ಯಜ್ಞಕ್ರಿಯೆಗೆ ಪೋಷಣೆ ನೀಡಬೇಕು. ಅದಕ್ಕಾಗಿ ಯಜ್ಞಶಾಲೆಯಲ್ಲಿ ಸಿದ್ಧತೆ ನಡೆದಿದೆ. (೨೬ : ಉಪ ಹ್ವಯೇ ಸುದುಘಾಂ ಧೇನುಂ ಏತಾಂ ಸುಹಸ್ತಃ ಗೋಧುಕ್ ಉತ ದೋಹತ್ ಏನಾಂ । ಶ್ರೇಷ್ಠಂ ಸವಂ ಸವಿತಾ ಸಾವಿಷತ್ ನಃ ಅಭಿಇದ್ಧಃ ಘರ್ಮಃ ತತ್ ಉ ಸು ಪ್ರ ವೋಚಂ ॥). ಈ ಮಂತ್ರದಲ್ಲಿ ಕವಿತ್ವ ಪ್ರಸಂಗವನ್ನು ಮುಂದುವರಿಸಲಾಗಿಲ್ಲ; ಬದಲಾಗಿ, ಗೋವುಗಳ ವಿವಿಧ ನಡೆಗಳನ್ನು ಚಿತ್ರಿಸಲಾಗಿದೆ. ಮುಂದಿನ ಕೆಲವು ಮಂತ್ರಗಳು ಸಹ ಇದಕ್ಕೆ ಸಂಬಂಧಿಸಿದ ಬೇರಷ್ಟು ಅಂಶಗಳನ್ನು ಉಲ್ಲೇಖಿಸುತ್ತವೆ. ಹಿಂಕಾರ ಮಾಡುತ್ತಾ ಹಸುವು ತನ್ನ ಕರುವನ್ನು ಸಮೀಪಿಸುತ್ತದೆ; ಆ ಹಸುವು ಅಶ್ವಿನೀ ದೇವತೆಗಳಿಗೆ ಹಾಲನ್ನು ಮತ್ತು ಸ್ತೋತೃವಿಗೆ ಸೌಭಾಗ್ಯವನ್ನು ನೀಡುತ್ತದೆ (ಮಂತ್ರ ೨೭). ಪಶುಸಂಗೋಪನಾ ಹಂತದ ಕುಟುಂಬವೊಂದರ ಚಿತ್ರಣ, ಗೋವು ಪ್ರಕಟಿಸುವ ಮಾತೃವಾತ್ಸಲ್ಯ, ಗೋವಿನ ಮೊಲೆಯು ಸೂಸುವ ಬೆಚ್ಚಗಿನ ಹಾಲು, ಗೋವು ತನ್ನ ಕರುವನ್ನು ನೇವರಿಸುವ ಸಲುವಾಗಿ ಮೃದುವಾಗಿ ನೆಕ್ಕುವುದು, ತಾಯಿಯು ತನ್ನ ಬಳಿಗೆ ಸರಿಯುತ್ತಿದ್ದಂತೆ ಕರುವು ನಿಧಾನವಾಗಿ ಕಣ್ಣು ಬಿಡುವುದು, ಎಲ್ಲಾ ಒಂದೇ ಮಂತ್ರದಲ್ಲಿ ಆಪ್ತವಾಗಿ ಮೂಡಿಬಂದಿರುವುದು ಮುಂದಿನ ಮಂತ್ರವನ್ನು ಹೃದ್ಯವನ್ನಾಗಿಸಿದೆ. ಕವಿ ಪ್ರತಿಭೆಗೆ ಈ ಮಂತ್ರವು ಬಹಳ ಒಳ್ಳೆಯ ನಿದರ್ಶನವೆನಿಸುತ್ತದೆ. (೨೮ : ಗೌಃ ಅಮೀಮೇತ್ ಅನು ವತ್ಸಂ ಮಿಷಂತಂ ಮೂರ್ಧಾನಂ ಹಿಙ್ ಅಕೃಣೋತ್ ಮಾತವೈ ಉ । ಸೃಕ್ವಾಣಂ ಘರ್ಮಂ ಅಭಿ ವಾವಶಾನಾ ಮಿಮಾತಿ ಮಾಯುಂ ಪಯತೇ ಪಯೋಭಿಃ ॥). ಇಲ್ಲಿ “ಪಯೋಭಿಃ” ಎಂಬುದು ಬಹುವಚನ ರೂಪ; “ಹಾಲುಗಳಿಂದ” ಎಂದು ಅದರರ್ಥ. ‘ಹಾಲು’ ಎಂಬುದನ್ನು ಬಹುವಚನದಲ್ಲಿ ಪ್ರಯೋಗಿಸಿರುವುದು ಇಲ್ಲಿನ ವೈಶಿಷ್ಟ್ಯ. ಕರುವಿಗೆ ಸಮೃದ್ಧವಾಗಿ ಹಾಲನ್ನು ನೀಡುತ್ತಾಳೆ ಗೋ ತಾಯಿ, ಎಂಬ ಸೂಚನೆ ಅದು. ಮತ್ತೆ “ಮಾತವೈ” ಎಂಬ ಪದ ಗಮನಾರ್ಹವಾಗಿದೆ. ಕರುವಿನ ಮುಖವನ್ನು ನೆಕ್ಕಿ ತಾಯಿ ಹಸುವು ಮುಖವನ್ನು ಶುದ್ಧೀಕರಿಸುತ್ತದೆಯೋ ಎಂಬಂತೆ ತೋರುತ್ತದೆಂಬುದು ಅದರ ತಾತ್ಪರ್ಯ. ನಮ್ಮ “ಗೋವಿನ ಹಾಡು” ಎಂಬ ಕವನದಲ್ಲಿ ಇದನ್ನು ಒಂದು ಸೊಗಸಾದ ಪದ್ಯವನ್ನಾಗಿ ಸೇರಿಸಿಬಿಡಬಹುದು, ಅಷ್ಟು ಮನೋಜ್ಞವಾಗಿದೆ ಈ ಚಿತ್ರಣ. ಆದರೆ ಯಜ್ಞದಲ್ಲಿ ಈ ಮಂತ್ರದ ಪ್ರಯೋಗವು ಅಷ್ಟೇನೂ ಔಚಿತ್ಯಪೂರ್ಣವಾಗಿಲ್ಲ : ಕರುವನ್ನು ಹಸುವಿನಿಂದ ದೂರಮಾಡಿ ಹಾಲು ಕರೆಯುವಾಗ ಈ ಮಂತ್ರವನ್ನು ಪಠಿಸಬೇಕಂತೆ ! ಋಗ್ವೇದದ ಕಾವ್ಯತ್ವವನ್ನು ತೃಣೀಕರಿಸುವುದು ಯಜ್ಞಕ್ರಿಯೆಯ ಪ್ರಯೋಗಗಳಲ್ಲಿ ಹೇಗೆ ಹಾಸುಹೊಕ್ಕಾಗಿದೆ ಎಂಬುದಕ್ಕೆ ಇದೊಂದು ನಿದರ್ಶನ !

ಮಾತೃವಾತ್ಸಲ್ಯದ ಚಿತ್ರಣದ ತರುವಾಯದಲ್ಲಿ ಹಸುವು ತನ್ನ ಪ್ರಿಯಕರನತ್ತ ಮನಸ್ಸನ್ನು ಹರಿಯಬಿಡುತ್ತದೆಂಬ ಅರ್ಥವನ್ನು ಕುನ್ಹನ್ ರಾಜ ಮುಂದಿನ ಮಂತ್ರದಲ್ಲಿ ಅರಸಹೊರಟಿದ್ದಾರೆ. ಆದರೆ ಮಂತ್ರದ ಇಂಗಿತವು ಅದಲ್ಲ. ಪಶುಗಳ ಲೋಕದಲ್ಲಿ ಪ್ರೀತಿ ಮತ್ತು ವಾತ್ಸಲ್ಯ ಪ್ರಕಟವಾಗುವುದು ಮಾನವಲೋಕದಲ್ಲಿ ಪ್ರಕಟವಾಗುವುದಕ್ಕಿಂತಲೂ ಉನ್ನತಮಟ್ಟದ್ದು ಎಂಬ ಸೂಚ್ಯಾರ್ಥವು ಮುಂದಿನ ಮಂತ್ರದಲ್ಲಿದೆ. (೨೯ : ಅಯಂ ಸಃ ಶಿಙ್ಕ್ತೇ ಯೇನ ಗೌಃ ಅಭಿವೃತಾ ಮಿಮಾತಿ ಮಾಯುಂ ಧ್ವಸನೌ ಅಧಿ ಶ್ರಿತಾ । ಸಾ ಚಿತ್ತಿಭಿಃ ನಿ ಹಿ ಚಕಾರ ಮರ್ತ್ಯಂ ವಿದ್ಯುತ್ ಭವಂತೀ ಪ್ರತಿ ವವ್ರಿಂ ಔಹತ ॥). ಇಲ್ಲಿ ‘ಶಿಙ್ಕ್ತೇ’ ಎಂಬುದು ಕರುವಿನ ಮೃದುವಾದ ಕೂಗನ್ನು ಅಭಿವ್ಯಕ್ತಿಸುತ್ತದೆ. ಆದರೆ ಗೋವು ಮತ್ತು ಎತ್ತು ಪರಸ್ಪರರಿಗೆ ಏನನ್ನು ಹೇಳಿಕೊಳ್ಳುತ್ತಿಲ್ಲ. ‘ಗೌಃ’ ಎಂಬ ಪದವು “ಮಳೆಯನ್ನು ಸುರಿಸುವ ಮೋಡ” ಎಂಬರ್ಥವನ್ನು ಹೊಂದಿದೆ. ಪರ್ಜನ್ಯ ದೇವತೆಯೆಂದು ಗುರುತಿಸಲಾಗುವುದು ಅಂತಹ ಮೋಡವನ್ನು. ಹಸು ಮತ್ತು ಎತ್ತು ಹೊರಡಿಸುವ ಶಬ್ದವು ಮೋಡದ ಗುಡುಗನ್ನು ಹೋಲುತ್ತದೆಂಬ ಕಲ್ಪನೆಯಿಂದ, ಒಂದರಿಂದ ಇನ್ನೊಂದು ಅನುರಣನಗೊಂಡಿದೆಯೆಂಬ ಮುಂದುವರಿದ ಕಲ್ಪನೆಯನ್ನು ಕವಿಯು ಹೊಮ್ಮಿಸಿದ್ದಾನೆ. ಮೋಡವು ತನ್ನ ಉಡುಪನ್ನು ಕಳಚಿಹಾಕಿದೆ, ಮಿಂಚು ಹೊರಬಂದಿದೆ, ಶಬ್ದವು ಗಡಚಿಕ್ಕುವಂತಿದೆ. ಮಾನವನು ವಿನೀತ ಭಾವವನ್ನು ಪ್ರಕಟಿಸಿ ಮಳೆಯನ್ನು ಸ್ವಾಗತಿಸುತ್ತಾನೆ. “ವಿದ್ಯುತ್” ಎಂಬ ಪದದ ಪ್ರಯೋಗವಿರುವುದನ್ನು ನೋಡಿ ದುಬಾರಿಯಾದ ಅರ್ಥದ ಕಡೆಗೆ ನಾವು ಧಾವಿಸುವಂತಿಲ್ಲ, ಏಕೆಂದರೆ ಅದು ‘ಪ್ರಕಾಶಮಾನತೆ’ಯನ್ನಷ್ಟೇ ಸೂಚಿಸುತ್ತದೆ. ಕವಿಯ ಸಂದರ್ಭದಲ್ಲಿ ಅರ್ಥೈಸುವುದಾದರೆ ಅದು ಅಭಿವ್ಯಕ್ತಿಯ ಹೊಳಪನ್ನು ಸೂಚಿಸುತ್ತದೆಯೆಂದು ಭಾವಿಸಬಹುದು. ಗೋವು ಮತ್ತು ಕರುವಿನ ಪ್ರಕರಣದ ಜಾಗದಲ್ಲಿ ಮಳೆ ಮತ್ತು ಮಾನವ ಸ್ಥಾಪಿಸಲ್ಪಟ್ಟಿರುವುದು ಗೊಂದಲವನ್ನುಂಟು ಮಾಡುತ್ತದೆಯೇ ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಪೋಷಕ ಮತ್ತು ಪೋಷಿತ ಎಂಬ ಸಂಬಂಧವು ಎರಡರಲ್ಲೂ ಇರುವುದು ಸುಲಭಗ್ರಾಹ್ಯ. ಈ ಎಲ್ಲ ಮಂತ್ರಗಳನ್ನೂ (೨೬–೨೯) ಕುನ್ಹನ್ ರಾಜ ಬೇರೆಯೇ ನೆಲೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅದು ‘ದ್ವಾ ಸುಪರ್ಣಾ’ ಮಂತ್ರಕ್ಕೆ (೨೦) ಅವರು ನೀಡುವ ವಿವರಣೆಯ ಮುಂದುವರಿಕೆಯೇ ಸರಿ. ಅವರ ಪ್ರಕಾರ ‘ಎರಡು ಹಕ್ಕಿಗಳು’ ಯಾವುವೆಂದರೆ ಅಪರೋಕ್ಷ ಅನುಭೂತಿ ಮತ್ತು ಸಾಮಾನ್ಯಮಟ್ಟದ ಜ್ಞಾನ. ಗೋವು ಜ್ಞಾನದ ಸಂಕೇತವೆಂಬುದು ಅವರ ಗ್ರಹಿಕೆ. ಗೋವಿನ ಬೆಚ್ಚಗಿನ ಹಾಲೆಂದರೆ ಮುದವನ್ನು ನೀಡುವ ಜ್ಞಾನ. ಈ ಸಂಕೇತಗಳ ಜಾಡಿನಲ್ಲೇ ಅವರ ಅರ್ಥೈಸುವಿಕೆಯು ಮುಂದುವರಿದಿದೆ.

ಆತ್ಮನ ದ್ವಂದ್ವಾತ್ಮಕ ಲಕ್ಷಣಗಳನ್ನು ಹೇಳುವಾಗ ಕಠೋಪನಿಷತ್ತು ನೀಡುವ ಒಂದು ಪ್ರತಿಮೆ ಹೀಗಿದೆ : ಅದು ಏಕಸ್ಥಾನದಲ್ಲಿ ಸ್ಥಿರವಾಗಿ ಕುಳಿತಿರುವಂತೆಯೇ ಅತಿದೂರವನ್ನು ಕ್ರಮಿಸುತ್ತದೆ; ಮಲಗಿರುವಂತೆಯೇ ಸರ್ವತ್ರ ಸಂಚರಿಸುತ್ತದೆ. (೨.೨೧ : ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ). ಅದಕ್ಕೆ ಮೂಲವು ಬಹುಶಃ ಮುಂದಿನ, ಅಂದರೆ ಈ ಋಗ್ವೇದ ಸೂಕ್ತದ ೩೦ನೆಯ ಮಂತ್ರವೇ ಇರಬಹುದು. ಗೋವು–ಕರು, ಮಳೆ–ಮಾನವ, ಈ ಸಂಬಂಧಗಳ ಬಗೆಗಿನ ಚಿಂತನೆಯನ್ನು ಹಿಂದಕ್ಕಿಟ್ಟು ಪ್ರಸ್ತುತ ಮಂತ್ರವು ಮರ್ತ್ಯತ್ವ ಮತ್ತು ಅಮೃತತ್ವಗಳ ನಡುವಿನ ವ್ಯತ್ಯಾಸಗಳತ್ತ ಹೊರಳುತ್ತದೆ. ಒಂದೆಡೆ ಇದ್ದುಕೊಂಡೇ ವೇಗವಾಗಿ ಚಲಿಸುವುದು ಮತ್ತು ವೇಗವಾಗಿ ಚಲಿಸುತ್ತಲೇ ಒಂದೆಡೆ ಸ್ಥಿರವಾಗಿರುವುದು ಎಂಬುದನ್ನು ಮೂಲ ಆಶಯವನ್ನಾಗಿಟ್ಟುಕೊಂಡು ಮರ್ತ್ಯತ್ವ ಮತ್ತು ಅಮೃತತ್ವಗಳ ವ್ಯಾಖ್ಯಾನವೊಂದು ಇಲ್ಲಿ ಬಂದಿದೆ. ಎರಡರ ಮೂಲವೂ ಒಂದೇ ಎಂಬುದು ಪ್ರಧಾನ ಅಂಶ. ಮೃತನ ಜೀವನವೆಂದರೆ ಅಮೃತತ್ವವೇ ಎಂಬ ಭಾವವೂ

ಜೊತೆ

ಬದುಕಲಿ
ನೋವನನುಭವಿಸುವವರ
ಜೊತೆಯಾಗು :
ಸುಖಿಯಾಗು!

• ಗೋಪಿ •
ಹಿರೇಬೆಟ್ಟು

ಇಲ್ಲಿ ವ್ಯಕ್ತವಾಗಿದೆ. ಜೀವಂತವಾಗಿರುವಾಗ ಉಸಿರಾಡುವ ಮತ್ತು ಚಲಿಸುವ ಘಟಕವು ಮರಣಾವಸ್ಥೆಯಲ್ಲಿ ಎರಡನ್ನೂ ಕಳೆದುಕೊಂಡು ಸ್ಥಿರವಾಗಿಬಿಡುತ್ತದೆ. ಎಲ್ಲೋ ಧಾವಿಸುತ್ತಿದೆಯೆಂದು ತೋರುವ ಅದೇ ಘಟಕವು ಅಮೃತತ್ವದಲ್ಲಿ ನೆಟ್ಟು ನಿಲ್ಲುತ್ತದೆ. ಶರೀರವು ಮರ್ತ್ಯ ಮತ್ತು ಆತ್ಮವು ನಿತ್ಯ ಎಂಬ ಸಿದ್ಧಾಂತವನ್ನು ಕುನ್ಹನ್ ರಾಜ ಈ ಮಂತ್ರದಲ್ಲಿ ಶೋಧಿಸಿದ್ದಾರೆ. ಮರ್ತ್ಯತ್ವ ಮತ್ತು ಅಮೃತತ್ವಗಳೆರಡರ ಮೂಲವೂ ಒಂದೇ ಎಂಬುದನ್ನು ಮಂತ್ರವು ಸ್ಪಷ್ಟವಾಗಿ ಗುರುತಿಸಿದೆ. ಮಂತ್ರದ ಪದಗಳನ್ನು ಅನ್ವಯಿಸಿ ಹೇಳುವುದಾದರೆ ಸ್ಥೂಲವಾಗಿ ಅದರರ್ಥ ಇದು : "ಯಾವುದಕ್ಕೆ ಪ್ರಾಣ ಅಥವಾ ಜೀವ ಮತ್ತು ಗತಿ ಅಥವಾ ಚಲನೆಯುಂಟೋ, ಅದು ಸ್ಥಿರವಾಗಿ ಮನೆಗಳ ಮಧ್ಯೆ ನೆಲೆಗೊಂಡಿದೆ. ಅಮೃತತ್ವವನ್ನು ಹೊಂದಿರುವುದು ಮರ್ತ್ಯತ್ವವನ್ನು ಹೊಂದಿರುವುದರ ಸೋದರನೇ. ಮೃತರಿಗೆ 'ಸ್ವಧಾ' ಪೂರ್ವಕವಾಗಿ ನೀಡಲಾಗಿರುವುದು ಅಮೃತತ್ವದ ಪುಷ್ಟಿಯನ್ನು ನೀಡುತ್ತದೆ." (೩೦ : ಅನತ್ ಶಯೇ ತುರಗಾತು ಜೀವಂ ಏಜತ್ ಧ್ರುವಂ ಮಧ್ಯೇ ಆ ಪಸ್ತ್ಯಾನಾಂ। ಜೀವೋ ಮೃತಸ್ಯ ಚರತಿ ಸ್ವಧಾಭಿಃ ಅಮರ್ತ್ಯಃ ಮರ್ತ್ಯೇನ ಸಯೋನಿಃ ॥). ಕಠೋಪನಿಷತ್ತಿನ "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" ಮತ್ತು "ಅಜೋ ನಿತ್ಯಃ ಶಾಶ್ವತಃ ಅಯಂ ಪುರಾಣಃ ನ ಹನ್ಯತೇ ಹನ್ಯಮಾನೇ ಶರೀರೇ" (೨.೧೮) ಎಂಬ ದೃಷ್ಟಿಯು ಪ್ರಸ್ತುತ ಮಂತ್ರದಲ್ಲಿದೆಯೆಂದು ಭಾವಿಸಲಾಗಿದೆ. ಅಂದರೆ, ಆತ್ಮನಿಗೆ ಹುಟ್ಟು–ಸಾವುಗಳಿಲ್ಲ, ಅದು ಶಾಶ್ವತವಾದ್ದರಿಂದ ಶರೀರದ ಪತನವಾದಾಗ ಅದು ಪತನಗೊಳ್ಳುವುದಿಲ್ಲ, ಎಂದರ್ಥ. ಉಪನಿಷತ್ತಿನ ಈ ಭಾಗವನ್ನು ಭಗವದ್ಗೀತೆಯಲ್ಲಿ ಇಡಿಯಾಗಿ ಎತ್ತಿಹಾಕಿಕೊಳ್ಳಲಾಗಿದೆ (೨.೨೦); ಒಂದೆರಡು ಪದಗಳಷ್ಟೇ ಭಿನ್ನ. ಯಜ್ಞ ಕ್ರಿಯೆಯ ಹಿನ್ನೆಲೆಯನ್ನು ತೊರೆಯದೆ ಗ್ರಿಫ್ಫಿತ್ ಈ ಮಂತ್ರಕ್ಕೆ ಬೇರೊಂದು ಸಾಂದರ್ಭಿಕ ಅರ್ಥವನ್ನು ನೀಡಿದ್ದಾನೆ. ಮನೆಗಳಲ್ಲಿ ಸ್ಥಿರವಾಗಿರುವುದು ಅಗ್ನಿ ಮತ್ತು ಅಮೃತತ್ವವನ್ನು ಹೊಂದಿರುವುದು ಸೋಮ ಅಥವಾ ಚಂದ್ರ, ಎಂಬುದು ಅವನ ವ್ಯಾಖ್ಯಾನ. ಮಂತ್ರಾರ್ಥವನ್ನು ಪಡೆಯುವುದು ಅತಿ ಕ್ಲಿಷ್ಟವಾಗಿದೆ ಎಂಬುದಂತೂ ಶತಸ್ಸಿದ್ಧ!

ಪಶುಸಂಗೋಪನಾ ಹಂತದ ಜೀವನ ಛಾಯೆಯನ್ನು ಮುಂದಿನ ಮಂತ್ರದಲ್ಲಿ ಮತ್ತೆ ಕಾಣುತ್ತೇವೆ. ರಕ್ಷಕನ ಬಗೆಗಿನ ವಿಚಾರ ಮಾಡುವಾಗ ಗೋವುಗಳ ರಕ್ಷಕ ಮತ್ತು ಜಗತ್ತಿನ ರಕ್ಷಕ ಎಂಬೆರಡನ್ನೂ ಕವಿಯು ಸ್ಮರಿಸುತ್ತಾನೆ ಮತ್ತು ತುಲನೆ ಮಾಡುತ್ತಾನೆ. ವಿಶೇಷವಾಗಿ ಕಾಣಬರುವುದು ಗೋವಳನು ಗೋವುಗಳ ಮಂದೆಯನ್ನು ನಿಭಾಯಿಸುವುದರ ಒಂದು ಪ್ರತಿಮೆ. ಅವನೆಂದೂ ಮುಗ್ಗರಿಸುವುದಿಲ್ಲ, ಗೋವುಗಳನ್ನು ಸುತ್ತುವರಿದು ಅವನ್ನು ಸರಿ ಹಾದಿಗಳಲ್ಲಿ ಮುನ್ನಡೆಸುತ್ತಾನೆ. ಕೆಲವೇಳೆ ಅವನು ಅಂತರ್ಧಾನವೂ ಆಗಬಹುದು, ಆದರೆ ತನ್ನ ಕ್ಷೇತ್ರವನ್ನು ಸುತ್ತುತ್ತಾ ರಕ್ಷಿಸುವುದರಲ್ಲಿ ಸೋಲುವುದಿಲ್ಲ. ಇದಿಷ್ಟೂ ಗೋರಕ್ಷಕ ಮತ್ತು ಜಗದ್ರಕ್ಷಕ, ಇಬ್ಬರಿಗೂ ಅನ್ವಯಿಸು ವಂಥದು. ಜಗದ್ರಕ್ಷಕನಿಗೆ ಮಾತ್ರ ಸೇರಿಸಬಹುದಾದ ಇನ್ನೊಂದು ಲಕ್ಷಣವೆಂದರೆ ಅವನ ಪ್ರಕಾಶಮಾನವಾದ ದಿರಿಸು. ಅದು ಸೂರ್ಯ ಮತ್ತು ಚಂದ್ರರ ಪ್ರಭೆಯಿಂದ ಉಂಟಾಗುತ್ತದೆ. ಸೂರ್ಯನು ಸ್ವತಃ ಒಬ್ಬ ಗೋವಳನೆಂಬ ಪ್ರತಿಮೆಯು ಈ ಮಂತ್ರ ದಲ್ಲಿದೆ. ಅವನು ರಾತ್ರಿಯ ವೇಳೆ ಅಂತರ್ಧಾನನಾಗಿರುತ್ತಾನೆ. ರಕ್ಷಕನೊಬ್ಬನ ಚಿತ್ರಣವು ಮಂತ್ರದ ಪ್ರಧಾನ ಉದ್ದೇಶ. (೩೧ : ಅಪಶ್ಯಂ ಗೋಪಾಂ ಅನಿಪದ್ಯಮಾನಂ ಆ ಚ ಪರಾ ಚ ಪಥಿಭಿಃ ಚರಂತಂ। ಸಃ ಸಧ್ರೀಚೀಃ ಸಃ ವಿಷೂಚೀಃ ವಸಾನಃ ಆ ವರೀವರ್ತಿ ಭುವನೇಷು ಅಂತಃ ॥). ಇಷ್ಟು ವ್ಯವಸ್ಥಿತವಾದ ವಿಶ್ವವಿದೆಯಲ್ಲಾ, ಅದನ್ನು ಮಾಡಿದವನಿಗೂ ಆ ವ್ಯವಸ್ಥೆಯು ವಿಸ್ಮಯಕಾರಿಯೇ. ಈ ವಿಶ್ವವನ್ನು ನೋಡುವವನಿಗೆ ಸಹ ಅದು ಅದೃಶ್ಯವೆನಿಸಿಬಿಡುತ್ತದೆ. ತಾಯಿಯ ಗರ್ಭದಲ್ಲಿರುವ ಮಗುವಿಗೆ ಸಮಾನ ಆ ನೋಡುಗ. ಹೊರಗೇನೋ ಇದೆಯೆಂಬುದು ತಿಳಿದಿದ್ದರೂ ಅದನ್ನು ಕಾಣಲಾರ. ಜಗದ್ರಕ್ಷಕನಿಗೆ ಸಂತಾನ ಅಪಾರ, ಆದರೆ ಅವನ ತ್ರಾಸಕ್ಕೆ ಮಾತ್ರ ಏನೂ ಪರಿಹಾರವಿಲ್ಲ. ಇದು ಸೂರ್ಯನನ್ನು ಕುರಿತು ಹೇಳಲಾಗಿರುವುದೆಂಬುದು ಸ್ಪಷ್ಟ. "ತ್ರಾಸವು ಅಪಾರ ಸಂತಾನದ ಪರಿಣಾಮವಲ್ಲ, ಬದಲಾಗಿ ಅದು ಅಜ್ಞಾನದ ಫಲ" ಎಂದು ಕುನ್ಹನ್ ರಾಜ ವ್ಯಾಖ್ಯಾನಿಸಿದ್ದಾರೆ. ಆದರೆ ಅಜ್ಞಾನ ಯಾರದು ? ಸೂರ್ಯನದೆ ಅಥವಾ ಗರ್ಭದಲ್ಲಿರುವ ಮಗುವಿನದೆ? ಗರ್ಭಸ್ಥ ಮಗುವಿನ ಜ್ಞಾನ ಮತ್ತು ಅಜ್ಞಾನಗಳ ಬಗ್ಗೆ ಚರ್ಚಿಸುವುದುಂಟೆ ? (೩೨ : ಯಃ ಈಂ ಚಕಾರ ನ ಸಃ ಅಸ್ಯ ವೇದ ಯಃ ಈಂ ದದರ್ಶ ಹಿರುಕ್ ಇತ್ ನು ತಸ್ಮಾತ್। ಸಃ ಮಾತುಃ ಯೋನಾ ಪರಿವೀತಃ ಅಂತಃ ಬಹುಪ್ರಜಾಃ ನಿರ್ಋತಿಂ ಆ ವಿವೇಶ ॥). ಈ ಸೂಕ್ತದ ಅನೇಕ ಮಂತ್ರಗಳಲ್ಲಿರುವಂತೆ ಇಲ್ಲಿಯೂ ಬಿಡಿಸಲಾಗದ ಒಂದು ಒಗಟಿದೆ. ಅದಕ್ಕಿಂತಲೂ ಹೆಚ್ಚು ಹೇಳುವುದು ಅಶಕ್ಯ. ಬಹುಶಃ ಶಿಶುವಿನ ಜನನ ಪ್ರಕ್ರಿಯೆಯ ವಿಸ್ಮಯವು ಮಂತ್ರದ ಇಂಗಿತವಿರಬಹುದೆ ಎಂಬ ಸಂಶಯವೂ ಬರುತ್ತದೆ. ಗರ್ಭದಲ್ಲಿ ಬೆಳೆಯುತ್ತಿರುವ ಮಗುವಿನ ಬಗ್ಗೆ ತಂದೆಗೆ ತಿಳಿಯುವುದಾದರೂ ಎಷ್ಟು?

ಮುಂದಿನ ಮಂತ್ರದ ಒಗಟು ಸಹ ಅಷ್ಟೇ ಅಭೇದ್ಯ. ದ್ಯುಲೋಕ ಮತ್ತು ಭೂಲೋಕಗಳ ನಡುವಿನ ಸಂಬಂಧವು ತಂದೆ ಮತ್ತು ಮಗಳ ಸಂಬಂಧವಿದ್ದಂತೆ. ದ್ಯುಲೋಕದಿಂದ ಸುರಿಯುವ ಮಳೆಯು ಮಗಳಾದ ಭೂಲೋಕವನ್ನು ಪೊರೆಯುತ್ತದೆ. ಎರಡು ಲೋಕಗಳ ನಡುವಣ ಪ್ರದೇಶವು ಮಳೆಗೆ ಆಕರ; ಆ ಅರ್ಥದಲ್ಲಿ ಎಲ್ಲದಕ್ಕೂ ಗರ್ಭವು ಅದೇ. ಈ ಮಂತ್ರವು (೩೩ : ದ್ಯೌಃ ಮೇ ಪಿತಾ ಜನಿತಾ ನಾಭಿಃ ಅತ್ರ ಬಂಧುಃ ಮೇ ಮಾತಾ ಪೃಥಿವೀ ಮಹೀ ಇಯಂ। ಉತ್ತಾನಯೋಃ ಚಮ್ವೋಃ ಯೋನಿಃ ಅಂತಃ ಅತ್ರ ಪಿತಾ ದುಹಿತುಃ ಗರ್ಭಂ ಆ ಅಧಾತ್ ॥) ದೀರ್ಘತಮಸ್‌ನ ಬಾಯಿಂದ ಬಂದದ್ದೆಂದು ಊಹಿಸಬಹುದು. ಅವನು ತನ್ನ ತಂದೆ–ತಾಯಿಯರ ಬಗ್ಗೆ ಹೇಳುತ್ತಿದ್ದಾನೆ; ಅಂದರೆ, ಲೋಕದ ತಂದೆ–ತಾಯಿಯರ ಬಗ್ಗೆ ಎಂದರ್ಥ. ಇಷ್ಟು ಹೇಳಿದ ನಂತರ ಕೂಡಲೆ ಸೂಕ್ತವು ತಿರುವೊಂದನ್ನು ಪಡೆದು ಯಜ್ಞಕ್ರಿಯೆಯ ಸಂದರ್ಭವನ್ನು ವಸ್ತುವನ್ನಾಗಿಸಿಕೊಂಡಿದೆ. ಈವರೆಗಿನ ಒಂದು ರೀತಿಯ ಬೌದ್ಧಿಕ ಜಿಜ್ಞಾಸೆಯಿಂದ ಯಜ್ಞದ ಯಾಂತ್ರಿಕ ಕ್ರಿಯೆಗಳತ್ತ ಜಿಗಿಯುವುದು ಅಚ್ಚರಿಯನ್ನುಂಟು ಮಾಡುತ್ತದೆ. ಮಂತ್ರದಲ್ಲಿ ಒಂದು ಪ್ರಶ್ನೆ ಎತ್ತಲಾಗಿದೆ : ಪೃಥ್ವಿಯ ಅಂತಿಮ ಎಲ್ಲೆ ಎಲ್ಲಿದೆ ? ಪೃಥ್ವಿಯ ಕೇಂದ್ರ ಬಿಂದು ಎಲ್ಲಿದೆ ? ಅಶ್ವದ ಉತ್ಕೃಷ್ಟ ಬೀಜವೆಲ್ಲಿದೆ ? ವಾಕ್ (ಮಾತು) ಎಂಬುದರ ಪರಮಾರ್ಥವೆಲ್ಲಿದೆ ? (೩೪ : ಪೃಚ್ಛಾಮಿ ತ್ವಾ ಪರಂ ಅಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ। ಪೃಚ್ಛಾಮಿ ತ್ವಾ ವೃಷ್ಣಃ ಅಶ್ವಸ್ಯ ರೇತಃ ಪೃಚ್ಛಾಮಿ ವಾಚಃ ಪರಮಂ ವ್ಯೋಮ ॥). ಪ್ರಶ್ನೆಗಳನ್ನು ನೋಡಿದರೆ ಅತ್ಯಂತ ಗಂಭೀರವಾದ ವಿಷಯಗಳ ಬಗೆಗೆ ಕುತೂಹಲಕರ ಸಂಗತಿಗಳ ಪ್ರಸ್ತಾಪಕ್ಕೆ ಉಪೋದ್ಘಾತದಂತೆ ಕಾಣುತ್ತದೆ. 'ಅಶ್ವ' ಎಂಬ ಒಂದು ಸಂಕೇತವನ್ನುಳಿದು ಮಿಕ್ಕವೆಲ್ಲಾ ಸುಲಭವಾಗಿ ತಿಳಿಯುವಂತಹ ಅಂಶಗಳೇ ಆಗಿವೆ. ತತ್ತ್ವಶಾಸ್ತ್ರ ಪ್ರಮೇಯವೊಂದನ್ನು ಋಗ್ವೇದದ ಈ ಸೂಕ್ತದಲ್ಲಿ ಎತ್ತಲಾಗಿದೆಯೆಂಬ ಭಾವನೆ ಸಹ ಉಂಟಾಗಬಹುದು. ಈ ಪ್ರಶ್ನೆಗಳಿಗೆ ಮುಂದಿನ ಮಂತ್ರದಲ್ಲಿ ನೀಡಲಾಗಿರುವ ಉತ್ತರಗಳನ್ನು ನೋಡಿದರೆ ಪ್ರಶ್ನೆಗಳ ಗಾಂಭೀರ್ಯವು ಮೊಟಕುಗೊಳ್ಳುತ್ತದೆ. ಏಕೆಂದರೆ ಎಲ್ಲ ಉತ್ತರಗಳೂ ಯಜ್ಞಕರ್ಮಕ್ಕೆ ಸಂಬಂಧಿಸಿರುವಂಥವು. ಯಾವ ದಾರ್ಶನಿಕ ನಿಲುವೂ ಇಲ್ಲದಂತಹ ಉತ್ತರಗಳವು. 'ಅಶ್ವ' ಎಂಬುದು ದ್ಯುಲೋಕದ ಸಂಕೇತವೇ ಆಗಿದ್ದರೂ ಅದರ ಅರ್ಥವ್ಯಾಪ್ತಿಯು ಯಜ್ಞದ ಸೀಮಿತ ಪ್ರದೇಶವನ್ನಷ್ಟೇ ಒಳಗೊಳ್ಳುತ್ತದೆ. ಯಜ್ಞದ ಶ್ರೇಷ್ಠತೆ ಮತ್ತು ಮಹತ್ವವನ್ನು ಸಾರುವ ಉದ್ದೇಶವಷ್ಟೇ ಪ್ರಶ್ನೆ ಮತ್ತು ಉತ್ತರ ಇರುವ ಎರಡು ಮಂತ್ರಗಳ ಸಾರ. ಉತ್ತರಗಳೇನು ? ಯಜ್ಞವೇದಿಯು ಪೃಥ್ವಿಯ ಅಂತಿಮ ಎಲ್ಲೆ. ಅದು ದ್ಯುಲೋಕಕ್ಕೆ ಹತ್ತಿರವಾದುದು. ಪೃಥ್ವಿಯು ಮುಗಿದು ದ್ಯುಲೋಕ ಆರಂಭ ವಾಗುವುದು ಯಜ್ಞವೇದಿಯಲ್ಲಿ, ಏಕೆಂದರೆ ಹವಿಸ್ಸು ಸ್ವೀಕರಿಸಲು ದೇವತೆಗಳು ಬರುವುದು ಅಲ್ಲಿಗೆ. ಸಹಜವಾಗಿಯೇ ಎರಡನೆಯ ಪ್ರಶ್ನೆಗೆ ಉತ್ತರವು 'ಈ ಯಜ್ಞವೇ ಪೃಥ್ವಿಯ ಕೇಂದ್ರ ಬಿಂದು' ಎಂದು. ಅಶ್ವ, ಎಂದರೆ ದ್ಯುಲೋಕ. ಅದರ ಉತ್ಕೃಷ್ಟ ರೇತಸ್ಸೆಂದರೆ ಸೋಮ ರಸ. ಮತ್ತು, ವಾಕ್ ಎಂಬುದರ ಪರಮ ಪದವು 'ಬ್ರಹ್ಮನ್'ನಲ್ಲಿದೆ. ಈ 'ಬ್ರಹ್ಮನ್' ಬೇರೆ ಮತ್ತು ಉಪನಿಷತ್ತುಗಳ ಬ್ರಹ್ಮನ್ ಬೇರೆ. ಯಜ್ಞದ ಸಂದರ್ಭದಲ್ಲಿ ಬ್ರಹ್ಮನ್ ಎಂಬುವವನು ಒಬ್ಬ ಅಗ್ರ ಪುರೋಹಿತ, ಅಷ್ಟೆ. ಯಜ್ಞಕ್ರಿಯೆಯಲ್ಲಿ ಅವನಿಗೆ ಒಂದು ರೀತಿಯಲ್ಲಿ ಅಧ್ಯಕ್ಷ ಸ್ಥಾನವಿದೆ. ಒಟ್ಟಿನಲ್ಲಿ, ಎರಡೂ ಮಂತ್ರಗಳ ಮಥಿತಾರ್ಥವು ಯಜ್ಞದ ಮಹತ್ವವನ್ನು ಘೋಷಿಸುವುದರಲ್ಲಿ ಪರ್ಯವಸಾನವಾಗುತ್ತದೆ. (೩೫ : ಇಯಂ ವೇದಿಃ ಪರೋ ಅಂತಃ ಪೃಥಿವ್ಯಾಃ ಅಯಂ ಯಜ್ಞಃ ಭುವನಸ್ಯ ನಾಭಿಃ। ಅಯಂ ಸೋಮಃ ವೃಷ್ಣಃ ಅಶ್ವಸ್ಯ ರೇತಃ ಬ್ರಹ್ಮಾ ಅಯಂ ವಾಚಃ ಪರಮಂ ವ್ಯೋಮ ॥). ಪಶುಸಂಗೋಪನಾ ಹಂತದ ಒಂದು ಸೊಬಗಿನ ಚಿತ್ರವನ್ನು ಕಟ್ಟಿಕೊಟ್ಟ ತರುವಾಯ, ಯಾಂತ್ರಿಕ ಕ್ರಿಯೆಯಾದ ಯಜ್ಞಕ್ಕೆ ಅತ್ಯಂತ ಮಹತ್ವದ ಸ್ಥಾನವನ್ನು ಕೊಡುವುದು, ಅದು ವಿಶ್ವದ ಕೇಂದ್ರವೆಂದು ಬಗೆಯುವುದು, 'ವಾಕ್' ಎಂಬುದರ ಪರಮ ಅರ್ಥವು ಬ್ರಹ್ಮನೆಂಬ ಪುರೋಹಿತನು ಉಚ್ಚರಿಸುವ ಮಂತ್ರವೆಂದು ಘೋಷಿಸುವುದು ಪರಾಕಾಷ್ಠೆಯ ತಿರುಗುಮುರುಗು ರೂಪ ಎನಿಸಿಬಿಡುತ್ತದೆ. ಪಶುಸಂಗೋಪನಾ ಹಂತದ ಜೀವನಕ್ರಮವು ಯಥಾವತ್ತಾಗಿ ಪ್ರತಿಫಲಿತವಾಗುವಾಗ ಋಗ್ವೇದದಲ್ಲಿ ಯಾಂತ್ರಿಕ ಯಜ್ಞಕ್ಕೆ ಮಹತ್ವದ ಸ್ಥಾನ ಇರುವುದಿಲ್ಲ. ಋಗ್ವೇದದ ಕೊನೆಯ ಹಂತದ ವೇಳೆಗೆ ಯಜ್ಞವು ಮಹತ್ತರ ಪ್ರಾಧಾನ್ಯ ಪಡೆದಿರುತ್ತದೆ, ವರ್ಣ ವಿಭಜನೆಯು ಕಟ್ಟುನಿಟ್ಟಾಗಿ ಜಾರಿಯಲ್ಲಿ ಇರುತ್ತದೆ.

'ಅಸ್ಯ ವಾಮಸ್ಯ' ಸೂಕ್ತದ ವಿಶೇಷವೇನೆಂದರೆ ಪ್ರಾಚೀನ ವೈದಿಕ ಜೀವನದ ವಿವಿಧ ಹಂತಗಳು ಒಂದೇ ಕಾಲಘಟ್ಟದ ಚಿಹ್ನೆಗಳೆಂಬಂತೆ ಅದರಲ್ಲಿ ಚಿತ್ರಿತವಾಗಿವೆ. ಸೂಕ್ತದ ಇನ್ನುಳಿದ ಭಾಗವೆಲ್ಲಾ (ಮಂತ್ರಗಳು ೩೬–೫೨) ಯಜ್ಞದ ಪ್ರಾಶಸ್ತ್ಯ ಮತ್ತು ವಿವರಣೆಗಳಿಗೆ ಮೀಸಲಾಗಿದೆ. ಈ ಭಾಗದ ಕೆಲವು ಮಂತ್ರಗಳನ್ನು ನಿಷ್ಕೃಷ್ಟವಾಗಿ ಅರ್ಥೈಸುವುದು ಸಹ ಕಠಿಣವೇ ಆಗಿದೆ. ಉದಾಹರಣೆಗೆ ೩೬ನೆಯ ಮಂತ್ರವನ್ನು ನೋಡಬಹುದು. ಸ್ಥೂಲವಾಗಿ ಅದರ ಅರ್ಥ ಹೀಗಿದೆ: "ಇನ್ನೂ ಪೂರ್ತಿ ಫಲರೂಪವನ್ನು ತಾಳಿರದ ಏಳು ರೇತಸ್ಸುಗಳು ಭುವನದ ಸಾರ; ಅವುಗಳ ಕ್ರಿಯೆಯು ವಿಷ್ಣುವಿನ ಆಣತಿಯಂತೆ ಜರುಗುತ್ತದೆ. ಧೀತಿ (ಜಾಣತನ) ಮತ್ತು ಮನಸ್ಸು (ಚಿಂತನೆ) ಸುಪ್ರಜ್ಞೆಯನ್ನು ಮೂಡಿಸಿ ಸರ್ವತ್ರ ನಮ್ಮನ್ನು ಆವರಿಸಿವೆ." (೩೬: ಸಪ್ತ ಅರ್ಧಗರ್ಭಾಃ ಭುವನಸ್ಯ ರೇತಃ ವಿಷ್ಣೋಃ ತಿಷ್ಠಂತಿ ಪ್ರದಿಶಾ ವಿಧರ್ಮಣಿ। ತೇ ಧೀತಿಭಿಃ ಮನಸಾ ತೇ ವಿಪಶ್ಚಿತಃ ಪರಿಭುವಃ ಪರಿ ಭವಂತಿ ವಿಶ್ವತಃ ॥). ಇದನ್ನು ಅರ್ಥೈಸಲು ಯತ್ನಿಸಿ "ಇಡೀ ವೈದಿಕ ಸಾಹಿತ್ಯದಲ್ಲಿ ಅತಿಕ್ಲಿಷ್ಟವಾದ ಮಂತ್ರ ಇದು" ಎಂದು ಲುಡ್ವಿಗ್ ಕೈಚೆಲ್ಲಿ ಬಿಟ್ಟಿದ್ದಾನೆ. 'ಏಳು' ಎಂದಿರುವುದರಿಂದ ರಶ್ಮಿಗಳನ್ನು ಊಹಿಸಿಕೊಂಡು ವಿಷ್ಣುವೆಂದರೆ ಸೂರ್ಯನೆಂದು ಸಾಯಣ ವ್ಯಾಖ್ಯಾನಿಸಿದ್ದಾನೆ. ಆದರೆ ರಶ್ಮಿಗಳು 'ಇನ್ನೂ ಪೂರ್ತಿ ಫಲರೂಪವನ್ನು ತಾಳಿಲ್ಲ' ಎಂದರೇನರ್ಥ? 'ಆ ರಶ್ಮಿಗಳು ನಮ್ಮನ್ನಾವರಿಸಿ ಬೃಹತ್ತಾದ ಪ್ರಜ್ಞೆಯನ್ನು ಮೂಡಿಸುತ್ತವೆ' ಎಂಬುದರ ತಾತ್ಪರ್ಯವೇನು? ಯಜ್ಞಕ್ಕೆ ಸಂಬಂಧಿಸಿದಂತೆ ಅದನ್ನು ವ್ಯಾಖ್ಯಾನಿಸುವುದು ಹೇಗೆ? ಕುನ್ಹನ್ ರಾಜ ಕೂಡ ಸಾಕಷ್ಟು ತಿಣುಕಿ ಸಂಗತವಾದ ಅರ್ಥವನ್ನು ತಿಳಿಯಲಾಗದೆ ಸೊರಗಿದ್ದಾರೆ. ಗರ್ಭವೆಂದರೆ ಅರ್ಥವಾಗುತ್ತದೆ, ಆದರೆ 'ಅರ್ಧಗರ್ಭ' ಎಂದರೇನು ಎಂಬ ಪ್ರಶ್ನೆಯನ್ನವರು ಎತ್ತಿದ್ದಾರೆ. "ಮೌನಸ್ತು ತತ್ರ ವ್ಯಾಖ್ಯಾನಂ" ಎಂಬ ಶಂಕರನ ವಾಕ್ಯವೊಂದನ್ನು ಸ್ಮರಿಸಿ ತೆಪ್ಪಗಾಗಬಹುದು, ಅಷ್ಟೆ. ಆದರೆ ಈ ವಾಕ್ಯ ಬರುವ ಪದ್ಯದಲ್ಲಿ ಶಂಕರನು ಹೇಳುವುದು 'ಮೌನ ಉತ್ತರದಿಂದ ಶಿಷ್ಯರ ಸಂಶಯಗಳು ಪರಿಹಾರವಾದವು' ಎಂದು. ನಮಗೆ ಅಂತಹ ಪರಿಹಾರ ದೊರೆಯುತ್ತಿಲ್ಲ. ಸಂಕೀರ್ಣವಾಗಿ ಬೆಳೆದ ಯಜ್ಞವು ಕ್ರಮೇಣ ಉಚ್ಚವರ್ಣದ ಪರಮಾಧಿಕಾರಕ್ಕೆ ಸಾಧನವಾಯಿತು. ಇಲ್ಲಿ ಅದನ್ನು ವಿಸ್ತರಿಸುವ ಸಂದರ್ಭವಿಲ್ಲ. ಆದರೆ ಯಜ್ಞದಲ್ಲಿ ಅತಿಸೂಕ್ಷ್ಮವಾದ ನಿಗೂಢತೆಯೊಂದನ್ನು ಹುಡುಕುವ ಪ್ರವೃತ್ತಿಯು ಋಗ್ವೇದದ ಈ ಸೂಕ್ತದ ಕಾಲಕ್ಕಾಗಲೆ ಆರಂಭವಾಗಿದೆಯೆಂಬುದು ಗಮನಾರ್ಹ.




ವಿಷಯ ಪ್ರತಿಪಾದನೆಯ ದೃಷ್ಟಿಯಿಂದ ನೋಡಿದರೆ ಈ ಸೂಕ್ತವು ಅತ್ತಿಂದಿತ್ತ ಮತ್ತು ಇತ್ತಿಂದತ್ತ ಹೊರಳಾಡುತ್ತಲೇ ಸಾಗಿದೆ. ಯಜ್ಞದ ಮಹತ್ವವನ್ನು ಸಾರಿಹೇಳಿದ ಮುಂದಿನ ಮಂತ್ರದಲ್ಲಿ (೩೭: ನ ವಿ ಜಾನಾಮಿ ಯದಿವ ಇದಂ ಅಸ್ಮಿ ನಿಣ್ಯಃ ಸಂನದ್ಧಃ ಮನಸಾ ಚರಾಮಿ। ಯದಾ ಮಾ ಆ ಅಗನ್ ಪ್ರಥಮಜಾಃ ಋತಸ್ಯ ಆತ್ ಇತ್ ವಾಚಃ ಅಶ್ನುವೇ ಭಾಗಂ ಅಸ್ಯಾಃ ॥) ತನ್ನನ್ನು ತಾನು ತಿಳಿಯಲಾರದ ಸ್ಥಿತಿಯಲ್ಲಿರುವುದಾಗಿ ಕವಿಯು ಹೇಳಿಕೊಳ್ಳುತ್ತಾನೆ. ಎತ್ತಣಿಂದೆತ್ತ ಸಂಬಂಧವಯ್ಯಾ ಎಂದೆನಿಸಬಹುದು. ನಾವು ಈಗಾಗಲೆ ತಿಳಿದಿರುವಂತೆ ವಿಶ್ವದ ನಿಯಮಿತ ಚಲನೆಯನ್ನು 'ಋತ'ದ ಪರಿಕಲ್ಪನೆಯು ಪ್ರತಿನಿಧಿಸುತ್ತದೆ. ಅಲ್ಲಿ ನಿಯಮವಿರುವಂತೆ ಯಜ್ಞದಲ್ಲಿಯೂ ನಿರ್ದಿಷ್ಟ ನಿಯಮಗಳನ್ನು ಹೇರಿರುವುದರಿಂದ ಅದನ್ನೂ 'ಋತ' ಎನ್ನುವ ಪದ್ಧತಿಯು ಋಗ್ವೇದದ ಕಡೆಯ ಭಾಗಗಳಲ್ಲಿದೆ. ದಿಗ್ಭ್ರಾಂತನೋ ಎಂಬಂತೆ ಅಲೆದಾಡುವ ತಾನು ಪ್ರಥಮದಲ್ಲೇ ಜನಿಸಿದ ಋತವನ್ನು ಎದುರಾದಾಗ 'ವಾಕ್' (ಮಾತು, ಕವಿತ್ವದ ಉಕ್ತಿ) ಎಂಬುದರ ಒಂದು ಭಾಗವನ್ನು ಪಡೆದುಕೊಂಡುದಾಗಿ ಕವಿಯು ಹೇಳಿದ್ದಾನೆ. "ಪ್ರಥಮದಲ್ಲೇ ಜನಿಸಿದ" ಋತ ಯಾವುದು? ಇಲ್ಲಿ ಪ್ರಕೃತಿ ನಿಯಮವನ್ನು ಹಾಗೆ ಉದ್ದೇಶಿಸಿ ಹೇಳಿಲ್ಲ, ಬದಲಾಗಿ ಸೋಮವನ್ನು ಆ ಸ್ಥಾನದಲ್ಲಿರಿಸಲಾಗಿದೆ. ಕುನ್ಹನ್ ರಾಜ ವಿಶ್ಲೇಷಿಸುವಂತೆ 'ಋತ'ವು ಚಲನೆಯನ್ನು ಮತ್ತು 'ಸತ್ಯ'ವು ಅಸ್ತಿತ್ವದಲ್ಲಿ ಸ್ಥಿರವಾಗಿರುವುದನ್ನು ಸೂಚಿಸುತ್ತವೆ. ತಾನೇನೆಂಬುದನ್ನು ತಿಳಿಯದ ಕವಿಗೆ ಒಂಟಿತನವು ಬಾಧಿಸುತ್ತಿದೆ, ಅವನು ಸುಖಾಸುಮ್ಮನೆ ಅಲೆದಾಡುತ್ತಿದ್ದಾನೆ. ವಿಶ್ವದ ವಿಸ್ಮಯವು ಅವನನ್ನು ದಂಗುಬಡಿಸಿದೆಯೆಂದು ಇದರರ್ಥವೆ? 'ವಾಕ್' ಎಂಬುದರ ನಿಜರೂಪವು ಅರಿವಾದಾಗ ಬಹುಶಃ ಇದಕ್ಕೆ ಉತ್ತರ ಅವನಿಗೆ ದೊರೆಯುತ್ತದೆಂದು ಕವಿಯು ಭಾವಿಸಿಕೊಳ್ಳುತ್ತಾನೆ. ಕವಿತ್ವ ದರ್ಶನದಿಂದ ಉಂಟಾದ ಪರಿಣಾಮವನ್ನು ಪ್ರಸ್ತುತ ಮಂತ್ರ ಮತ್ತು ಅದರ ಮುಂದಿನದು (೩೮) ದಾಖಲಿಸುತ್ತವೆ ಎಂದು ತೋರುತ್ತದೆ. ಪ್ರಾಜ್ಞ ಮತ್ತು ಅಪ್ರಾಜ್ಞ ಹೇಗೆ ಬೇರೆ ಬೇರೆ ದಿಕ್ಕುಗಳಿಗೆ ಮುಖ ಮಾಡುತ್ತಾರೆಂಬ ಭಾವವು ಇಲ್ಲಿ ಪ್ರಕಟವಾಗಿದೆ (೩೮: ಅಪಾಙ್ ಪ್ರಾಙ್ ಏತಿ ಸ್ವಧಯಾ ಗೃಭೀತಃ ಅಮರ್ತ್ಯಃ ಮರ್ತ್ಯೇನ ಸಯೋನಿಃ। ತಾ ಶಶ್ವಂತಾ ವಿಷೂ ಚಿನಾ ವಿಯಂತಾ ನಿ ಅನ್ಯಂ ಚಿಕ್ಯುಃ ನ ನಿ ಚಿಕ್ಯುಃ ಅನ್ಯಂ ॥). ಒಬ್ಬನು ಊರ್ಧ್ವಮುಖಿಯಾದರೆ ಇನ್ನೊಬ್ಬ ಅಧೋಮುಖಿ. ಒಂದು ಹಂತದವರೆಗೆ ಅಜ್ಞಾನಿಯಾಗಿದ್ದವನು ಮುಂದಿನ ಹಂತದಲ್ಲಿ ಜ್ಞಾನದೆಡೆಗೆ ಸಾಗುವುದು ಅಶಕ್ಯವಲ್ಲ. "ಸಾಮಾನ್ಯರು ಅಜ್ಞಾನಿಯನ್ನು ಅರ್ಥಮಾಡಿಕೊಳ್ಳುವಷ್ಟು ಜ್ಞಾನಿಯನ್ನು ಅರ್ಥ ಮಾಡಿಕೊಳ್ಳಲಾರರು" ಎಂಬ ಭಾವವು ಇಲ್ಲಿದೆಯೆಂದು ಕುನ್ಹನ್ ರಾಜ ಬಗೆಯುತ್ತಾರೆ. ಅಂದರೆ, ಸತ್ಯದ ಹುಡುಕಾಟದ ಧ್ವನಿಯನ್ನವರು ಈ ಮಂತ್ರದಲ್ಲಿ ಕಾಣುತ್ತಾರೆ. ಇನ್ನೊಂದರ್ಥವೂ ಸಾಧ್ಯವಿದೆ: ಸೂರ್ಯನು ಪೂರ್ವದಿಂದ ಪಶ್ಚಿಮಕ್ಕೆ ಕ್ರಮಿಸುವುದು ಸರ್ವವೇದ್ಯ, ಆದರೆ ಪಶ್ಚಿಮದಿಂದ ಪೂರ್ವವನ್ನು ತಲುಪುವುದು ಹೇಗೆಂದು ತಿಳಿಯದು.

ಬೇರೊಂದು ಎಳೆಯನ್ನು ಮುಂದಿನ ಮಂತ್ರದಲ್ಲಿ ಬಿಡಿಸಲಾಗಿದೆ. (೩೯: ಋಚಃ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾಃ ಅಧಿ ವಿಶ್ವೇ ನಿಷೇದುಃ। ಯಃ ತತ್ ನ ವೇದ ಕಿಂ ಋಚಾ ಕರಿಷ್ಯತಿ ಯಃ ಇತ್ ತತ್ ವಿದುಃ ತೇ ಇಮೇ ಸಂ ಆಸತೇ ॥). ಸಾಯಣನು ಅದನ್ನು ಇಡಿಯಾಗಿ ವೇದಾಂತ ದರ್ಶನದ ಅಭಿವ್ಯಕ್ತಿಯೆಂಬಂತೆ ವ್ಯಾಖ್ಯಾನಿಸಿದ್ದಾನೆ, ಆದರೆ ಅದು ಅಸಂಗತ. ಏಕೆಂದರೆ ಋಗ್ವೇದದ ದೃಷ್ಟಿಯು ವೇದಾಂತದ ದೃಷ್ಟಿಯಲ್ಲ. ಆ ಬೆಳವಣಿಗೆಗೆ ಇನ್ನೂ ಕೆಲವು ಶತಮಾನಗಳ ಕಾಲ ಕಾಯುವ ಅಗತ್ಯವಿತ್ತು. ಇಲ್ಲಿ ಉಕ್ತವಾಗಿರುವುದು ನೈಜ ಕಾವ್ಯದ ಉದ್ದೇಶ ಮತ್ತು ಸಾರ ಏನೆಂಬುದರ ಬಗೆಗೆ. ಅತೀಂದ್ರಿಯವೆಂಬ ಶಬ್ದವನ್ನು ಮಂತ್ರವು ಬಳಸಿಲ್ಲ, ಆದರೆ ಅಂತಹ ದೈವೀ ದೃಷ್ಟಿಯು ಕಾವ್ಯದ ಹೂರಣವೆಂಬ ಆಶಯವು ಇಲ್ಲಿ ವ್ಯಕ್ತವಾಗಿದೆ. ಅದನ್ನು ಪ್ರತಿಪಾದಿಸಲು ಮಂತ್ರವು ತನ್ನದೇ ಹಾದಿ ಮತ್ತು ತಂತ್ರವನ್ನು ರೂಪಿಸಿಕೊಂಡಿದೆ. ಒಂದು ಗಾನದಲ್ಲಿ ಅನೇಕ ಅಕ್ಷರಗಳು ಮತ್ತು ಸ್ವರಗಳು ಇರುತ್ತವೆ. ಗಾನದ ಅಂತಿಮ ಅರ್ಥವು ತಿಳಿಯದಿದ್ದಾಗ ಆ ಪ್ರತ್ಯೇಕ ಸ್ವರಗಳ ಅರ್ಥ ಸಹ ವೇದ್ಯವಾಗುವುದಿಲ್ಲ. ಅಕ್ಷರ ಅಥವಾ ಸ್ವರ ಮತ್ತು ಅದರರ್ಥ ಸಾಮಾನ್ಯವಾಗಿ ಎಲ್ಲರಿಗೂ ತಿಳಿಯುವಂಥದು. ಆದರೆ ಅವೇ ಅಕ್ಷರಗಳ ಅಂತರಾರ್ಥವೊಂದಿದ್ದರೆ ಅದನ್ನು ಗ್ರಹಿಸುವುದು ಒಂದು ವಿಶೇಷ. ದೇವತೆಗಳ ಆವಾಸಸ್ಥಾನವೆಂದರೆ ಈ ಅಕ್ಷರಗಳು. ಆದರೆ ಸಾಮಾನ್ಯ ಜನ ಅದನ್ನು ತಿಳಿಯಲಾರರು, ತಿಳಿದಿಲ್ಲ. ಅದನ್ನು ತಿಳಿದವರೇ ಧನ್ಯರು, ಏಕೆಂದರೆ ಅವರು ದೇವತೆಗಳೊಡನೆ ಸರಸ ಸಂಭಾಷಣೆಯಲ್ಲಿ ತೊಡಗಲು ಸಹ ಸಮರ್ಥರು. ಪಾಣಿನಿಯ ಅಷ್ಟಾಧ್ಯಾಯಿಗೆ ಪತಂಜಲಿ ಮಹಾಭಾಷ್ಯವನ್ನು ರಚಿಸಿದ್ದಾನೆ. ಶಬ್ದಗಳ ಸುಪ್ರಯೋಗದ ಮಹತ್ವವನ್ನು ಎತ್ತಿಹಿಡಿಯುತ್ತಾ ಅವನು ಹೇಳುತ್ತಾನೆ, "ಒಂದು ಶಬ್ದವನ್ನು ಒಳ್ಳೆಯ ರೀತಿಯಲ್ಲಿ ಪ್ರಯೋಗಿಸಿ ಅದನ್ನು ಚೆನ್ನಾಗಿ ತಿಳಿದರೆ ಸ್ವರ್ಗಲೋಕದಲ್ಲಿ ಕೂಡ ಇಷ್ಟಾರ್ಥಗಳು ನೆರವೇರುತ್ತವೆ" ಎಂದು (ಏಕಃ ಶಬ್ದಃ ಸುಪ್ರಯುಕ್ತಃ ಸಮ್ಯಕ್ ಜ್ಞಾತಃ ಸ್ವರ್ಗೇ ಲೋಕೇ ಚ ಕಾಮದುಗ್ಭವತಿ). ಕವಿತೆಯಲ್ಲಿ ಒಂದೊಂದು ಶಬ್ದದ ಪ್ರಯೋಗಕ್ಕೂ ನಿರ್ದಿಷ್ಟ ಕಾರಣವಿದೆ; ಹಾಗೆ ಪ್ರಯೋಗ ಮಾಡದಿದ್ದಾಗ ಕಾವ್ಯವು ಪೇಲವ ವಾಗುತ್ತದೆ. ಇದನ್ನೆಲ್ಲಾ ಅಪ್ರಸ್ತುತಗೊಳಿಸಿ "ಈ ಮಂತ್ರದಲ್ಲಿ ಪ್ರಣವದ (ಓಂ) ಮಹತ್ವವನ್ನು ಸಾರಲಾಗಿದೆ" ಎಂದು ವ್ಯಾಖ್ಯಾನಿಸಿರುವವರಿದ್ದಾರೆ. ಅವರಿಗೆ ಅದೇ ಗೀಳು. ಯಾವುದೋ ನಂತರದ ಕಾಲದ ಒಂದು ಪ್ರತಿಪಾದನೆಯನ್ನು ಪ್ರಾಚೀನ ಗ್ರಂಥದ ಮೇಲೆ ಹೇರಹೊರಡುವುದು ಕುಚೋದ್ಯ ಮತ್ತು ಅಪ್ರಾಸಂಗಿಕ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

ಸಿ. ಆರ್. ಕೃಷ್ಣರಾವ್

ಸ್ವಾತಂತ್ರ್ಯಾನಂತರದ ಭಾರತ – ೧೭

# ಪಾರ್ಲಿಮೆಂಟ್ ಮೇಲೆ ಭಯೋತ್ಪಾದಕರ ದಾಳಿ – ಎನ್.ಡಿ.ಎ. ವಿದೇಶಾಂಗ ನೀತಿ

**ಪಾ**ರ್ಲಿಮೆಂಟಿನ ಮೇಲೆ ನಡೆದ ದಾಳಿ ನೇರವಾಗಿ ಭಾರತದ ಪ್ರಜಾಪ್ರಭುತ್ವದ ಮೇಲೆ ನಡೆದ ದಾಳಿಯಾಗಿತ್ತು. ಇದು ಪಾಕಿಸ್ತಾನಿ ಪ್ರೇರಿತ ಎನ್ನುವುದರಲ್ಲಿ ಸಂಶಯವಿರಲಿಲ್ಲ. ಲಷ್ಕರಿ ತಾಯ್ಬಾ ಹಾಗೂ ಜೈಷೆ ಮಹಮ್ಮದ್ ಎಂಬ ಭಯೋತ್ಪಾದನ ತಂಡ ಈ ದಾಳಿಯ ಹಿಂದೆ ಇದ್ದುವು. ಅದನ್ನು ಆ ಸಂಘಟನೆಗಳೇ ಬಹಿರಂಗವಾಗಿ ಪ್ರಕಟಿಸಿದ್ದುವು. ಮುಷರಫ್ ಸರಕಾರ ಈ ದಾಳಿಯನ್ನು ಖಂಡಿಸುವ ಸೌಜನ್ಯವನ್ನೂ ತೋರಲಿಲ್ಲ. ದಾಳಿಯಲ್ಲಿ ಭಾಗವಹಿಸಿದ್ದ ಐವರೂ ಹತರಾದರು. ಆರು ಮಂದಿ ಭಾರತೀಯ ಪೊಲೀಸರು. ಇಬ್ಬರು ಪಾರ್ಲಿಮೆಂಟ್ ಭದ್ರತಾದಳ ದವರು ಸೇರಿ ಒಟ್ಟು ೧೪ ಮಂದಿ ಅಸುನೀಗಿದರು. ದಾಳಿಕೋರರು ಎಕೆ ೪೭ ಗನ್‌ಗಳು, ಗ್ರೆನೇಡ್‌ಗಳು ಮುಂತಾದವುಗಳಿಂದ ಸಜ್ಜಿತರಾಗಿದ್ದರು, ದಾಳಿ ನಡೆದಾಗ ಪಾರ್ಲಿಮೆಂಟ್ ಭವನದಲ್ಲಿ ಸುಮಾರು ಒಂದು ನೂರು ಮಂದಿ ಕಾರ್ಯನಿರತರಾಗಿದ್ದರು. ಈ ದಾಳಿ ಭಯೋತ್ಪಾದಕರು ಅಮೆರಿಕದ ನ್ಯೂಯಾರ್ಕ್‌ನ ಕಟ್ಟಡಗಳ ಮೇಲೆ ನಡೆಸಿದ ದಾಳಿಯ ಎರಡು ತಿಂಗಳ ನಂತರವಷ್ಟೆ ನಡೆದಿತ್ತು. ಭಾರತ ಸರಕಾರ ಸಾಕಷ್ಟು ಪುರಾವೆಗಳನ್ನು ಒದಗಿಸಿದರೂ ಪಾಕಿಸ್ತಾನ ಅದನ್ನು ಕಡೆಗಣಿಸಿತು. ಜಗತ್ತಿನಾದ್ಯಂತ ಪಾರ್ಲಿಮೆಂಟ್ ಮೇಲೆ ನಡೆದ ದಾಳಿಗೆ ಖಂಡನೆ ಪ್ರಕಟವಾಯಿತು. ಈ ಪ್ರಕರಣದ ಪರಿಣಾಮವಾಗಿ ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಸಂಬಂಧಗಳು ಮತ್ತಷ್ಟು ಉಲ್ಬಣಿಸಿದುವು. ೨೦೦೨ರ ಸೆಪ್ಟೆಂಬರ್‌ನಲ್ಲಿ ಜಮ್ಮು–ಕಾಶ್ಮೀರದಲ್ಲಿ ನಡೆದ ಚುನಾವಣೆಗಳು ಭಾರತದ ನಿಲುವನ್ನು ಇನ್ನಷ್ಟು ದೃಢಗೊಳಿಸಿದುವು. ಭಾರತದ ಚುನಾವಣಾ ಆಯೋಗ ನಡೆಸಿದ ಈ ಚುನಾವಣೆಗಳು ಮುಕ್ತವಾಗಿದ್ದುವಲ್ಲದೆ, ಹಲವು ದೇಶಗಳ ರಾಯಭಾರಿ ಕಚೇರಿಯ ಅಧಿಕಾರಿಗಳು ಹಾಗೂ ಜಾಗತಿಕ ಮಾಧ್ಯಮದ ಪ್ರತಿನಿಧಿಗಳ ಸಮ್ಮುಖದಲ್ಲೇ ನಡೆಯಿತು. ೨೦೦೪ರ ಜನವರಿಯಲ್ಲಿ ಪಾಕಿಸ್ತಾನದ ರಾಜಧಾನಿ ಇಸ್ಲಾಮಾಬಾದ್‌ನಲ್ಲಿ ನಡೆದ 'ಸಾರ್ಕ್' ಶೃಂಗಸಭೆಯ ಸಮಯದಲ್ಲಿ ಪ್ರಧಾನಿ ವಾಜಪೇಯಿ ಮತ್ತು ಜನರಲ್ ಮುಷರಫ್ ಪರಸ್ಪರ ಭೇಟಿಯಾದಾಗ್ಯೂ ಸಂಬಂಧಗಳು ಸುಧಾರಿಸಲಿಲ್ಲ.

ಅನಂತರದ ಕಾಲದಲ್ಲಿ ಭಾರತ–ಪಾಕಿಸ್ತಾನಗಳ ಮಧ್ಯೆ ವಿಶ್ವಾಸ ವರ್ಧಿಸಲು ಹಲವು ಕ್ರಮಗಳನ್ನು ಕೈಗೊಂಡಾಗ್ಯೂ, ಮುಖ್ಯವಾಗಿ ಶ್ರೀನಗರದಿಂದ ಮುಜಫರ್ ನಗರ (ಇದು ಪಾಕ್ ಆಕ್ರಮಿತ ಪ್ರದೇಶ ದಲ್ಲಿದೆ)ದವರೆಗೆ ಬಸ್ ಸಂಚಾರ ಪ್ರಾರಂಭಿಸಿದರೂ, ಪಾಕಿಸ್ತಾನಿ ಪ್ರೇರಿತ ಭಯೋತ್ಪಾದನಾ ಚರ್ಯೆಗಳು ಮಾತ್ರ ಮುಂದುವರಿದುವು. ದೆಹಲಿ, ವಾರಾಣಸಿ, ಮುಂಬೈ, ಬೆಂಗಳೂರು ನಗರಗಳಲ್ಲಿ ನಡೆದ ದಾಳಿಗಳೂ ಅದಕ್ಕೆ ಸಾಕ್ಷಿ. ಕಾಶ್ಮೀರದಲ್ಲಂತೂ ದಾಳಿ ನಿರಂತರವಾಗಿ ನಡೆದಿತ್ತು. ಇಂಥ ದಾಳಿಗಳಲ್ಲಿ ಸಾವಿಗೀಡಾದ ಅಮಾಯಕರು ನೂರಾರು ಮಂದಿ. ಇಂದಿಗೂ ಕೂಡ ಭಾರತ–ಪಾಕಿಸ್ತಾನ ಸಂಬಂಧಗಳು ಇರಸು ಮುರುಸಾಗಿಯೇ ಇದೆ.

ವಾಜಪೇಯಿ ನೇತೃತ್ವದ ಬಲಪಂಥೀಯ ಮತೀಯವಾದಿ ಎನ್‌ಡಿಎ ಸರಕಾರದ ವಿದೇಶಾಂಗ





**ವಾಜಪೇಯಿ-ಕ್ಲಿಂಟನ್**

ನೀತಿ ನಿರೀಕ್ಷಿತವಾಗಿಯೇ ಅಮೆರಿಕದ ಪರವಾಗಿಯೇ ಇತ್ತು. ಭಾರತ ಪೋಕ್ರಾನಿನಲ್ಲಿ ಪರಮಾಣು ಅಸ್ತ್ರ ಪ್ರಯೋಗ ನಡೆಸಿದಾಗ ಅಮೆರಿಕ ಹಲವು ಬಗೆಯ ಆರ್ಥಿಕ ದಿಗ್ಬಂಧನ ಹೇರಿತ್ತು. ನ್ಯೂಯಾರ್ಕ್‌ನ ಮೇಲೆ ಭಯೋತ್ಪಾದನಾ ದಾಳಿಯ ನಂತರದ ಬದಲಾದ ಪರಿಸ್ಥಿತಿಯಲ್ಲಿ, ೨೦೦೧ರ ಅಕ್ಟೋಬರ್‌ನಲ್ಲಿ ನಿರ್ಬಂಧಗಳನ್ನು ತೊಡೆದುಹಾಕಿತ್ತು. ಇದಕ್ಕೂ ಮುಂಚೆ ೨೦೦೦ದ ಮಾರ್ಚ್ ತಿಂಗಳಲ್ಲಿ ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್ ಭಾರತಕ್ಕೆ ಭೇಟಿ ನೀಡಿ ಪ್ರಧಾನಿ ವಾಜಪೇಯಿಯವರೊಂದಿಗೆ ಮಾತುಕತೆ ನಡೆಸಿದ್ದರು. ಜಾರ್ಜ್ ಬುಷ್ ಅಮೆರಿಕದ ಅಧ್ಯಕ್ಷರಾದ ಮೇಲೆ, ಅದರಲ್ಲೂ ನ್ಯೂಯಾರ್ಕ್ ಮೇಲೆ ಅಲ್‌ಖೈದಾ ದಾಳಿಯ ನಂತರ ಭಾರತದೊಂದಿಗೆ ಸಂಬಂಧಗಳಿಗೆ ಹೆಚ್ಚು ಆದ್ಯತೆ ನೀಡಿದರು. ಭಾಜಪ ಸರಕಾರ ಅಪೇಕ್ಷಿಸಿದ್ದು ಕೂಡ ಅದನ್ನೆ. ಆಗ ವಿದೇಶಾಂಗ ಸಚಿವರಾಗಿದ್ದ ಜಸ್ವಂತ್ ಸಿಂಗ್ ಅಮೆರಿಕದೊಂದಿಗೆ ಸಂಬಂಧಗಳನ್ನು ಬೆಸೆಯಲು ಏನು ಬೇಕಾದರೂ ಮಾಡಲು ಸಿದ್ಧವಾಗಿದ್ದರು. ಪರಮಾಣು ಅಸ್ತ್ರಗಳ ನಿಷೇಧ ಕೌಲಿಗೆ ಸಹಿ ಹಾಕಲು, ಕಾಶ್ಮೀರ ವಿಚಾರದಲ್ಲಿ ಪಾಕ್ ಆಕ್ರಮಿತ ಪ್ರದೇಶವನ್ನು ಬಿಟ್ಟುಕೊಡಲು, ಆಫ್ಘಾನಿಸ್ತಾನದ ಮೇಲೆ ದಾಳಿಗೆ ಭಾರತದಲ್ಲಿ ಅಮೆರಿಕಕ್ಕೆ ನೆಲೆ ಒದಗಿಸಲೂ ಕೂಡ ವಾಜಪೇಯಿ ಸರಕಾರ ಸಮ್ಮತಿಸಲು ಸಿದ್ಧವಾಗಿತ್ತು. ಈ ಬಗ್ಗೆ ಬಲವಾದ ಸೂಚನೆಗಳನ್ನು ಅಮೆರಿಕಕ್ಕೆ ನೀಡಿತ್ತು. ಆದರೆ ಭಾರತದಲ್ಲಿ ಸಾರ್ವಜನಿಕ ವಿರೋಧ ಬಲವಾಗಿದ್ದುದರಿಂದ ಅದು ನೆರವೇರಲಿಲ್ಲ. ಅದೇ ರೀತಿಯಲ್ಲಿ ೨೦೦೩ರಲ್ಲಿ ಇರಾಕ್‌ನ ಮೇಲೆ ಅಮೆರಿಕ ದಾಳಿ ನಡೆಸಿದಾಗ ಭಾರತ ಸರಕಾರ ಸೇನೆಯನ್ನು ರವಾನಿಸಲೂ ಸಿದ್ಧವಾಗಿತ್ತು. ಎನ್‌ಡಿಎ ಸರಕಾರ ಅಧಿಕಾರ ದಲ್ಲಿದ್ದಾಗಲೇ ೨೦೦೨ರಲ್ಲಿ ಭಾರತ-ಅಮೆರಿಕಗಳ ಮಧ್ಯೆ ನಾಗರಿಕ ನ್ಯೂಕ್ಲಿಯರ್ ತಂತ್ರಜ್ಞಾನ, ನ್ಯೂಕ್ಲಿಯರ್ ಸುರಕ್ಷತೆ ಮತ್ತು ಉನ್ನತ ತಾಂತ್ರಿಕ ಸಹಕಾರ ಕುರಿತ ಮಾತುಕತೆಗಳು ಪ್ರಾರಂಭವಾಗಿದ್ದುವು. ಈ ಸಂಬಂಧದಲ್ಲಿ ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಭಾರತದ ಪ್ರಧಾನಿ ವಾಜಪೇಯಿ ನಡೆಸಿದ ಶೃಂಗಸಭೆಯ ನಂತರ ಪ್ರಕಟಿಸಿದ ಜಂಟಿ ಹೇಳಿಕೆಯಲ್ಲಿ ಮೇಲಿನ ವಿಷಯಗಳ ಕುರಿತು ಸಹಕಾರದ ವಿಚಾರವನ್ನು ಪ್ರಸ್ತಾಪಿಸಲಾಗಿತ್ತು. ಎನ್‌ಡಿಎ ಸರಕಾರ ಮುಂದುವರಿದಿದ್ದರೆ ಯಾವತ್ತೋ ಈ ವಿಚಾರಗಳಲ್ಲಿ ಒಪ್ಪಂದವಾಗುತ್ತಿತ್ತೆಂದು ತೋರುತ್ತದೆ. ಆದರೆ ಅದು ಯುಪಿಎ ಸರಕಾರದ ಪ್ರಧಾನಿ ಮನಮೋಹನ ಸಿಂಗ್ ಸರಕಾರದ ಪಾಲಿಗೆ ಬಂದಿತು. ಸಾಕಷ್ಟು ವಿರೋಧದ ನಡುವೆ ನಾಗರಿಕ ಪರಮಾಣು ಒಪ್ಪಂದಕ್ಕೆ ಸಹಿಯಾಯಿತು. ಅದನ್ನು ಮುಂದೆ ಪರಿಶೀಲಿಸೋಣ. ಇಸ್ರೇಲಿನೊಂದಿಗೆ ಸಂಬಂಧಗಳನ್ನು ಉತ್ತಮಗೊಳಿಸಲು ಎನ್‌ಡಿಎ ಸರಕಾರ ಹಲವು ಕ್ರಮಗಳನ್ನೂ ಕೈಗೊಂಡಿತು. ಭಯೋತ್ಪಾದನೆಯನ್ನು ಎದುರಿಸಲು ಗೃಹಸಚಿವರಾಗಿದ್ದ ಎಲ್. ಕೆ. ಅದ್ವಾನಿ ಇಸ್ರೇಲಿ ಗೂಢಚರ್ಯೆ ಸಂಸ್ಥೆ ಮೊಸ್ಸಾದ್‌ನ ನೆರವನ್ನೂ ಪಡೆದುಕೊಳ್ಳಲು ಮುಂದಾಗಿದ್ದರು. ಪರಂಪರಾಗತವಾಗಿ ಪ್ಯಾಲಸ್ತೈನ್ ಹೋರಾಟಗಾರರಿಗೆ ಮೊದಲಿನಿಂದಲೂ ಭಾರತ ನೀಡುತ್ತಿದ್ದ ಬೆಂಬಲ ಶಿಥಿಲಗೊಂಡಿತು.

ಆರ್ಥಿಕ ಕ್ಷೇತ್ರದಲ್ಲಿ ಎನ್‌ಡಿಎ ಸರಕಾರದ ಆಡಳಿತಾವಧಿಯಲ್ಲಿ ಹೇಳಿಕೊಳ್ಳುವಂಥ ಪ್ರಗತಿ ಏನಾಗಲಿಲ್ಲ. ಜಾಗತಿಕ ಮಟ್ಟದಲ್ಲಿ ಇಪ್ಪತ್ತೊಂದನೇ ಶತಮಾನದ ಪ್ರಾರಂಭದಲ್ಲೇ ಆರ್ಥಿಕ ಹಿಂಜರಿಕೆಯಾದ್ದರಿಂದ ಅದರ ಪರಿಣಾಮ ಭಾರತದ ಮೇಲೂ ಆಯಿತು. ಭಾರತದಲ್ಲಿ ಬ್ಯಾಂಕಿಂಗ್ ಕ್ಷೇತ್ರ ರಾಷ್ಟ್ರೀಕರಣವಾಗಿದ್ದುದರಿಂದ ಆರ್ಥಿಕ ಹಿಂಜರಿಕೆಯ ದುಷ್ಪರಿಣಾಮಗಳು ಅಷ್ಟಾಗಿ ತಟ್ಟಲಿಲ್ಲ. ಪುನಶ್ಚೇತನಗೊಳ್ಳಲು ಹೆಚ್ಚುಕಾಲ ಹಿಡಿಯಲಿಲ್ಲ. ಆದರೂ ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಮಾತ್ರ ಜಾಗತಿಕ ಆರ್ಥಿಕ ಹಿಂಜರಿಕೆಯ ಬಿಸಿ ತಟ್ಟಿತು. ಸಾರ್ವಜನಿಕ ಕ್ಷೇತ್ರದಲ್ಲಿರುವ ಕೈಗಾರಿಕೋದ್ಯಮಗಳ ಬಂಡವಾಳವನ್ನು ಕರಗಿಸಿ ಎನ್‌ಡಿಎ ಸರಕಾರ ಬಜೆಟ್ ಕೊರತೆಯನ್ನು ಸರಿದೂಗಿಸಲು ಪರದಾಡಿತು. ಹೂಡಿದ್ದ ಬಂಡವಾಳವನ್ನು ಹಿಂತೆಗೆದುಕೊಳ್ಳಲು ವಾಜಪೇಯಿ ಸರಕಾರ ಪ್ರತ್ಯೇಕವಾದ ಸಚಿವಾಲಯವನ್ನೇ ನಿರ್ಮಿಸಿ ಅರುಣ್ ಶೌರಿಯವರನ್ನು ಸಚಿವರನ್ನಾಗಿ ನೇಮಿಸಿತ್ತು. ಐದು ವರ್ಷಗಳ ಅವಧಿಯಲ್ಲಿ ಈ ಸಚಿವಾಲಯ ಸಾಕಷ್ಟು ಬಂಡವಾಳವನ್ನು ಕಡಿಮೆ ದರದಲ್ಲಿ ಖಾಸಗೀ ಕ್ಷೇತ್ರಕ್ಕೆ ವರ್ಗಾಯಿಸಿತ್ತು. ಎನ್‌ಡಿಎ ಸರಕಾರ ಅಧಿಕಾರಕ್ಕೆ ಬರುವುದಕ್ಕೆ ಮುಂಚೆಯೇ, ಕಾಂಗ್ರೆಸ್ ಸರಕಾರದ ಅವಧಿಯಲ್ಲಿ, ಮುಖ್ಯವಾಗಿ ನರಸಿಂಹರಾವ್ ಪ್ರಧಾನಿಯಾಗಿದ್ದಾಗಲೇ ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳದ ಆಕರ್ಷಣೆ, ಮುಕ್ತಮಾರುಕಟ್ಟೆ, ಮೊದಲಾದ ನೀತಿಗಳು ಪ್ರಚಲಿತವಾಗಿದ್ದವು. ಇದರ ಪರಿಣಾಮವಾಗಿ ಭಾರತದಲ್ಲಿ ಕಾರ್ಪೊರೇಟ್ ವಲಯ ಪ್ರಬಲವಾಗಿ ಬೆಳೆಯತೊಡಗಿತು. ನೂತನ ತಂತ್ರಜ್ಞಾನದ ಪ್ರವೇಶ ಹೊಸ ಅವಕಾಶಗಳನ್ನು ಬಂಡವಾಳದ ವರ್ಧನೆಗೆ ಅನುವು ಮಾಡಿಕೊಟ್ಟಿತು. ತೈಲ, ಅನಿಲ ಕ್ಷೇತ್ರಗಳಲ್ಲಿ ಅಂಬಾನಿಗಳು, ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಇನ್ಫೋಸಿಸ್‌ನ ನಾರಾಯಣಮೂರ್ತಿ, ವಿಪ್ರೋದ ಅಜಿತ್ ಪ್ರೇಮ್‌ಜಿ, ಬಯೋಟೆಕ್ನಾಲಜಿ ಕ್ಷೇತ್ರದಲ್ಲಿ ಕಿರಣ್ ಮಜುಮ್‌ದಾರ್ ಮುಂತಾದವರು ಹಾಗೂ ದೊಡ್ಡ ಪ್ರಮಾಣದಲ್ಲಿ ರಿಯಲ್ ಎಸ್ಟೇಟ್ ಉದ್ಯಮದ ವಿಸ್ತರಣೆ ಮುಂತಾದುವೆಲ್ಲ ಕಳೆದ ಮೂರು ದಶಕಗಳಲ್ಲಿ ಆದ ಬೆಳವಣಿಗೆಗಳು. ಇವೆಲ್ಲ ದೇಶದಲ್ಲಿ ಬಲಪಂಥೀಯ ರಾಜಕಾರಣ ಪ್ರಬಲ ಗೊಳ್ಳುವುದಕ್ಕೆ, ಮಧ್ಯಮ ವರ್ಗದ ವಿಸ್ತರಣೆಗೆ ಅವಕಾಶ ಕಲ್ಪಿಸಿತು. ಎನ್‌ಡಿಎ ಸರಕಾರ ಅನುಸರಿಸಿದ ಆರ್ಥಿಕ ನೀತಿಗಳೂ ಈ ಬೆಳವಣಿಗೆಗೆ ಪೂರಕವಾಗಿದ್ದುವು.

ಭಾರತದಲ್ಲಿ ಮೊದಲ ಸಮ್ಮಿಶ್ರ ಸರಕಾರದ ಯುಗ ಪ್ರಾರಂಭಿಸಿದ ಎನ್‌ಡಿಎ ಸರಕಾರ ಐದು ವರ್ಷದ ಅವಧಿ ಮುಗಿಯುವುದಕ್ಕೆ ಮುನ್ನವೇ ೨೦೦೪ರ ಮೇ ತಿಂಗಳಲ್ಲಿ ಚುನಾವಣೆ ನಡೆಸಲು ನಿರ್ಧರಿಸಿತು. ಸಮ್ಮಿಶ್ರ ಸರಕಾರದಲ್ಲಿ ಅತಿ ದೊಡ್ಡ ಪಕ್ಷವಾಗಿದ್ದ ಭಾರತೀಯ ಜನತಾ ಪಕ್ಷದ್ದೇ ಪಾರುಪತ್ಯ. ನೇರವಾಗಿ ರಾಮ ಜನ್ಮಭೂಮಿ, ಕಾಶ್ಮೀರದ ವಿಚಾರದಲ್ಲಿ ಸಂವಿಧಾನದ ೩೭೦ನೇ ವಿಧಿ ರದ್ದತಿ, ಯೂನಿಫಾರಮ್ ಸಿವಿಲ್ ಕೋಡ್ ಮುಂತಾದ ಅಜೆಂಡಾಗಳನ್ನು ಕಾರ್ಯಗತ ಮಾಡಲು ಪ್ರಯತ್ನಿಸದಿದ್ದರೂ, ಹಿಂದುತ್ವವಾದಿ ವಿಚಾರವನ್ನು ಪ್ರಚುರಪಡಿಸುವುದರಲ್ಲಿ ಯಶಸ್ವಿಯಾಯಿತು. ಸರಕಾರಿ ಯಂತ್ರದ ಆಯಕಟ್ಟಿನ ಸ್ಥಾನಗಳಲ್ಲಿ ಸಂಘಪರಿವಾರದ ಸಂಘಟನೆಗಳೊಂದಿಗೆ ಸಹಾನುಭೂತಿ ಹೊಂದಿರುವವರನ್ನು ನೇಮಕ ಮಾಡಲಾಯಿತು. ಇತಿಹಾಸವನ್ನು ತಿರುಚುವುದಕ್ಕೆ ಆದ್ಯತೆ ನೀಡಿತು, ಮುಖ್ಯವಾಗಿ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಹಿಂದುತ್ವವಾದಿ



**ಅರುಣ್ ಶೌರಿ**

ಪ್ರಚಾರಕ್ಕೆ ಪ್ರಾಶಸ್ತ್ಯ ನೀಡಲಾಯಿತು. ಭಾಜಪದ ನಾಯಕ ಮುರಳಿ ಮನೋಹರ್ ಜೋಷಿ ಕೇಂದ್ರದಲ್ಲಿ ವಿದ್ಯಾಭ್ಯಾಸ ಸಚಿವರಾಗಿದ್ದುದರಿಂದ ಸಂಘಪರಿವಾರದ ಕಾರ್ಯಕ್ರಮವನ್ನು ಸಕ್ರಿಯವಾಗಿ ಕಾರ್ಯಗತ ಮಾಡಲು ಮುಂದಾದರು. ಹೊಸ ಪಠ್ಯಪುಸ್ತಕಗಳನ್ನು ತಯಾರಿಸಿ ಜಾರಿಗೆ ತರಲಾಯಿತು. ಎನ್‌ಸಿಇಆರ್‌ಟಿ, ಯುಜಿಸಿ, ಐಸಿಎಸ್‌ಎಸ್‌ಆರ್, ಐಸಿಎಚ್‌ಆರ್ ಮೊದಲಾದ ಸಂಸ್ಥೆಗಳಿಗೆ ಹಿಂದುತ್ವವಾದಿ ಸಿದ್ಧಾಂತದ ಪರವಾಗಿರುವವರನ್ನೇ ನೇಮಕ ಮಾಡಲಾಯಿತು.

ಖ್ಯಾತ ಇತಿಹಾಸಕಾರರಾದ ರೊಮಿಲಾ ಥಾಪರ್, ಆರ್. ಎಸ್. ಶರ್ಮಾ, ಅರ್ಜುನ್ ದೇವ್ ಮೊದಲಾದವರ ಲೇಖನಗಳನ್ನು ಪಠ್ಯಪುಸ್ತಕದಿಂದ ತೆಗೆದುಹಾಕಲಾಯಿತು. ಈ ಪ್ರಖ್ಯಾತ ಇತಿಹಾಸಕಾರರ ವಿರುದ್ಧ ಸಂಘಪರಿವಾರದ ನಾಯಕರು ಅಪಪ್ರಚಾರ ನಡೆಸಿದರು. ಒಟ್ಟಿನಲ್ಲಿ ಸರಕಾರದ ಎಲ್ಲ ಕ್ಷೇತ್ರಗಳಲ್ಲೂ ಸಂಘಪರಿವಾರಕ್ಕೆ ಅನುಕೂಲ ವಾಗಿರುವವರನ್ನು ಅಧಿಕಾರ ಸ್ಥಾನಕ್ಕೆ ತರುವುದರಲ್ಲಿ ಯಶಸ್ವಿಯಾದರು.



ಮುರಳಿ ಮನೋಹರ ಜೋಷಿ

ಭಾಜಪ ನೇತೃತ್ವದ ಸರಕಾರದ ಸಾಧನೆಗಳನ್ನು ಸಾಕಷ್ಟು ಉತ್ಪ್ರೇಕ್ಷೆ ಮಾಡಿ ಪ್ರಚಾರ ಕೈಗೊಳ್ಳಲಾಯಿತು. ಚುನಾವಣೆಗಳನ್ನು ಘೋಷಿಸಿದ ಮೇಲೆ 'ಭಾರತ ಪ್ರಕಾಶಿಸುತ್ತಿದೆ' (ಇಂಡಿಯಾ ಶೈನಿಂಗ್) ಎನ್ನುವುದು ಭಾಜಪದ ಚುನಾವಣಾ ಘೋಷವಾಕ್ಯವಾಯಿತು. ಎನ್‌ಡಿಎ ಸರಕಾರದಲ್ಲಿ ಭಾಗಿಯಾಗಿದ್ದ ತಮಿಳುನಾಡಿನ ಜಯಲಲಿತ ನೇತೃತ್ವದ ಎಐಎಡಿಎಂಕೆ ಪಕ್ಷ ಚುನಾವಣೆಗೆ ಮುಂಚೆ ಭಿನ್ನಾಭಿಪ್ರಾಯಗಳಿಂದಾಗಿ ಬೆಂಬಲವನ್ನು ಹಿಂದೆಗೆದುಕೊಂಡಿತು. ಆರು ತಿಂಗಳು ಮುಂಚಿತವಾಗಿ ಚುನಾವಣೆ ನಡೆಸಲು ಸರಕಾರ ನಿರ್ಧರಿಸಿದ್ದಕ್ಕೆ ಇದೂ ಒಂದು ಕಾರಣವಾಗಿತ್ತು. ಉತ್ತರ ಭಾರತದಲ್ಲಿ ಹಿಂದಿ ಮಾತನಾಡುವ ಪ್ರದೇಶದಲ್ಲಿ ಪ್ರಭಾವ ಹೊಂದಿದ್ದ ಭಾಜಪ, ಅಕಾಲಿದಳ ಸಂಯುಕ್ತ ಜನತಾದಳ, ಶಿವಸೇನೆ ಮೊದಲಾದ ಪಕ್ಷಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಿತ್ತು. ಈ ಪಕ್ಷಗಳೇ ಪ್ರಧಾನವಾಗಿ ಎನ್‌ಡಿಎ ಭಾಗಿಗಳು. ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ನಾಯಕತ್ವದಲ್ಲಿ ಕಾಂಗ್ರೆಸ್ ಚುನಾವಣಾ ಕಣಕ್ಕಿಳಿಯಿತು. ದಕ್ಷಿಣ ಭಾರತದಲ್ಲಿ ಕಾಂಗ್ರೆಸ್ ಸಾಕಷ್ಟು ಪ್ರಭಾವ ಹೊಂದಿತ್ತು. ಪವಾರ್ ನೇತೃತ್ವದ ಎನ್‌ಸಿಪಿ, ಲಾಲುಪ್ರಸಾದ್ ನೇತೃತ್ವದ ರಾಷ್ಟ್ರೀಯ ಜನತಾದಳ, ತಮಿಳುನಾಡಿನಲ್ಲಿ ಡಿಎಂಕೆ ಇವುಗಳ ಜೊತೆ ಹೊಂದಾಣಿಕೆ ಮಾಡಿಕೊಂಡಿತ್ತು. ಚುನಾವಣಾ ಪ್ರಚಾರದಲ್ಲಿ ಶ್ರೀಮತಿ ಸೋನಿಯಾ ಗಾಂಧಿಯ ವಿದೇಶೀ ಮೂಲವನ್ನು ಭಾಜಪ ಪ್ರಮುಖ ಪ್ರಶ್ನೆಯಾಗಿಸಿತು. ವಿದೇಶೀ ಮಹಿಳೆಯೊಬ್ಬಳು ಪ್ರಧಾನಿ ಪಟ್ಟ ವಹಿಸುವುದಕ್ಕೆ ಅವಕಾಶ ನೀಡಕೂಡದು ಎಂದು ಅಬ್ಬರದ ಪ್ರಚಾರ ನಡೆಯಿತು. ಸೋನಿಯಾ ಗಾಂಧಿ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಬಂದಮೇಲೆ ಕಾಂಗ್ರೆಸ್ಸಿನಲ್ಲೇ ಕೆಲ ಭಿನ್ನಮತೀಯರು ಪಕ್ಷ ತ್ಯಜಿಸಿದರು. ವಿದೇಶೀ ಮೂಲದ ಪ್ರಶ್ನೆಯ ಜೊತೆಗೆ ನೆಹರೂ–ಗಾಂಧಿ ಕುಟುಂಬ ರಾಜಕಾರಣ ಕೂಡ ತೊಡಕಾಗಿತ್ತು. ಪಶ್ಚಿಮ ಬಂಗಾಳದಲ್ಲಿ ಮಮತಾ ಬ್ಯಾನರ್ಜಿ ತೃಣಮೂಲ ಕಾಂಗ್ರೆಸ್ ಎಂಬುದನ್ನು ಸ್ಥಾಪಿಸಿಕೊಂಡರೆ, ಮಹಾರಾಷ್ಟ್ರದ ಶರದ್ ಪವಾರ್ ನಾಯಕತ್ವದಲ್ಲಿ ನ್ಯಾಷನಲ್ ಕಾಂಗ್ರೆಸ್ ಪವಾರ್ ಸಂಘಟನೆ ಸ್ಥಾಪನೆಗೊಂಡಿತು. ಎರಡು ಪಕ್ಷಗಳೂ ಕೂಡ ಪ್ರಾದೇಶಿಕ ಪಕ್ಷಗಳಾಗಿಯೇ ಬೆಳೆದುವೇ ಹೊರತು ಬೇರೆಲ್ಲೂ ಹರಡಲಿಲ್ಲ.

ಚುನಾವಣೆಗಳಲ್ಲಿ ಕಾಂಗ್ರೆಸ್ ಅತ್ಯಧಿಕ ಸ್ಥಾನಗಳನ್ನು (೧೪೫) ಗಳಿಸಿತು. ಭಾರತೀಯ ಜನತಾಪಕ್ಷ ೧೩೮ ಸ್ಥಾನಗಳನ್ನು ಗಳಿಸಿತು. ಬಹುದೊಡ್ಡ ಪಕ್ಷವಾಗಿದ್ದ ಕಾಂಗ್ರೆಸ್ ಸರಕಾರ ರಚಿಸಲು ಮುಂದಾಯಿತು. ಆಗ ಹುಟ್ಟಿಕೊಂಡದ್ದೇ ಸಂಯುಕ್ತ ಪುರೋಗಾಮಿ ಮೈತ್ರಿಕೂಟ ಅಥವಾ ಹ್ರಸ್ವವಾಗಿ ಯುಪಿಎ (ಯುನೈಟೆಡ್ ಪ್ರೋಗ್ರೆಸಿವ್ ಅಲಯನ್ಸ್.) ಮುಂದೆ ಹತ್ತು ವರ್ಷಗಳು ಅದು ಅಧಿಕಾರದಲ್ಲಿತ್ತು.

**(ಮುಂದುವರಿಯುವುದು)**

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.–೮೫




# ವಿಕರ್ಷ



**ಹೇ**ಳು, ಏನು ಬಯಸುವೆ ನೀನು
ಮತ್ತೆ ನನ್ನಿಂದ; ಸಿಗರೇಟು ತಣಿಸಿದ
ಈ ನನ್ನ ಸೀದ ತುಟಿಗಳಿಂದ
ನಗುವಿನ ಸೆಲೆಯನ್ನೇ ?
ಕನ್ನಡಕದೊಳಗೆ ಜೀವಂತಿಕೆಯನ್ನು
ಅಡಗಿಸಿಟ್ಟ ನನ್ನ ಕಣ್ಣುಗಳು
ಮತ್ತೆ ನಿನ್ನೆಡೆ ಹೊರಳಬೇಕೆ ?
ನಿಲ್ಲಲೂ ಆಧಾರವಾಗದ ಈ
ಒಣ ಕೈಕಾಲುಗಳು ಈಗಲೂ
ಭಾರವಾದೀತೇ ನಿನ್ನ ಕೋಮಲತೆಗೆ ?

ಅಗಲಿಕೆಯ ಆನಂದಕ್ಕೆ ಹಾತೊರೆದು
ಓಡುತ್ತಾ ಸಾಗುವೆ ನಿನ್ನಿಂದ,
ಮತ್ತೆ – ಬಾರೆಂದು ಕರೆಯಬೇಡ ನನ್ನ.
ಅಂಗಳದ ಎರಡೂ ಲತೆಗಳು
ಟಿಸಿಲೊಡೆದು ಚಿಗುರಲಿ,
ಸುಮವರಳಿ ಹಣ್ಣಾಗಲಿ
ನಿನ್ನ ಆರೈಕೆಯಲಿ; ನಾ ಬರಿದೇ ಸಾಗಿಹೋದ ಮಾರುತ.
ಜೀವನದ ಆಟೋಟದಲ್ಲಿ ನೀ – ನಾ
ಕೇವಲ ನೆಪ ಮಾತ್ರ, ಮೈ ಕೈ ತರಚಿದ್ದಕ್ಕೆಲ್ಲಾ
ಕ್ಷಮೆಯಿರಲಿ ಈ ಗಾಂಪರೊಡೆಯನ ಮೇಲೆ

**ಎಂ. ಕುಸುಮ**
ಸಹಾಯಕ ಪ್ರಾಧ್ಯಾಪಕರು, ನಂ. ೪೩, 'ಜಯಲಕ್ಷ್ಮಿ ನಿಲಯ', ಕೆ.ಐ.ಎಂ.ಸಿ.ಒ. ಎದುರು, ಬಿ. ಎಂ. ರಸ್ತೆ, ಹಾಸನ – ೫೭೩ ೨೦೧

# ಕ್ಷ - ಕಿರಣ

- ಸಾನ್ವಿ ಪಿ.

## ಡೆಲ್ಲಿ ರಂಗಮಂದಿರದಲ್ಲಿ




"ಕಟ್ಟು ಬಿಚ್ಚಿದ ಪೊರಕೆ
ತೂತು ಬಿದ್ದ ಟೋಪಿ"




ಹಿಟ್ಲರ್‌ನ
ಜರ್ಮನಿಯಲ್ಲಿ
ಮೋದಿ




ಬಂದಾ ಬಂದಾ ರಾಜಕುಮಾರ



ರಾಹುಲ್ ಘರ್ ವಾಪಸಿ

ತಿಂಗಳ ಕಥೆ

# ಗಂಡನ ಕೈಲಿ ಹೊಡೆಸಿಕೊಳ್ಳಲೊಪ್ಪದ ಹೆಂಡತಿ

## (ಒಂದು ಕಾಶ್ಮೀರಿ ಕಥೆ)

**ಕಾ**ಶ್ಮೀರ ಕಣಿವೆಯಲ್ಲಿ ತುಂಬ ಶ್ರೀಮಂತನಾದ ಒಬ್ಬ ವ್ಯಾಪಾರಿಯಿದ್ದ. ಅವನಿಗೊಬ್ಬ ಅಜ್ಞಾನಿಯೂ, ಮೂರ್ಖನೂ ಆದ ಮಗ. ಮಗನಿಗೆ ವಿದ್ಯಾಬುದ್ಧಿ ಕಲಿಸಲು ವ್ಯಾಪಾರಿಯು ಆ ಪ್ರಾಂತ್ಯದಲ್ಲೇ ಅತ್ಯಂತ ಸಮರ್ಥರಾದ ಗುರುಗಳನ್ನು ಗೊತ್ತುಮಾಡಿದ್ದ. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಹುಡುಗನು ತುಂಬ ಸೋಮಾರಿ ಮತ್ತು ಅವಿಧೇಯನಾಗಿದ್ದು ಏನೇನೂ ಕಲಿಯಲಿಲ್ಲ. ಹೀಗಾಗಿ ದಿನಕಳೆದಂತೆ ತಂದೆಯು ನಿರಾಶನಾಗಿ ಮಗನಿಗೆ ಬುದ್ಧಿ ಕಲಿಸುವ ವಿಚಾರವನ್ನೇ ಕೈಬಿಟ್ಟಿದ್ದ. ಆದರೆ ಹುಡುಗನ ತಾಯಿಯು ಮಾತ್ರ ಮಗನನ್ನು ತುಂಬ ಪ್ರೀತಿಸುತ್ತಿದ್ದು, ಯಾವಾಗಲೂ ಮಗನ ಪರವಾಗಿ ವಾದಿಸುತ್ತಿದ್ದಳು.

ಮಗನಿಗೆ ಮದುವೆಯ ವಯಸ್ಸು ಬಂದಾಗ, ಅವನಿಗೆ ಹೊಂದಿಕೊಳ್ಳುವ ಮತ್ತು ಅವನನ್ನು ಸರಿ ದಾರಿಗೆ ತರಬಲ್ಲ ಒಬ್ಬಳು ಕನ್ಯೆಯನ್ನು ಹುಡುಕಲು ಗಂಡನಿಗೆ ದುಂಬಾಲು ಬಿದ್ದಳು. ಇಂಥ ಮೂರ್ಖನಿಗೆ ಹೆಣ್ಣು ಕೊಡುವಂತೆ ಕೇಳಲು ವ್ಯಾಪಾರಿಗೆ ನಾಚಿಕೆಯಾಯಿತು; ಹೆಂಡತಿಯ ಮೇಲೆ ಸಿಟ್ಟೂ ಬಂತು. ಆದರೆ ತಾಯಿಯ ಮನಸ್ಸು ಬೇರೆಯೇ ರೀತಿ ವರ್ತಿಸುತ್ತಿತ್ತು. ಮಗನಿಗೆ ಮದುವೆ ಮಾಡದಿರುವುದು ಅವಮಾನವೆಂದೂ ತಮ್ಮ ಸಂಪ್ರದಾಯಕ್ಕೆ ವಿರುದ್ಧವೆಂದೂ ಆಕೆ ಭಾವಿಸಿದಳು. ತಾನು ಮಗನನ್ನು ಹತ್ತಿರದಿಂದ ಗಮನಿಸಿರುವುದಾಗಿಯೂ, ವಿದ್ಯೆ ಕಲಿಯದಿದ್ದರೂ ಆತ ಬುದ್ಧಿವಂತನೆಂದೂ, ಚಾತುರ್ಯವುಳ್ಳವನೆಂದೂ ಗಂಡನ ಹತ್ತಿರ ವಾದಿಸಿದಳು. "ನಿನ್ನ ಮಾತು ಕೇಳಿ ಕೇಳಿ ನನಗೆ ತಲೆ ಚಿಟ್ಟುಹಿಡಿದು ಹೋಗಿದೆ. ತಾಯಿಯ ಕಣ್ಣು ಕುರುಡು" ಎಂಬ ಮಾತು ನಿಜ ಎಂದು ಸಿಟ್ಟು ಮಾಡಿದನಾದರೂ ಹೆಂಡತಿಯ ಒತ್ತಾಯಕ್ಕೆ ಸೋತು, ಮಗನಿಗೆ ಒಂದು ಅವಕಾಶ ಕೊಟ್ಟು ನೋಡಲು – ಒಪ್ಪಿದ. ಅವನಿಗೆ ಮೂರು ನಾಣ್ಯಗಳನ್ನು ಕೊಟ್ಟು – ಇವುಗಳ ಪೈಕಿ ಒಂದು ನಾಣ್ಯದಿಂದ ತನಗೆ ತಿನ್ನಲು ಬೇಕಾದದ್ದನ್ನು ಕೊಡುತ್ತೇನೆ; ಕೊಂಡುಕೊಳ್ಳಲಿ; ಇನ್ನೊಂದು ನಾಣ್ಯವನ್ನು ನೀರಿಗೆ ಎಸೆಯಲಿ; ಉಳಿದ ಒಂದು ನಾಣ್ಯದಿಂದ ನಾನು ಹೇಳುವ ಐದು ವಸ್ತುಗಳನ್ನು ಕೊಳ್ಳಲಿ – ಎಂದು ಹೇಳಿ ಆ ಐದು ವಸ್ತುಗಳನ್ನು ಸೂಚಿಸಿದ. ಹೊಟ್ಟೆಗೆ ತಿನ್ನಲು, ಕುಡಿಯಲು ಮತ್ತು ಬಾಯಾಡಿಸಲು ಬೇಕಾದ ಸಾಮಗ್ರಿ ; ತೋಟದಲ್ಲಿ ಬಿತ್ತಿ ಬೆಳೆಯಲು ಮತ್ತು ಮನೆಯ ದನಗಳಿಗೆ ತಿನ್ನಲು ಮೇವು – ಇವೇ ಆ ಐದು ವಸ್ತುಗಳು – ಹೀಗೆ ಆಜ್ಞೆ ಮಾಡಿ ಮೂರು ತಾಮ್ರದ ನಾಣ್ಯಗಳನ್ನು ಮಗನ ಕೈಮೇಲಿಟ್ಟು ಮಾತು ಮುಗಿಸಿದ.

ಆ ಮೂರು ನಾಣ್ಯಗಳನ್ನು ತೆಗೆದುಕೊಂಡು ಮನೆಯಿಂದ ಹೊರಟ ಯುವಕ ಮೊದಲು ತಿಂಡಿ ಅಂಗಡಿಗೆ ಹೋಗಿ ತನಗೆ ತಿನ್ನಲು ಬೇಕಾದುದನ್ನು ಕೊಂಡುಕೊಂಡ. ಆ ಕೆಲಸ ಸುಲಭವಾಗಿತ್ತು.



ಆಮೇಲೆ ಊರಿನ ಪಕ್ಕದಲ್ಲಿ ಹರಿಯುತ್ತಿದ್ದ ನದಿಯ ಬದಿಗೆ ಬಂದು ನಿಂತು, ನಾಣ್ಯವನ್ನು ನೀರಿಗೆ ಎಸೆಯುವ ಮುಂಚೆ ಯೋಚಿಸ ತೊಡಗಿದ. 'ನಾಣ್ಯವನ್ನು ನೀರಿಗೆ ಎಸೆಯುವುದು ಹುಚ್ಚು ಕೆಲಸ ; ಅದರಿಂದ ಏನೂ ಪ್ರಯೋಜನವಿಲ್ಲ ; ಹಾಗೆಂದು ನಾಣ್ಯವನ್ನು ಎಸೆಯದಿದ್ದರೆ ಅಪ್ಪ–ಅಮ್ಮನ ಮಾತನ್ನು ಮೀರಿದಂತೆ ಆಗುತ್ತದೆ' – ಎಂದು ತನ್ನಷ್ಟಕ್ಕೇ, ಆದರೆ ಗಟ್ಟಿಯಾಗಿ ಮಾತಾಡಿಕೊಳ್ಳತೊಡಗಿದ.

ಆ ವೇಳೆಗೆ ನದಿಯ ಸಮೀಪದಲ್ಲಿಯೇ ವಾಸಿಸುತ್ತಿದ್ದ ಕಮ್ಮಾರನ ಮಗಳು ಅಲ್ಲಿಗೆ ಬಂದು ನಿಂತು ಈ ಯುವಕನನ್ನೇ ಗಮನಿಸುತ್ತಿದ್ದು, "ಏನು ನಿನ್ನ ಸಮಸ್ಯೆ?" ಎಂದು ಕೇಳಿದಳು. ಯುವಕನು ತನ್ನ ಅಪ್ಪ–ಅಮ್ಮ ತನಗೆ ಹೇಳಿದ ಕೆಲಸವನ್ನೆಲ್ಲ ಆ ಯುವತಿಗೆ ವಿವರಿಸಿ 'ನಾಣ್ಯವನ್ನು ನೀರಿಗೆ ಎಸೆಯಬೇಕೆ, ಬೇಡವೆ ?' – ಎಂದು ಯೋಚಿಸುತ್ತಿರುವುದಾಗಿ ಹೇಳಿದ.

"ಏನು ಮಾಡಬೇಕೆಂಬುದನ್ನು ನಾನು ಹೇಳಿಕೊಡುತ್ತೇನೆ ತಾಳು. ಈಗ ಮತ್ತೆ ಅಂಗಡಿಬೀದಿಗೆ ಹೋಗಿ ಒಂದು ನಾಣ್ಯವನ್ನು ಕೊಟ್ಟು ಒಂದು ಕಲ್ಲಂಗಡಿ ಹಣ್ಣು ಕೊಂಡುಕೊ; ಅದರಲ್ಲಿ ನಿನಗೆ ಬೇಕಾದ ಐದು ವಸ್ತುಗಳೂ ದೊರೆಯುತ್ತವೆ. ಆಮೇಲೆ ಉಳಿದ ಒಂದು ನಾಣ್ಯವನ್ನು ತೆಗೆದುಕೊಂಡು ಹೋಗಿ ತಾಯಿಗೆ ಕೊಡು; ಆಕೆ ಸಂತೋಷಪಡುತ್ತಾರೆ" – ಎಂದು ಹೇಳಿಕೊಟ್ಟು ತನ್ನ ಮನೆಗೆ ಹೋದಳು.

ಹುಡುಗನು ಹಾಗೆಯೇ ಮಾಡಿದ. ಮಗನ ಬುದ್ಧಿವಂತಿಕೆಯನ್ನು ಕಂಡು ತಾಯಿಗೆ ಸಂತೋಷವಾಯಿತು. ತನ್ನ ಗಂಡನು ಮನೆಗೆ ಬಂದ ಕೂಡಲೆ, ನಮ್ಮ ಮಗನು ಏನು


ಕನ್ನಡಕ್ಕೆ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ತಂದಿದ್ದಾನೆ ನೋಡಿ; ಈಗಲಾದರೂ ಅವನು ಬುದ್ಧಿವಂತನೆಂಬುದು ತಿಳಿಯಿತೆ ? – ಎಂದಳು.

ವ್ಯಾಪಾರಿಯು ತಮ್ಮ ಮಗನು ಕಲ್ಲಂಗಡಿ ಹಣ್ಣು ತಂದಿರುವುದನ್ನು ನೋಡಿ ಆಶ್ಚರ್ಯಪಟ್ಟನು. ಆದರೆ, ತಮ್ಮ ಮಗನು ಸ್ವಂತ ಬುದ್ಧಿಯಿಂದ ಈ ಕೆಲಸ ಮಾಡಿರಲಾರ ; ಯಾರೊ ಅವನಿಗೆ ಹೀಗೆ ಮಾಡೆಂದು ಸೂಚಿಸಿರಬೇಕು – ಎಂದು ಯೋಚಿಸಿ, "ಹೀಗೆ ಮಾಡುವಂತೆ ನಿನಗೆ ಹೇಳಿಕೊಟ್ಟವರು ಯಾರು ?" ಎಂದು ಪ್ರಶ್ನಿಸಿದ.

'ಆಕೆ ಒಬ್ಬ ಕಮ್ಮಾರನ ಮಗಳು' – ಎಂದು ಹುಡುಗನು ಉತ್ತರಿಸಿದಾಗ, ವ್ಯಾಪಾರಿಯು ಹೆಂಡತಿಯ ಕಡೆ ತಿರುಗಿ, "ನಮ್ಮ ಮಗನು ಸ್ವಂತ ಬುದ್ಧಿಯಿಂದ ಹೀಗೆ ಮಾಡಿರಲಾರನೆಂದು ನಾನು ನಿನಗೆ ಮೊದಲೆ ಹೇಳಿರಲಿಲ್ಲವೆ ?" – ಎಂದು ಹಂಗಿಸಿದ. ಸ್ವಲ್ಪ ಹೊತ್ತು ಬಿಟ್ಟು, "ಈಗ ಬೇಕಾದರೆ ಅವನಿಗೆ ಮದುವೆ ಮಾಡೋಣ; ನಮ್ಮ ಹುಡುಗನ ಬಗೆಗೆ ಇಷ್ಟೆಲ್ಲ ಆಸಕ್ತಿ ವಹಿಸಿದ ಆ ಕಮ್ಮಾರನ ಮಗಳು ತುಂಬ ಬುದ್ಧಿವಂತೆ ಎನಿಸುತ್ತದೆ. ಇವನು ಅವಳನ್ನೇ ಮದುವೆಯಾಗಬಹುದು" ಎಂದು ಸೂಚಿಸಿದ.

"ಹೌದು, ಅದೂ ಸರಿಯೆ. ಬಹಳ ಒಳ್ಳೆಯದೇ ಆಯಿತು" ಎಂದು ಹುಡುಗನ ತಾಯಿ ತನ್ನ ಒಪ್ಪಿಗೆ ಸೂಚಿಸಿದಳು.

ಯುವಕನ ತಂದೆ, ಶ್ರೀಮಂತ ವ್ಯಾಪಾರಿಯು ಕಮ್ಮಾರನ ಗುಡಿಸಿಲಿಗೆ ಬಂದಾಗ ಹುಡುಗಿಯ ಅಪ್ಪ–ಅಮ್ಮ ಇಬ್ಬರೂ ಮನೆಯಲ್ಲಿರಲಿಲ್ಲ. ಮನೆಯ ಒಳಗಿನಿಂದ ಇಣಿಕಿದ ಹುಡುಗಿಯನ್ನು ಕಂಡು, ತಮ್ಮ ಮಗನಿಗೆ ಸಹಾಯ ಮಾಡಿದ ಯುವತಿಯು ಇವಳೇ ಇರಬೇಕೆಂದು ಊಹಿಸಿ, "ನಾನು ನಿನ್ನ ಅಪ್ಪ–ಅಮ್ಮನನ್ನು ನೋಡಲು ಬಂದಿದ್ದೇನೆ" ಎಂದು ಹೇಳಿದ. ಹುಡುಗಿಯು ವಿನಯದಿಂದ ಆತನನ್ನು ಒಳಗೆ ಕರೆದು ಕುಳಿತುಕೊಳ್ಳುವಂತೆ ಹೇಳಿದಳು. "ನನ್ನ ಅಪ್ಪ ಕೆಲವು 'ಕೌರಿ' (ಕವಡೆ–ಪ್ರಾಚೀನ ಕಾಲದಲ್ಲಿ ಇದನ್ನು ನಾಣ್ಯವನ್ನಾಗಿ ಬಳಸುತ್ತಿದ್ದರಂತೆ)ಗಳನ್ನು ಕೊಟ್ಟು 'ಮಾಣಿಕ್ಯ' (Ruby – ಪ್ರಕಾಶ ನೀಡುವ ವಸ್ತು) ತರಲು ಹೋಗಿದ್ದಾರೆ; ನನ್ನ ಅಮ್ಮ 'ಮಾತು ಮಾರಲು' ಹೋಗಿದ್ದಾಳೆ" – ಎಂದು ಹೇಳಿದಳು.

ವ್ಯಾಪಾರಿಗೆ ಹುಡುಗಿಯ ಮಾತು ಅರ್ಥವಾಗದೆ ಗೊಂದಲವಾಯಿತು. "ನಿನ್ನ ಅಪ್ಪ–ಅಮ್ಮ ಎಲ್ಲಿ ಹೋಗಿದ್ದಾರೆ ಎಂದು ಹೇಳಿದೆ ?" ಎಂದು ಅವಳನ್ನು ಮತ್ತೆ ಪ್ರಶ್ನಿಸಿದ.

"ನನ್ನ ಅಪ್ಪ 'ಕೌರಿ' ಕೊಟ್ಟು 'ರೂಬಿ' ತರಲು ಹೋಗಿದ್ದಾರೆ, ಎಂದರೆ ನಾಣ್ಯಗಳನ್ನು ಕೊಟ್ಟು ದೀಪದ ಎಣ್ಣೆ ತರಲು ಹೋಗಿದ್ದಾರೆ" ಎಂದೂ, "ಅಮ್ಮ 'ಮಾತು ಮಾರಲು' ಹೋಗಿದ್ದಾರೆ ಎಂದರೆ ಯಾವುದೋ ಮದುವೆಯ ಮಾತಾಡಲು ಹೋಗಿದ್ದಾಳೆ" ಎಂದು ಹುಡುಗಿಯು ವಿವರಿಸಿದಳು.

ಹುಡುಗಿಯ ಮಾತಿನ ಚಾತುರ್ಯವನ್ನು ವ್ಯಾಪಾರಿ ಮೆಚ್ಚಿಕೊಂಡಿದ್ದ. ಈಕೆ ತುಂಬ ಜಾಣೆಯಿರಲೇಬೇಕು ಎನಿಸಿತು ಆತನಿಗೆ.

ಅಷ್ಟರಲ್ಲಿ, ಕಮ್ಮಾರ ಮತ್ತು ಅವನ ಹೆಂಡತಿ ಇಬ್ಬರೂ ಮನೆಗೆ ಬಂದರು. ಅವರಿಗೆ ತಮ್ಮ ಗುಡಿಸಿಲಿನಲ್ಲಿ ಆ ಪ್ರಾಂತ್ಯದ ಅತ್ಯಂತ ಪ್ರಸಿದ್ಧನೂ, ಶ್ರೀಮಂತನೂ ಆದ ವ್ಯಾಪಾರಿಯು ಕುಳಿತಿರುವುದನ್ನು ಕಂಡು ಆಶ್ಚರ್ಯವಾಯಿತು. ಗಂಡಸು ವಿನಯದಿಂದ ತಲೆತಗ್ಗಿಸಿ ನಿಂತು, "ತಮ್ಮಂಥವರು ಈ ಬಡವನ ಮನೆಗೆ ದಯಮಾಡಿಸಿದ ಉದ್ದೇಶವೇನು ?" ಎಂದು ಕೇಳಿಕೊಂಡ. ಅವನ ಹೆಂಡತಿಯೂ ಒಳಗಿನಿಂದ ಬಂದು ಅವನನ್ನು ಕೂಡಿಕೊಂಡಳು.

ವ್ಯಾಪಾರಿಯು ನೇರವಾಗಿ ವಿಷಯವನ್ನು ಪ್ರಸ್ತಾಪಿಸಿದ – "ನಿಮ್ಮ ಮಗಳನ್ನು ನನ್ನ ಮಗನಿಗೆ ಮದುವೆ ಮಾಡಿಕೊಡುವಂತೆ ಕೇಳಲು ಬಂದಿದ್ದೇನೆ."

ವ್ಯಾಪಾರಿಯ ಮಾತಿನಿಂದ ಕಮ್ಮಾರನಿಗೂ ಅವನ ಹೆಂಡತಿಗೂ ಈಗ ಮತ್ತಷ್ಟು ಸೋಜಿಗ ವಾಯಿತು. ಆದರೂ ಅವರು ಅವನ ಅಭಿಪ್ರಾಯವನ್ನು ಸಂದೇಹಿಸದೆ, ಕೂಡಲೆ ಒಪ್ಪಿಕೊಂಡರು. ಮದುವೆಯ ದಿನವೂ ನಿಶ್ಚಯವಾಯಿತು.

ಮದುವೆಯ ಸುದ್ದಿ ಗಾಳಿಮಾತಾಗಿ ಊರ ತುಂಬ ಹರಡಿತು. ಅಂಥ ಶ್ರೀಮಂತ ವ್ಯಾಪಾರಿಯು ತಮ್ಮ ಮಗನಿಗೆ, ಈ ಕೆಳಜಾತಿಯ, ಬಡ ಕಮ್ಮಾರನ ಮಗಳನ್ನು ಮದುವೆ ಮಾಡುತ್ತಾನಂತೆ ! ಎಂಥ ವಿಚಿತ್ರ ಎಂದು ಜನ ತಮ್ಮತಮ್ಮಲ್ಲೆ ಮಾತಾಡಿಕೊಂಡರು. ಈ ಮದುವೆಯು ತಮ್ಮ ಕುಲಾಚಾರಗಳಿಗೆ ವಿರುದ್ಧವಾದುದೆಂದು ಭಾವಿಸಿದರು. ಹೇಗಾದರೂ ಮದುವೆಯನ್ನು ತಪ್ಪಿಸಬೇಕೆಂದು ಕೆಲವು ಜನರು ಪ್ರಯತ್ನಿಸಿದರು. ಕುಚೇಷ್ಟೆಯ ಮಂದಿ ಮದುವೆ ಯಾಗಲಿರುವ ಹುಡುಗನ ಹತ್ತಿರ ಹೋಗಿ, ಅವನ ಮನಸ್ಸು ಕೆಡಿಸುವ ಕೆಲಸ ಮಾಡಿದರೂ ನೀನು ಹುಡುಗಿಯ ಹತ್ತಿರ ಹೋಗಿ, "ಅಪ್ಪನ ಮಾತಿನಂತೆ ನೀನು ನನ್ನನ್ನು ಮದುವೆಯಾದರೆ ನಾನು ನಿನ್ನನ್ನು ಪ್ರತಿದಿನವೂ ಏಳು ಬಾರಿ ಚಪ್ಪಲಿಯಿಂದ ಹೊಡೆಯುತ್ತೇನೆ ಎಂದು ಹೇಳಿ ಅವಳನ್ನು ಹೆದರಿಸು; ಹಾಗೂ ಅವಳು ಹೆದರದೆ ನಿನ್ನನ್ನೆ ಮದುವೆಯಾದರೆ ನಾವು ಹೇಳಿಕೊಟ್ಟಿರುವಂತೆಯೇ ಮಾಡು; ಅವಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಇದೊಂದೇ ಮಾರ್ಗ" ಎಂದು ಚುಚ್ಚಿಕೊಟ್ಟರು.

ಆ ಮೂರ್ಖ ಯುವಕನು ಕಮ್ಮಾರನ ಮನೆಗೆ ಹೋಗಿ ಅವಳ ಅಪ್ಪನ ಎದುರಿಗೇ ಹುಡುಗಿಗೆ ಆ ಕುಹಕಿಗಳು ಹೇಳಿಕೊಟ್ಟದ್ದನ್ನೆಲ್ಲ ವದರಿಬಿಟ್ಟನು. ಕಮ್ಮಾರನಿಗೆ ನಿಜವಾಗಿಯೂ ಭಯವಾಯಿತು. ಆದರೆ ಹುಡುಗಿಯು ಯುವಕನ ಮಾತುಗಳ ಹಿಂದಿರುವ ಕುಹಕಿಗಳ ತಂತ್ರವನ್ನು ಅರ್ಥಮಾಡಿಕೊಂಡು ತಾನೇ ಅಪ್ಪ–ಅಮ್ಮನಿಗೆ ಧೈರ್ಯ ಹೇಳಿದಳು. "ಅಂಥದೆಲ್ಲ ಏನೂ ಆಗುವುದಿಲ್ಲ; ನೀವು ಚಿಂತೆ ಮಾಡಬೇಡಿ. ಮನುಷ್ಯರು ಇತರರು ಹೇಳಿಕೊಟ್ಟಂತೆ

## ದೊಡ್ಡ ಮರ

ಅಮ್ಮ ಹೇಳುತ್ತಿದ್ದಳು
ಕಷ್ಟ ಬಂದಾಗ
ಮರಕ್ಕಿಂತ ಮರ
ದೊಡ್ಡದು ಎಂದು

ನಾನಿನ್ನೂ ಚಿಕ್ಕವ
ನನಗಾಗ ತಿಳಿದಿರಲಿಲ್ಲ
ಅವಳ ಮಾತಿನರ್ಥ.
ನನಗೀಗ ತಿಳಿಯುತ್ತಿದೆ
ಆ ಮಾತಿನ ಬೃಹದರ್ಥ.
ಅವಳ ಕಷ್ಟದ ಮುಂದೆ
ನಾನೊಂದು ಸಣ್ಣ ಗಿಡ,
ಅವಳೊಂದು ದೊಡ್ಡ ಮರ !

**ಆರ್. ಯು. ಅಭಿಷೇಕ್**
ಸೂಕ್ಷ್ಮಜೀವಿಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನ ಭಾರತಿ, ಬೆಂಗಳೂರು – ೫೬೦ ೦೫೬

ಕಾವ್ಯಲೋಕ

ಮಾತಾಡುವುದಕ್ಕೂ, ಸ್ವತಃ ಮಾಡುವುದಕ್ಕೂ ವ್ಯತ್ಯಾಸವಿರುತ್ತದೆ. ಅದೆಲ್ಲ ನಡೆಯದಂತೆ ನಾನು ನೋಡಿಕೊಳ್ಳುತ್ತೇನೆ" ಎಂದು ಭರವಸೆಕೊಟ್ಟಳು.

ನಿಶ್ಚಯಿಸಿದ ದಿನ ಇಬ್ಬರ ಮದುವೆ ನಡೆದು ಹೋಯಿತು. ಮೊದಲ ದಿನ ನಡುರಾತ್ರಿಯಲ್ಲಿ ಎದ್ದ ವರಮಹಾಶಯ ಪಕ್ಕದಲ್ಲಿ ಮಲಗಿದ್ದ ಹೆಂಡತಿಯು ನಿದ್ದೆ ಮಾಡುತ್ತಿರುವವಳೆಂದು ಭಾವಿಸಿ ಅವಳನ್ನೂ ಹೊಡೆಯಲು ಚಪ್ಪಲಿಯನ್ನು ಕೈಗೆತ್ತಿಕೊಂಡ.

ಆಕೆ ನಿದ್ದೆ ಮಾಡಿರಲಿಲ್ಲ; ಸುಮ್ಮನೆ ಕಣ್ಣುಮುಚ್ಚಿ ಮಲಗಿದ್ದಳು. ಕಣ್ಣು ಬಿಟ್ಟು ಗಂಡನನ್ನು ನೋಡಿ, "ಸ್ವಲ್ಪ ಇರು; ಮೊದಲ ರಾತ್ರಿ ಹೀಗೆಲ್ಲ ಮಾಡುವುದು ಅಪಶಕುನ" ಎಂದು ಹೇಳಿ ಅವನನ್ನು ತಡೆದಳು.

ಗಂಡನಿಗೆ ಅದೂ ಸರಿಯೆನಿಸಿ ಚಪ್ಪಲಿಯನ್ನು ಪಕ್ಕಕ್ಕೆ ಎಸೆದು, ಮಲಗಿದ. ಮಾರನೆಯ ರಾತ್ರಿ ಪುನಃ ಅವನು ಚಪ್ಪಲಿಯನ್ನು ಕೈಗೆತ್ತಿಕೊಂಡಾಗ, "ಮದುವೆಯಾದ ಮೊದಲ ಒಂದು ವಾರ ಗಂಡ ಹೆಂಡತಿ ಜಗಳವಾಡಬಾರದು ಎಂಬುದು ನಿನಗೆ ಗೊತ್ತಿರಬೇಕು. ನೀನು ಬುದ್ಧಿವಂತ; ನನ್ನ ಮಾತು ಕೇಳುತ್ತೀಯೆಂದು ಬಲ್ಲೆ. ಒಂದು ವಾರ ತಾಳಿಕೋ; ನಾನು ಹೇಳಿದ ವಿಚಾರವನ್ನು ಯೋಚಿಸು. ಎಂಟನೆಯ ದಿನ ನಿನಗೆ ಇಷ್ಟಬಂದಂತೆ ನನ್ನನ್ನು ಹೊಡೆಯಬಹುದು" ಎಂದು ಹೇಳಿ ಅವನನ್ನು ಸಮಾಧಾನಪಡಿಸಿದಳು. ಹೀಗೆ ಒಂದು ವಾರ ಸತಾಯಿಸಿ, ಏಳನೆಯ ದಿನವೆ, ತಮ್ಮ ಸಂಪ್ರದಾಯದಂತೆ ವಧುವು ತೌರುಮನೆಗೆ ಹೊರಟುಹೋದಳು.

ಇತ್ತ ಯುವಕನ ತಲೆ ಕೆಡಿಸಿದ್ದ ಕಿಡಿಗೇಡಿಗಳು, ಅವನನ್ನು ಒಂಟಿಯಾಗಿ ಕಂಡಾಗಲೆಲ್ಲ, "ಓಹೋ ಅವಳನ್ನು ಓಡಿಸಿಬಿಟ್ಟೆಯಾ! ಎಲ್ಲ ನಾವು ಊಹಿಸಿದಂತೆಯೇ ಆಯಿತು" ಎಂದು ಹಂಗಿಸತೊಡಗಿದರು. ಇತ್ತ ಸೋಮಾರಿಯಾಗಿ ಕಾಲ ಕಳೆಯುತ್ತಿದ್ದ ಮಗನನ್ನು ಸರಿದಾರಿಗೆ ತರುವುದು ಹೇಗೆ ಎಂದು ಅವನ ಅಮ್ಮ ಚಿಂತಿಸುತ್ತಿದ್ದಳು. ಅವಳಿಗೆ ಒಂದು ಉಪಾಯ ಹೊಳೆಯಿತು. ಇವನು ಪರಸ್ಥಳಕ್ಕೆ ಹೋಗಿ ಏನಾದರೂ ವ್ಯಾಪಾರ, ವ್ಯವಹಾರ ಮಾಡುವುದನ್ನು ಕಲಿತರೆ, ಸ್ವತಂತ್ರವಾಗಿ ಜೀವನ ನಡೆಸಿಯಾನು ಎನಿಸಿತು. ಗಂಡನ ಹತ್ತಿರ ಹೋಗಿ ಇವನಿಗೆ ವ್ಯಾಪಾರ ಮಾಡಲು ಕೆಲವು ಸರಕುಗಳನ್ನೂ, ಒಂದಷ್ಟು ಹಣವನ್ನೂ ಕೊಡಿ; ಪರಸ್ಥಳಗಳಿಗೆ ಹೋಗಿ ವ್ಯಾಪಾರದಿಂದ ಲಾಭ ಗಳಿಸುವುದನ್ನೂ, ವ್ಯವಹಾರ ಚಾತುರ್ಯವನ್ನೂ ಕಲಿಯಲಿ ಎಂದು ಕೇಳಿಕೊಂಡಳು.

"ಛೆ, ಛೆ, ಎಲ್ಲಾದರೂ ಉಂಟೆ! ಇವನ ಕೈಲಿ ದುಡ್ಡುಕೊಡುವುದೂ ಒಂದೇ. ಅದನ್ನು ಹೊಳೆಗೆ ಹಾಕುವುದೂ ಒಂದೇ" ಎಂದು ಸಿಡುಕಿದ.

ಆ ತಾಯಿ ಬಿಡಲಿಲ್ಲ. "ಪರವಾಗಿಲ್ಲ ಕೊಡಿ : ಪರಸ್ಥಳಗಳಿಗೆ ಹೋಗಿ ವ್ಯಾಪಾರ ಮಾಡಲಿ; ಅದರಿಂದ ಲಾಭ ಗಳಿಸಿದರೆ ಒಳ್ಳೆಯದೇ ಆಯಿತು. ಒಂದು ವೇಳೆ ಹಾಕಿದ ಬಂಡವಾಳವನ್ನೂ ಕಳೆದುಕೊಂಡು ಭಿಕಾರಿಯಾದರೆ ? – ಹಾಗಾಗಲಾರದು – ಆಗ ದುಡ್ಡಿನ ಬೆಲೆ ಏನೆಂಬುದು ತಿಳಿಯುತ್ತದೆ. ಮತ್ತೆ




ವ್ಯವಹಾರದಲ್ಲಿ ತೊಡಗಿ ಕಷ್ಟಪಟ್ಟು ಸಂಪಾದನೆ ಮಾಡುವುದನ್ನು ಕಲಿಯುತ್ತಾನೆ. ಮನೆಯಿಂದ ಹೊರಗೆ ಹೋಗಿ ಅನುಭವ ಪಡೆಯದಿದ್ದರೆ ಅವನು ಯಾವ ಕೆಲಸಕ್ಕೂ ಬಾರದವನಾಗುತ್ತಾನೆ" ಎಂದೆಲ್ಲ ಹೇಳಿ ಒತ್ತಾಯ ಮಾಡಿದಳು.

"ಆಯ್ತು" ಎಂದು ಹೆಂಡತಿಯ ಸಲಹೆಯನ್ನು ಒಪ್ಪಿಕೊಂಡ ವ್ಯಾಪಾರಿಯು ಕೆಲವು ವ್ಯಾಪಾರದ ಸರಕುಗಳನ್ನೂ, ಒಂದಷ್ಟು ಹಣ ಮತ್ತು ಒಂದೆರಡು ಜನ ಸಹಾಯಕರನ್ನೂ ಹೊಂದಿಸಿಕೊಟ್ಟು ಮಗನನ್ನು ಪರಸ್ಥಳಗಳಿಗೆ ಹೋಗಿ ವ್ಯಾಪಾರ ಮಾಡಲು ಕಳಿಸಿಕೊಟ್ಟನು.

ಕಿರಿಯ ವ್ಯಾಪಾರಿಯ ತಂಡವು ಸ್ವಂತ ಊರಿನಿಂದ ಕೆಲವು ಗಾವುದ ಸಾಗಿದ ಮೇಲೆ ಎತ್ತರವಾದ ಗೋಡೆಗಳಿಂದ ಸುತ್ತುವರಿಯಲ್ಪಟ್ಟ ಒಂದು ತೋಟದ ಸಮೀಪ ಬಂದರು. ತರುಣ ವ್ಯಾಪಾರಿಗೆ ಕೋಟೆಯಂಥ ಎತ್ತರವಾದ ಆ ಗೋಡೆಗಳ ಒಳಗೆ ಏನಿದೆಯೆಂದು ತಿಳಿಯುವ ಕುತೂಹಲವಾಯಿತು. ನೋಡಿ ಬರಲು ತನ್ನ ಸಹಾಯಕರನ್ನು ಕಳಿಸಿಕೊಟ್ಟ. ಅವರು ಹಿಂತಿರುಗಿ ಬಂದು ಆ ಸುಂದರವಾದ ತೋಟದ ಒಳಗೆ ಒಂದು ಭವ್ಯವಾದ ಸೌಧ ಇರುವುದಾಗಿ ತಿಳಿಸಿದರು. ಸ್ವತಃ ತರುಣ ವ್ಯಾಪಾರಿಯು ಸೌಧದ ಹತ್ತಿರ ಹೋದಾಗ ಒಬ್ಬಳು ಸುಂದರಿಯಾದ ಹೆಂಗಸು ಅವನನ್ನು ಸ್ವಾಗತಿಸಿ ತನ್ನೊಡನೆ 'ನಾರ್ಡ್' (ಎಂದರೆ ಪಗಡೆ ಕಾಯಿಯಂಥ ಕಾಯಿಗಳನ್ನೂ, ದಾಳಗಳನ್ನೂ ಬಳಸಿ ಆಡುವ ಒಂದು ಬಗೆಯ ಜೂಜು) ಆಡಲು ಬರುವಂತೆ ಆಹ್ವಾನಿಸಿದಳು. ಈ ಜೂಜಾಟದಲ್ಲಿ ಅವಳು ಪ್ರವೀಣೆ. ಅಲ್ಲದೆ ಎದುರಾಳಿಯು ಒಡ್ಡಿದ ಪಣವನ್ನೆಲ್ಲ ಗೆದ್ದುಕೊಳ್ಳಲು ಅವಳು ಒಂದು ತಂತ್ರವನ್ನು ಉಪಯೋಗಿಸುತ್ತಿದ್ದಳು.

ಆಟಕ್ಕೆ ಕೂರುವಾಗ ಆಕೆ ಪುಟ್ಟ ಬೆಕ್ಕೊಂದನ್ನು ತನ್ನ ಬಳಿ ಕೂರಿಸಿಕೊಂಡಿರುತ್ತಿದ್ದಳು. ಜೂಜಿನಲ್ಲಿ ತಾನು ಸೋಲುವ ಸಂದರ್ಭ ಬಂತೆಂದರೆ, ಆಕೆ ಸೂಚನೆ ನೀಡಿದಂತೆ ಆ ಬೆಕ್ಕು ದೀಪದ ಬಳಿ ಹೋಗಿ ತನ್ನ ಬಾಲದಿಂದ ದೀಪವನ್ನು ಆರಿಸಿಬಿಡುತ್ತಿತ್ತು. ಸೇವಕಿಯರು ಬಂದು ಮತ್ತೆ ದೀಪ ಹೊತ್ತಿಸುವಷ್ಟರಲ್ಲಿ, ಕತ್ತಲಲ್ಲಿ, ಆ ಮೋಸಗಾತಿ ಆಟದ ಕಾಯಿಗಳನ್ನು ತನಗೆ ಅನುಕೂಲವಾಗುವ ರೀತಿ ಬದಲಾಯಿಸಿ ಬಿಡುತ್ತಿದ್ದಳು. ತನ್ನೊಡನೆ 'ನಾರ್ಡ್' ಆಡಲು ಬಂದವರ ಜೊತೆಯಲ್ಲಿ ಈ ತಂತ್ರವನ್ನು ಬಳಸಿ ಅಪಾರ ಸಂಪತ್ತನ್ನು ಸಂಗ್ರಹಿಸಿದ್ದಳು. ಈಗ 'ನಾರ್ಡ್' ಆಡಲು ಕುಳಿತ ತರುಣ ವ್ಯಾಪಾರಿಯ ವಿರುದ್ಧವೂ ಈ ಮೋಸದ ತಂತ್ರವನ್ನು ಬಳಸಿ ಅವನ ಬಳಿಯಿದ್ದ ಹಣ, ವ್ಯಾಪಾರಕ್ಕಾಗಿ ತಂದಿದ್ದ ಸರಕುಗಳು, ಆತನ ಸಂಗಡಿಗರು, ಕಡೆಗೆ ಆತನನ್ನೂ ಗೆದ್ದುಕೊಂಡಳು.

ನಿರ್ಗತಿಕನಾದ ತರುಣನನ್ನು ಸೆರೆಮನೆಗೆ ದೂಡಿದರು. ಅವನಿಗೆ ದಿನವೂ ಅತ್ಯಲ್ಪ, ಅದರಲ್ಲೂ ಕೆಟ್ಟ ಆಹಾರವನ್ನು ನೀಡುತ್ತಿದ್ದರು, ಹೊಡೆದು ಬಡಿದು ಮಾಡುತ್ತಿದ್ದರು, ಕೆಟ್ಟ ಕೆಟ್ಟ ಮಾತುಗಳಲ್ಲಿ ಬೈಯುತ್ತಿದ್ದರು. ತನ್ನನ್ನು ಹೇಗಾದರೂ ಈ ಬಂಧನದಿಂದ ಪಾರುಮಾಡು ಎಂದು ಅವನು ಮತ್ತೆ ಮತ್ತೆ ದೇವರನ್ನು ಬೇಡಿಕೊಳ್ಳುತ್ತಿದ್ದ.

ಒಂದು ಮಧ್ಯಾಹ್ನ ಸೆರೆಮನೆಯ ಹೊರಗೆ ಯಾರೋ ಹೊಸಬರು ಓಡಾಡುತ್ತಿರುವುದನ್ನು ಗಮನಿಸಿದ ತರುಣ ಸಂಜ್ಞೆ ಮಾಡಿ ಆತನನ್ನು ಹತ್ತಿರ ಕರೆದು ವಿಚಾರಿಸಿದಾಗ ಆತ ತನ್ನ ಊರಿನವನೇ ಎಂಬುದು ತಿಳಿಯಿತು. ಒಳ್ಳೆಯದೇ ಆಯಿತು ಎಂದುಕೊಂಡು, "ನಾನು, ಇಲ್ಲಿಂದ ಹೊರ ಬರುವಂತಿಲ್ಲ; ಹೇಗಾದರೂ ನೀನು ನನಗೆ ಸಹಾಯ ಮಾಡಿ ಪುಣ್ಯ ಕಟ್ಟಿಕೋ" ಎಂದು ಅಂಗಲಾಚಿದ.

ಒಳಗೆ ಹೋಗಿ ಎರಡು ಪತ್ರಗಳನ್ನು ಬರೆದು ತಂದು, ಆ ಹೊಸಬನ ಕೈಲಿಟ್ಟು "ಇವುಗಳಲ್ಲಿ ಒಂದನ್ನು ನನ್ನ ಅಪ್ಪನಿಗೆ ಕೊಡು; ಮತ್ತೊಂದನ್ನು ನನ್ನ ಹೆಂಡತಿಗೆ ತಲುಪಿಸು. ಅಷ್ಟು ಉಪಕಾರ ಮಾಡಿದರೆ ನಾನು ಸೆರೆಮನೆಯಿಂದ ಹೊರಬಂದ ಮೇಲೆ ನಿನಗೆ ಬೇಕಾದಷ್ಟು ಇನಾಮು ಕೊಡುತ್ತೇನೆ" – ಎಂದು ಹೇಳಿದ.

ಪತ್ರಗಳನ್ನು ಇಸಕೊಂಡು ಹೋದ ವ್ಯಕ್ತಿಗೆ ಓದುಬರಹಗಳು ಬರುತ್ತಿರಲಿಲ್ಲ. ಹೀಗಾಗಿ ಅವನು ಅಪ್ಪನಿಗಾಗಿ ಕಿರಿಯ ವ್ಯಾಪಾರಿಯು ಬರೆದಿದ್ದ ಪತ್ರವನ್ನು ಅವನ ಹೆಂಡತಿಗೂ, ಹೆಂಡತಿಗಾಗಿ ಬರೆದಿದ್ದ ಪತ್ರವನ್ನು ಅಪ್ಪನಿಗೂ ತಲುಪಿಸಿದ.

ತನ್ನ ಕೈಗೆ ಬಂದ ಪತ್ರವನ್ನು ಓದಿಕೊಂಡ ಅಪ್ಪನಿಗೆ ತುಂಬ ಖುಷಿಯಾಯಿತು. ಆದರೆ ಅದರ ಮೇಲೆ ಸೊಸೆಯ ವಿಳಾಸವನ್ನು ಬರೆದಿರುವುದು, ಮತ್ತು ತಾನು ಹಿಂದಿರುಗಿ ಬಂದಮೇಲೆ ಅವಳನ್ನು ಹೊಡೆಯುವುದು – ಈ ಒಕ್ಕಣೆಯನ್ನು ಓದಿ ತುಂಬ ಗೊಂದಲವಾಯಿತು. ಇತ್ತ ಯುವಕನ ಹೆಂಡತಿಗೆ ತನ್ನ ಗಂಡನಿಗೆ ಒದಗಿದ ಪರಿಸ್ಥಿತಿಯನ್ನು ಓದಿ ದುಃಖವಾಯಿತು ಮತ್ತು ಪತ್ರದ ಮೇಲೆ ತನ್ನ ಮಾವನ ವಿಳಾಸವನ್ನು ಕಂಡು ಗೊಂದಲವಾಯಿತು. ಗಾಬರಿಯಿಂದ ಆಕೆ ಓಡೋಡಿ ಮಾವನ ಮನೆಗೆ ಬಂದಳು. ಇಬ್ಬರೂ ತಮಗೆ ತಲುಪಿದ ಪತ್ರಗಳ ವಿಷಯವನ್ನು ವಿನಿಮಯ ಮಾಡಿಕೊಂಡು ಇಲ್ಲಿ ಏನೋ ಅಚಾತುರ್ಯ ನಡೆದಿರಬೇಕೆಂದು ಊಹಿಸಿದರು.

ವರ್ತಕನ ಸೊಸೆ ತುಂಬ ಬುದ್ಧಿವಂತೆ ಮತ್ತು ಧೈರ್ಯಶಾಲಿ. ತಾನೇ ಆತ ಹೇಳಿರುವ ಸ್ಥಳಕ್ಕೆ ಹೋಗಿ ನೋಡುವುದಾಗಿಯೂ, ಸಾಧ್ಯವಾದರೆ ಅವನನ್ನು ಬಂಧನದಿಂದ ಬಿಡಿಸುವುದಾಗಿಯೂ ಮಾವನಿಗೆ ಸಮಾಧಾನ ಹೇಳಿದಳು. ಹಿರಿಯ ವರ್ತಕನು ಅವಳ ಧೈರ್ಯವನ್ನು ಮೆಚ್ಚಿ ಅವಳಿಗೆ ಒಂದಷ್ಟು ಹಣ ಕೊಟ್ಟು ಕಳುಹಿಸಿದನು.

ತರುಣಿಯು ಒಬ್ಬ ರಾಜಕುಮಾರನ ವೇಷಧರಿಸಿ ಆ ಮೋಸಗಾರ್ತಿ ಹೆಂಗಸು ವಾಸಿಸುತ್ತಿದ್ದ ಸೌಧದ ಬಳಿಗೆ ಬಂದಿದ್ದಳು(ನು). ತಾನೊಬ್ಬ ಭಾರಿ ಶ್ರೀಮಂತನ ಮಗನೆಂದೂ, ಆ ಮನೆಯ ಒಡತಿಯೊಡನೆ 'ನಾರ್ಡ್' ಆಡಲು ಬಂದಿರುವುದಾಗಿಯೂ ಕಾವಲುಗಾರರೊಡನೆ ಹೇಳಿಕಳಿಸಿದನು(ಳು). ಮನೆಯೊಡತಿಗೆ ಬಹಳ ಖುಷಿಯಾಗಿ, ಜೂಜಾಟಕ್ಕೆ ಅಗತ್ಯವಾದ ಸಿದ್ಧತೆಗಳನ್ನು ಮಾಡಲು ಒಳಗೆ ಹೋದಳು.

ಅಷ್ಟರಲ್ಲಿ ಆ ಶ್ರೀಮಂತ ಯುವಕನು ಅಲ್ಲಿದ್ದ ಸೇವಕಿಯರಿಗೆ ಲಂಚಕೊಟ್ಟು ಜೂಜಿನಲ್ಲಿ ಸದಾ ಅವರ ಒಡತಿಯೆ ಗೆಲ್ಲುವ ರಹಸ್ಯವನ್ನು ತಿಳಿದುಕೊಂಡಳು(ನು). ಲಂಚದ ಆಸೆಗೆ, ಸೇವಕಿಯರು ತಮ್ಮ ಒಡತಿಯು ಬಳಸುವ ತಂತ್ರವನ್ನು ಪಿಸುಮಾತಿನಲ್ಲಿ ಬಾಯಿಬಿಟ್ಟರು.

ತಾನು ತನ್ನ ಬಿಡಾರಕ್ಕೆ ಹೋಗಿ ಇನ್ನಷ್ಟು ಹಣ ತೆಗೆದುಕೊಂಡು ಸಂಜೆ ಪುನಃ ಬರುವುದಾಗಿ ಹೇಳಿ ಮಾರುವೇಷದ ತರುಣಿಯು ಅಲ್ಲಿಂದ ಹೊರಗೆ ಬಂದಳು. ಸಂಜೆ ಬರುವಾಗ ಆ ಶ್ರೀಮಂತ ಯುವಕನು ಒಂದು ದೊಗಲೆ ಮೇಲಂಗಿಯನ್ನು ಧರಿಸಿ ಅದರ ಉದ್ದ ತೋಳಿನ ಮಡಿಕೆಯಲ್ಲಿ ಒಂದು ಪುಟ್ಟ ಇಲಿಯನ್ನು ಬಚ್ಚಿಟ್ಟುಕೊಂಡು ಬಂದಿದ್ದ. ಆಟವು ಆರಂಭವಾಯಿತು. ಮಾರುವೇಷದ ಶ್ರೀಮಂತ ಪುತ್ರನೂ ಕೂಡ ಇಂಥ ಜೂಜುಗಳಲ್ಲಿ ಸಾಕಷ್ಟು ಚತುರನೇ ಇದ್ದು ಒಂದೊಂದಾಗಿ ಆಟವನ್ನು ಗೆಲ್ಲುತ್ತ ಹೋದನು.

ಮೋಸಗಾತಿ ಮಹಿಳೆಗೆ ತನ್ನ ಸೋಲನ್ನು ಬಹುಹೊತ್ತು ಸಹಿಸಿಕೊಳ್ಳಲಾಗಲಿಲ್ಲ. ಆಕೆ ಮೆಲ್ಲಗೆ ಸಂಜ್ಞೆ ಮಾಡಿ ತನ್ನ ಬಳಿಯಿದ್ದ ಬೆಕ್ಕನ್ನು ಛೂ ಬಿಟ್ಟಳು. ಬೆಕ್ಕು ದೀಪದ ಬಳಿ ಹೋಗುವ ಹೊತ್ತಿಗೆ ಸರಿಯಾಗಿ ಗುಪ್ತ ವೇಷದ ತರುಣಿಯು ತನ್ನ ತೋಳಿನ ಮಡಿಕೆಯಲ್ಲಿ ಬಚ್ಚಿಟ್ಟುಕೊಂಡಿದ್ದ ಪುಟ್ಟ ಇಲಿಯನ್ನು ಬಿಡುಗಡೆ ಮಾಡಿದಳು. ಬೆಕ್ಕನ್ನು ಕಂಡ ಇಲಿಯು ಹೆದರಿಕೊಂಡು ಕೊಠಡಿಯ ಸುತ್ತಮುತ್ತ ದಿಕ್ಕಾಪಾಲಾಗಿ ಓಡತೊಡಗಿತು; ಅದನ್ನು ಅಟ್ಟಿಸಿಕೊಂಡು ಬೆಕ್ಕು ಕೂಡ ಓಡತೊಡಗಿತು. ದೀಪವು ಆರಲೇ ಇಲ್ಲ !

ಪೆಚ್ಚಾಗಿ ಕುಳಿತಿದ್ದ ಮೋಸಗಾತಿಯನ್ನು, ಮಾರುವೇಷದ ತರುಣನು ಆಟವನ್ನು ಮುಂದುವರಿಸೋಣವೇ – ಎಂದು ಕೇಳಿದನು. ಬೇರೆ ದಾರಿ ಇಲ್ಲದೆ ಆ ಮೋಸಗಾತಿಯು ಒಪ್ಪಲೇ ಬೇಕಾಯಿತು. ಈಗ ಪ್ರತಿ ಆಟದಲ್ಲೂ ಗೆಲ್ಲಲು ಮಾರುವೇಷದ ತರುಣನಿಗೆ ಯಾವ ಆತಂಕವೂ ಇರಲಿಲ್ಲ. ಒಂದೊಂದು ಆಟದಲ್ಲೂ ಮೋಸಗಾತಿಯು ಸೋಲು ಮಾರುವೇಷದ ತರುಣಿಯ ಮೂರ್ಖ ಗಂಡನಿಂದ ಗೆದ್ದುಕೊಂಡಿದ್ದ ಸಂಪತ್ತನ್ನೆಲ್ಲವನ್ನೂ ಪಣವಾಗಿ ಒಡ್ಡಿ ಕಳೆದುಕೊಂಡಳು. ಅಷ್ಟು ಮಾತ್ರವಲ್ಲ; ಅವಳಲ್ಲಿದ್ದ ಅಪಾರ ಸಂಪತ್ತು, ಆ ಭವ್ಯ ಸೌಧ, ಆಕೆಯ ಪರಿಚಾರಕರ ಪರಿವಾರವೆಲ್ಲವೂ ತರುಣಿಯ ವಶವಾಯಿತು.

ಹೀಗೆ ದೊರೆತ ಸಂಪತ್ತೆಲ್ಲವನ್ನೂ, ಪೆಟ್ಟಿಗೆಗಳಲ್ಲಿ ತುಂಬಿಸಿ ಆ ಮೋಸಗಾತಿಗೆ ಸೇರಿದ ಕುದುರೆಗಳ ಮೇಲೆ ಹೇರಿಕೊಂಡು ತರುಣಿಯು ತನ್ನ ಗಂಡನನ್ನು ಬಂಧಿಸಿಟ್ಟಿದ್ದ ಸೆರೆಮನೆಯ ಬಳಿಗೆ ಬಂದು, ತನ್ನ ಗಂಡನನ್ನು ಮಾತ್ರವಲ್ಲದೆ ಅಲ್ಲಿ ಸೆರೆಯಾಳುಗಳಾಗಿದ್ದ ಎಲ್ಲರನ್ನೂ ಬಿಡುಗಡೆ ಮಾಡಿದಳು.

ಯುವಕನು ಸೆರೆಮನೆಯಿಂದ ಹೊರಗೆ ಬಂದು ತನ್ನನ್ನು ಬಿಡುಗಡೆ ಮಾಡಿದವರಿಗೆ ಕೃತಜ್ಞತೆ ಸಲ್ಲಿಸಲು ಹೋದಾಗ, ಮಾರುವೇಷದಲ್ಲಿದ್ದ ತನ್ನ ಹೆಂಡತಿಯನ್ನು ಗುರುತಿಸಲಿಲ್ಲ. ಆದರೆ ಆತ (ಆಕೆ) ಮಾತ್ರ ಈ ಯುವಕನ ಬಗೆಗೆ ವಿಶೇಷ ಆಸಕ್ತವಹಿಸಿ, ಆತನನ್ನು "ನೀನು ನನ್ನ ಅಂಗರಕ್ಷಕನಾಗಿರಲು ಒಪ್ಪುವೆಯಾ ?" ಎಂದು ಕೇಳಿದಳು. ಆತ ಸಂತೋಷದಿಂದ ಒಪ್ಪಿದ. ಮಾರುವೇಷದ ಯುವಕನು ತನ್ನ ಸರ್ದಾರನಿಗೆ ಉಚಿತವಾದ ಹೊಸ ಬಟ್ಟೆಗಳನ್ನು ಕೊಟ್ಟು, ಆತನು ಈವರೆಗೆ ತೊಟ್ಟುಕೊಂಡಿದ್ದ ಮಾಸಲು ಹರಕು ಬಟ್ಟೆಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿಸಿ ಅದರ ಕೀಲಿಕೈಯನ್ನು ತನ್ನ ಬಳಿಯೆ ಇಟ್ಟುಕೊಂಡಳು. ಎಲ್ಲವೂ ಸಿದ್ಧವಾದ ಮೇಲೆ ಆ ಮೋಸಗಾತಿ ಹೆಂಗಸನ್ನೂ ತಮ್ಮ ಜೊತೆಯಲ್ಲಿ ಕರೆದುಕೊಂಡು ಎಲ್ಲರೂ ಅಲ್ಲಿಂದ ಹೊರಟರು.

ವ್ಯಾಪಾರಿಯ ಊರು ಸಮೀಪಿಸಿದಾಗ ಮಾರುವೇಷದ ತರುಣನು ನನಗೆ ಸ್ವಲ್ಪ ಸ್ವಂತ ಕೆಲಸವಿದೆ; ಅದನ್ನು ಮುಗಿಸಿಕೊಂಡು ನಾನು ಹಿಂದಿನಿಂದ ಬರುತ್ತೇನೆ. ಈಗ ನೀವು ಮನೆಗೆ ಹೋಗಿ ಈ ವಸ್ತುಗಳನ್ನೆಲ್ಲ ನಿಮ್ಮ ಮನೆಯಲ್ಲಿ ಭದ್ರವಾಗಿಡಿ; ನಿಮ್ಮ ಅಪ್ಪ ಅಮ್ಮ ನಿಮ್ಮನ್ನು ನಂಬುತ್ತಾರೆ. ಇನ್ನು ಸುಮಾರು ಇಪ್ಪತ್ತು ದಿನಗಳಲ್ಲಿ ನಾನು ನಿಮ್ಮಲ್ಲಿಗೆ ಬರುತ್ತೇನೆ. ಒಂದು ವೇಳೆ ನಾನು ಬರದಿದ್ದರೆ, ಈ ಎಲ್ಲವನ್ನೂ ನೀವೇ ಇಟ್ಟುಕೊಳ್ಳಬಹುದು ಎಂದು ಹೇಳಿ ಬೇರೆ ದಾರಿ ಹಿಡಿದು ತನ್ನ ಮನೆಯ ಕಡೆ ಹೋದನು.

ಸರ್ದಾರನು ಕುದುರೆಗಳ ಮೇಲೆ ಹೇರಿದ್ದ ಪೆಟ್ಟಿಗೆಗಳು ಮತ್ತು ಆ ಮೋಸಗಾತಿ ಹೆಂಗಸಿನೊಂದಿಗೆ ತಂದೆಯ ಮನೆಗೆ ಹೋದ(ಳು). ಇತ್ತ ಮಾರುವೇಷದ ಶ್ರೀಮಂತ ಯುವಕನು ತನ್ನ ತಂದೆತಾಯಿರ ಬಳಿಗೆ ಹೋಗಿ, ಮಾರುವೇಷವನ್ನು ತೆಗೆದಿರಿಸಿ, ಅವರಿಗೆ ನಡೆದ ಕಥೆಯನ್ನೆಲ್ಲ ತನ್ನ ಅಪ್ಪ ಅಮ್ಮನಿಗೆ ಹೇಳಿದಳು. ತಾನು ಆ ಮೋಸದ ಜೂಜುಗಾರ್ತಿಯನ್ನು ಸೋಲಿಸಿ, ಜಯ ಗಳಿಸಿದ ವಿಚಾರವನ್ನು ಯಾರಿಗೂ ತಿಳಿಸ ಬಾರದೆಂದು ಅವರಿಗೆ ತಾಕೀತು ಮಾಡಿದಳು. ಮತ್ತೆ ಹಿರಿಯ ವರ್ತಕನ ಸೊಸೆಯ ಉಡುಪಿನಲ್ಲಿ ಮಾವನ ಮನೆಗೆ ಬಂದಳು.

ಹೆಂಡತಿಯನ್ನು ಕಂಡೊಡನೆ ಅವಳ ಮೂರ್ಖ ಗಂಡನು, "ಇಷ್ಟು ದಿನ ಎಲ್ಲಿಗೆ ಹೋಗಿದ್ದೆ ? ನಾನು ನಿನಗೆ ಈಗ ಎಷ್ಟು ಬಾರಿ ಹೊಡೆಯಬೇಕೆಂಬುದನ್ನು ಲೆಕ್ಕವಿಟ್ಟಿರುವೆಯಾ ?" ಎಂದು ಸಿಟ್ಟಿನಿಂದ ಚಪ್ಪಲಿಯನ್ನು ಕೈಗೆತ್ತಿಕೊಂಡನು.

ಯುವಕನ ಅಪ್ಪ ಅಮ್ಮ ಅಡ್ಡಬಂದು ಅವನನ್ನು ತಡೆದು, "ನಮ್ಮ ಪಾಲಿನ ಭಾಗ್ಯಲಕ್ಷ್ಮಿಯಂತಹ ಸೊಸೆ ಮನೆಗೆ ಬಂದಿರುವ ಶುಭ ಗಳಿಗೆಯನ್ನು ಹಾಳು ಮಾಡುತ್ತೀಯ, ಮೂರ್ಖ" ಎಂದು ಗದರಿಸಿದರು. ಯುವಕನ ತಾಯಿಯು, "ಅಷ್ಟು ಕಷ್ಟವನ್ನು ಅನುಭವಿಸಿದ ಮೇಲಾದರೂ, ಜೇಡಿಮಣ್ಣು ತುಂಬಿದ ನಿನ್ನ ತಲೆಗೆ ಸ್ವಲ್ಪ ಬುದ್ಧಿ ಹೊಕ್ಕಿರಬಹುದೆಂದು ತಿಳಿದಿದ್ದೆ. ಆದರೆ ನೀನು ಮಾತ್ರ ಹಿಂದಿನಂತೆ ಪೆದ್ದನಾಗಿಯೇ ಇದ್ದೀಯೆ" ಎಂದು ಅಲವತ್ತುಕೊಂಡಳು.

ಅಷ್ಟರಲ್ಲಿ ಸೊಸೆಯು ತನ್ನ ಬಳಿ ಇರಿಸಿಕೊಂಡಿದ್ದ ಕೀಲಿಕೈಯಿಂದ, ಪುಟ್ಟ ಪೆಟ್ಟಿಗೆಯ ಬಾಗಿಲು ತೆರೆದು ಅದರೊಳಗಿದ್ದ ಮಾಸಿದ ಹಳೆ ಬಟ್ಟೆಗಳನ್ನು ತೆಗೆದು, ಅವನೆದುರಿಗೆ ಹಿಡಿದು, "ನೀನು ಸೆರೆಮನೆಯಲ್ಲಿ ಹಾಕಿಕೊಂಡಿದ್ದ ಬಟ್ಟೆ ಇದೇ ಅಲ್ಲವೆ ? ಅಲ್ಲಿನ ಕಾವಲುಗಾರರು ನಿನಗೆ ಎಂಥ ಊಟ ಕೊಡುತ್ತಿದ್ದರು, ಹೇಗೆ ನಿನ್ನನ್ನು ಹಿಂಸಿಸುತ್ತಿದ್ದರು – ನೆನಪು ಮಾಡಿಕೊ. ಅಲ್ಲಿಗೆ ಮಾರುವೇಷದಲ್ಲಿ ಬಂದು ನಿನ್ನನ್ನು ಬಿಡುಗಡೆ ಮಾಡಿದವಳು ನಾನೆ. ಇದಕ್ಕೆಲ್ಲ ಸಾಕ್ಷಿಯಾಗಿ ಈ ಮೋಸಗಾತಿ ಹೆಂಗಸು ಇಲ್ಲಿಯೇ ಇದ್ದಾಳೆ, ಅವಳನ್ನೂ ಕೇಳು" ಎಂದು ಹಂಗಿಸಿದಳು.

ಸೊಸೆಯ ಬುದ್ಧಿವಂತಿಕೆಯನ್ನು ಕಂಡು ಅವಳ ಅತ್ತೆ–ಮಾವನಿಗೆ ತುಂಬ ಸಂತೋಷವಾಯಿತು. ಇನ್ನು ಎಲ್ಲರೂ ಈ ಮನೆಯಲ್ಲಿ ಸುಖವಾಗಿ ಬದುಕಿ – ಎಂದು ಹಿರಿಯರು ಹರಸಿದರು. ಮುಂದೆ ಎಲ್ಲರೂ ಬಹುಕಾಲ ನೆಮ್ಮದಿಯಿಂದ ಬದುಕಿದರು. ಅವರು ಅಲ್ಲಿದ್ದಾರೆ, ನಾವು ಇಲ್ಲಿದ್ದೇವೆ.

– ಎ. ಕೆ. ರಾಮಾನುಜನ್ ಅವರ 'Folk tales from India' ಎಂಬ ಸಂಕಲನದಿಂದ

**ಕನ್ನಡಕ್ಕೆ : ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೬೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು – ೫೬೦ ೦೭೦

**ಅಭಿನಂದನೆಗಳು........**

ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯು ನೀಡುವ ೨೦೧೪-೧೫ನೇ ಸಾಲಿನ ಶ್ರೇಷ್ಠ ವಿಜ್ಞಾನ ಸಾಹಿತಿ ಪ್ರಶಸ್ತಿಯು ಡಾ|| ಎನ್. ಎಸ್. ಲೀಲಾ ಅವರಿಗೆ 'ಜೀವಜಗತ್ತಿನ ಕೌತುಕಗಳು - ಉಸಿರಾಟ' ಕೃತಿಗಾಗಿ ಹಾಗೂ ಶ್ರೀ ನಾಗೇಶ್ ಹೆಗಡೆ ಅವರಿಗೆ 'ನರಮಂಡಲ ಬ್ರಹ್ಮಾಂಡ' ಕೃತಿಗಾಗಿ ದೊರಕಿದೆ. ಇವರಿಬ್ಬರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದಿಂದ ಅಭಿನಂದನೆಗಳು.

ಮೂಲತಃ ರಂಗಕಲಾವಿದೆಯಾದ ಶ್ರೀಮತಿ ಎಸ್. ಕೆ. ಪದ್ಮಾದೇವಿ ಕನ್ನಡ ಚಿತ್ರರಂಗದ ಪ್ರಾರಂಭದ ದಿನಗಳಲ್ಲಿ ಚಿತ್ರ ನಟಿಯಾಗಿದ್ದವರು. ಈ ಹಿರಿಯ ಕಲಾವಿದೆ ಕನ್ನಡ ಚಿತ್ರರಂಗದ ಪ್ರಪ್ರಥಮ ಹಿನ್ನೆಲೆ ಗಾಯಕಿ. ಧ್ರುವಕುಮಾರ, ವಸಂತಸೇನಾ ಮುಂತಾದ ಚಿತ್ರಗಳಲ್ಲಿ ನಟಿಸಿದ್ದ ಈಕೆ ತೊಂಬತ್ತರ ಹರೆಯದಲ್ಲಿ ಇತ್ತೀಚೆಗೆ ಕನ್ನಡ ಚಿತ್ರರಂಗ ಎಂಬತ್ತನೇ ವರ್ಷದ ಸಮಾರಂಭದಲ್ಲಿ ಭಾಗವಹಿಸಿದ್ದರು. ಇವರ ಕಲಾಪ್ರೇಮ ಈಗಲೂ ಜೀವಂತ. ಇಳಿವಯಸ್ಸಿನಲ್ಲಿ 'ಹೊಸತು'ಗೆ ಅವರು ಸಂದರ್ಶನ ನೀಡಿದ್ದಾರೆ. ಸಂದರ್ಶನದ ಲೇಖನವನ್ನು ನಂದಕಿಶೋರ್ ಸಿದ್ಧಗೊಳಿಸಿದ್ದಾರೆ.

# ಈಗಲೂ ಅಭಿನಯಿಸುವ ಹಂಬಲ

## ಕಲಾವಿದೆ ಎಸ್. ಕೆ. ಪದ್ಮಾದೇವಿ ಅವರೊಂದಿಗೆ




ಸಂದರ್ಶಕರು
**ನಂದಕಿಶೋರ್ ಎಂ. ಪಿ.**
**ಎಸ್. ಸುರೇಂದ್ರ**

**ಹೊಸತು :** ನಮಸ್ಕಾರ. ಕನ್ನಡ ಚಿತ್ರರಂಗದ ಹಿರಿಯ ಕಲಾವಿದೆಯಾದ ನಿಮ್ಮೊಡನೆ ಮಾತುಕತೆಯಲ್ಲಿ ತೊಡಗುವುದೇ ನಮಗೆ ಒಂದು ವಿಶೇಷ ಸಂದರ್ಭ ಮತ್ತು ಹೆಮ್ಮೆಯ ವಿಷಯ. ಕನ್ನಡ ಚಿತ್ರರಂಗದ ಪ್ರಾರಂಭದ ದಿನಗಳಲ್ಲಿ ನೀವು ಚಿತ್ರರಂಗ ಪ್ರವೇಶಿಸಿದಿರಿ. ನಿಮ್ಮ ಆಗಿನ ಅನುಭವ ಹೇಗಿತ್ತು, ಅಂದಿನ ಸಿನಿಮಾ ಪ್ರಪಂಚ ಹೇಗಿತ್ತು , ಎಂಬುದನ್ನು ತಿಳಿಸಿ.

**ಪದ್ಮಾದೇವಿ :** ನಮಸ್ಕಾರ. 'ಹೊಸತು' ಪತ್ರಿಕೆಗಾಗಿ ನೀವು ನನ್ನ ಸಂದರ್ಶನ ಮಾಡುತ್ತಿರುವುದು ನನಗೆ ಹೆಮ್ಮೆಯ ಸಂಗತಿ. ನಿಮ್ಮ ಓದುಗರೊಂದಿಗೆ ನನ್ನ ಅನುಭವಗಳನ್ನು ಹಂಚಿಕೊಳ್ಳಲು ನನಗೆ ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ನಿಮಗೆ ಅನಂತಾನಂತ ಧನ್ಯವಾದಗಳು.

ನನ್ನ ಮಾತುಗಳು ಸ್ವಲ್ಪ ನಾಟಕೀಯಾಂತ ನಿಮಗನಿಸಿದರೆ ನಟಿಯಾಗಿಯೇ ಬದುಕ ಮೈಗೂಡಿಸಿಕೊಂಡಿರುವ ನನ್ನ ಸಹಜ ಸ್ವಭಾವಕ್ಕೆ ಕ್ಷಮೆಯಿರಲಿ.

ಕನ್ನಡ ಚಿತ್ರರಂಗದ ಪ್ರಾರಂಭದ ದಿನಗಳು ರಂಗಕಲಾವಿದರನ್ನೇ ಅವಲಂಬಿಸಿತ್ತು. ಚಿತ್ರೀಕರಣಕ್ಕೆ ಮೊದಲು ಸುಮಾರು ೩ – ೪ ತಿಂಗಳುಗಳ ಕಾಲ ನಾಟಕದಂತೆಯೇ ಅಭ್ಯಾಸ ನಡೆಸಲಾಗುತ್ತಿತ್ತು. ಕೆಲವೊಮ್ಮೆ ಚಿತ್ರದ ನಿರ್ದೇಶಕರಿಗೆ ಸಮಾಧಾನವಾಗುವ ತನಕ ಈ ರೀತಿಯ ಅಭ್ಯಾಸ ಮುಂದುವರಿಯುತ್ತಿತ್ತು. ಆಗೆಲ್ಲಾ ಕಲಾವಿದರು ಒಳ್ಳೆಯ ಹಾಡುಗಾರರೂ ಆಗಿರಬೇಕಿತ್ತು. ಸಂಗೀತವೂ ಗೊತ್ತಿರಲೇಬೇಕಾಗಿತ್ತು.

ಆಗಿನ ಹಾಡುಗಳಲ್ಲಿ ಕೀರ್ತನೆಗಳ ಜೊತೆಗೆ ಕಂದ ಪದ್ಯಗಳು, ಸೀಸ ಪದ್ಯಗಳು, ಕೆಲವೊಮ್ಮೆ ಭಜನೆಗಳನ್ನೂ ಸುಶ್ರಾವ್ಯವಾಗಿ ಹಾಡಬೇಕಾಗುತ್ತಿತ್ತು. ಹೆಚ್ಚಾಗಿ ಕಲಾವಿದರ ಹಾಡುವ ಸಾಮರ್ಥ್ಯವನ್ನನುಸರಿಸಿಯೇ ಪಾತ್ರಗಳ ಹಂಚಿಕೆಯಾಗುತ್ತಿತ್ತು. ಹಾಗಾಗಿ ನಾವೆಲ್ಲಾ ಒಳ್ಳೆಯ ಸಂಗೀತಗಾರರೇ ಆಗಿದ್ದೆವು.

ಆಗೆಲ್ಲಾ ಸಿನೆಮಾ ಚಿತ್ರೀಕರಣ ಮುಂಬಯಿಯಲ್ಲಿ ಮಾತ್ರ ಆಗುತ್ತಿತ್ತು. ೧೯೩೪ರಲ್ಲಿ ತಯಾರಾದ ಕನ್ನಡದ ಮೊದಲ ವಾಕ್‌ಚಿತ್ರ 'ಧ್ರುವಕುಮಾರ' ಕೂಡ ಮುಂಬಯಿಯಲ್ಲಿ ಚಿತ್ರೀಕರಣವಾಯಿತು. ಅದರಲ್ಲಿ ನಾನು ಸುರುಚಿಯ ಸಖಿಯ ಪಾತ್ರ ವಹಿಸಿದ್ದೆ. ನನಗಾಗ ೧೨ ವರ್ಷ. ಕರ್ನಾಟಕ ನಾಟಕ ಪಿತಾಮಹರೆನಿಸಿದ್ದ ಎ. ವಿ. ವರದಾಚಾರ್ಯರ ಸೋದರ ಸೊಸೆ ಕನಕಲಕ್ಷ್ಮಮ್ಮನವರು ನನ್ನನ್ನು ಆ ಪಾತ್ರಕ್ಕೆ ಆಯ್ಕೆಮಾಡಿದ್ದರು. ಆ ಚಿತ್ರದಲ್ಲಿ ಅವರೇ ಸುರುಚಿಯ ಪಾತ್ರ ವಹಿಸಿದ್ದರು. ಮುಂಬಯಿಯಲ್ಲಿ ನಾವೆಲ್ಲಾ ಉಳಿದುಕೊಳ್ಳಲು ಒಂದು ದೊಡ್ಡ ಮನೆ ಮಾಡಿದ್ದರು. ಅಲ್ಲಿ ನಾವೆಲ್ಲಾ ಒಂದೇ ಮನೆಯವರ ಹಾಗೆ ಇದ್ದೆವು.

**ಹೊ.** : ಸಂಗೀತ, ನಾಟಕ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ವಾತಾವರಣವಿದ್ದ ಕುಟುಂಬದ ಹಿನ್ನೆಲೆಯಿಂದ ಬಂದಿರುವ ನೀವು ಮುಂದೆ ಪ್ರಸಿದ್ಧ ನಟಿಯಾಗಿ, ಗಾಯಕಿಯಾಗಿ ರೂಪುಗೊಂಡಿರಿ. ಅಂದಿನ ದಿನಗಳು ಮತ್ತು ಕುಟುಂಬದ ಸದಸ್ಯರು ನಿಮಗೆ ನೀಡಿದ ಪ್ರೋತ್ಸಾಹದ ಬಗ್ಗೆ ಸ್ವಲ್ಪ ತಿಳಿಸಿ.

**ಪ. ದೇ.** : ನನಗೆ ಸಂಗೀತ, ನಾಟಕ ಮುಂತಾದುವುಗಳಲ್ಲಿ ಆಸಕ್ತಿ ಹುಟ್ಟಿನಿಂದ ಬಂದದ್ದು. ನನ್ನ ಮುತ್ತಜ್ಜನಿಗೆ, ಅಂದರೆ ತಂದೆಯ ತಾತನವರಿಗೆ ನಾಟಕದ ಹುಚ್ಚಿತ್ತಂತೆ. 'ಜನಮನೋಲ್ಲಾಸಿನಿ ಸಭಾ' ಎನ್ನುವ ನಾಟಕದ ಕಂಪೆನಿಯನ್ನು ಅವರು ಕೆಲಕಾಲ ನಡೆಸಿದ್ದರಂತೆ. ನಮ್ಮ ತಾಯಿಯೂ ಹುಟ್ಟು ಕಲಾವಿದೆ. ಸಂಗೀತ, ಸಾಹಿತ್ಯ, ಕುಶಲ ಕಲೆಗಳಲ್ಲಿ ಅವಳು ನಿಪುಣಳಾಗಿದ್ದಳು. ಇವರಿಂದ ಕಲಾಸೇವೆ ನನಗೆ ವಂಶಪಾರಂಪರ್ಯ ಬಳುವಳಿಯಾಗಿ ಬಂತು. ನನ್ನ ತಂದೆ ವರದಾಚಾರ್ ಮೆಮೋರಿಯಲ್‌ನ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು. ಎಷ್ಟೋ ಸಲ ಆ ನಾಟಕಗಳ ರಿಹರ್ಸಲ್ ನಮ್ಮ ಮನೆಯಲ್ಲೇ ನಡೆಯುತ್ತಿತ್ತು. ಆಗ ನಮ್ಮ ತಾಯಿಯೇ ಹಾರ್ಮೋನಿಯಂ ನುಡಿಸುತ್ತಿದ್ದರು. ಇಂತಹ ಮನೆಯಲ್ಲಿ ಬೆಳೆದ ನನಗೆ ಸಹಜವಾಗಿಯೇ ನಾಟಕದ ಗೀಳು ಹಿಡಿಯಿತು. ನನ್ನ ತಾಯಿ ತಂದೆಯರೇ ನನ್ನ ಮೊದಲ ಗುರುಗಳು. ಅವರ ಪ್ರೋತ್ಸಾಹ, ಮಾರ್ಗದರ್ಶನದಲ್ಲಿಯೇ ನಾನು ಬೆಳೆದೆ.

ನನ್ನ ಅಣ್ಣ ರಾಮಪ್ರಸಾದನೂ ನನ್ನ ಹಾಗೇ ನಾಟಕದ ಹುಚ್ಚು ಹಿಡಿಸಿಕೊಂಡವನು. ನಾನೂ ಅವನೂ ಇಬ್ಬರೂ ಒಟ್ಟಿಗೇ ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದೆವು. ಅವನೂ ತುಂಬ ಒಳ್ಳೆಯ ಕಲಾವಿದ. ನನ್ನೊಂದಿಗೆ ಎಲ್ಲದರಲ್ಲೂ ಒತ್ತಾಸೆಯಾಗಿ ನಿಂತವನು. ಹಾಗೆಯೇ ನನ್ನ ಇತರ ಅಣ್ಣ ತಮ್ಮಂದಿರು, ತಂಗಿಯರು ನನಗೆ ಪ್ರೋತ್ಸಾಹ ನೀಡಿದ್ದಾರೆ.

**ಹೊ.** : ಸಿನಿಮಾಗಿಂತ ಕಂಪನಿ ನಾಟಕಗಳಲ್ಲಿ ನೀವು ಹೆಚ್ಚು ಸೇವೆ ಸಲ್ಲಿಸಿದ್ದೀರಿ. ಅಂದಿನ ದಿನಗಳ ಕುರಿತು ನಿಮ್ಮ ಅನಿಸಿಕೆ ಏನು ?

**ಪ. ದೇ.** : ಮೊದಲೇ ಹೇಳಿದಂತೆ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರ ಸೋದರ ಸೊಸೆ ಕನಕಲಕ್ಷ್ಮಮ್ಮ ನಮ್ಮ ಕುಟುಂಬದ ಸ್ನೇಹಿತರು. ಆಚಾರ್ಯರ ಸ್ಮರಣಾರ್ಥ ಅವರ ಹೆಸರಿನಲ್ಲಿ ಒಂದು ರಂಗಮಂದಿರ ಕಟ್ಟಿಸಬೇಕೆಂದು ಕನಸು ಕಂಡವರು. ಅದಕ್ಕಾಗಿ ನಾಟಕಗಳನ್ನು ಆಡಿಸಿ ಹಣ ಸಂಗ್ರಹಿಸುತ್ತಿದ್ದರು. ಒಂದು ಸಲ ಅವರು ಆಡಿಸುತ್ತಿದ್ದ 'ಭಕ್ತ ಪ್ರಹ್ಲಾದ' ನಾಟಕದಲ್ಲಿ ನನ್ನಿಂದ ಭೂದೇವಿ ಪಾತ್ರ ಮಾಡಿಸಲು ನಮ್ಮ ತಂದೆಗೆ ಸೂಚಿಸಿದರಂತೆ. ನಮ್ಮ ತಂದೆ ಖುಷಿಯಿಂದ ಒಪ್ಪಿ ನಮ್ಮ ತಾಯಿಯನ್ನು ಕೇಳಿದರು. ಕಲಾವಂತೆಯಾದರೂ ಅವಳು ಸಂಪ್ರದಾಯಸ್ಥ ಮನೆತನದ ಹೆಣ್ಣು, ನನ್ನನ್ನು ನಾಟಕಕ್ಕೆ ಸೇರಿಸಲು ಸುತರಾಂ ಒಪ್ಪಲಿಲ್ಲ. ನಾಳೆ ಮದುವೆಯಾಗುವ ಹುಡುಗಿ, ತೊಂದರೆಯಾದೀತೆಂದು ಅವರ ಸಂಕಟ. ಇನ್ನೂ ಚಿಕ್ಕ ಹುಡುಗಿ. ಪಾತ್ರ ಮಾಡಿದರೆ ತಪ್ಪೇನು ? ಅಲ್ಲದೆ ನಾನೂ ಅವಳ ಅಣ್ಣ ರಾಮಪ್ರಸಾದನೂ ಜೊತೆಯಲ್ಲೇ ಇರುತ್ತೇವೆ ಎಂದು ಹೇಳಿ ನಮ್ಮ ತಂದೆ ಸಮಾಧಾನಪಡಿಸಿ ನನ್ನನ್ನು ಕರೆದುಕೊಂಡು ಹೋದರು. ಹಾಗೆ ನಾನು ರಂಗಮಂಚ ಹತ್ತಿದೆ. ನನಗಾಗ ೯ ವರ್ಷ. ಮೊದಲ ನಾಟಕದಲ್ಲೇ ನಾನು ನಾಲ್ಕು ಹಾಡು, ಒಂದು ಕಂದ ಪದ್ಯ ಹಾಡಿ ಪ್ರೇಕ್ಷಕರಿಂದ 'ಒನ್ಸ್ ಮೋರ್' ಗಿಟ್ಟಿಸಿಕೊಂಡೆ. ಈ 'ಒನ್ಸ್ ಮೋರ್' ನನ್ನ ವೃತ್ತಿರಂಗದ ಉದ್ದಕ್ಕೂ ಹಿಂಬಾಲಿಸಿತು. ಈ ಮೆಚ್ಚುಗೆಯೇ ನಾನು ನಾಟಕ ರಂಗದಲ್ಲಿ ಮುಂದುವರಿಯಲು ಪ್ರೇರಣೆಯಾಯಿತು.

ಮುಂದೆ ಒಳ್ಳೊಳ್ಳೆಯ ನಾಟಕಗಳಲ್ಲಿ ಒಳ್ಳೊಳ್ಳೆಯ ಪಾತ್ರಗಳನ್ನು ಮಾಡುವ ಅದೃಷ್ಟ ನನ್ನದಾಯಿತು. ಆಗಿನ ಕಾಲದ ಅತ್ಯಂತ ಜನಪ್ರಿಯ ಹಾಗೂ ಹೆಸರಾಂತ ನಟರಾದ ಜಿ. ನಾಗೇಶರಾಯರು, ಸಿ. ಬಿ. ಮಲ್ಲಪ್ಪನವರು, ಎಂ. ಜಿ. ಮರಿರಾಯರು, ಆರ್. ನಾಗೇಂದ್ರರಾಯರು, ಡಿಕ್ಕಿ ಮಾಧವರಾವ್, ದೇವುಡು ನರಸಿಂಹ ಶಾಸ್ತ್ರಿಗಳು... ಹೀಗೇ ನಾಟಕ ರಂಗದ ದಿಗ್ಗಜಗಳ ಜೊತೆ ನಟಿಸಲು ಅವಕಾಶ ಕೂಡಿಬಂತು. ಅಂದಿನ ಹೆಸರಾಂತ ಕಂಪನಿಗಳಾದ ವರದಾಚಾರ್ ಮೆಮೋರಿಯಲ್, ಅಮೆಚೂರ್ ಡ್ರಮಾಟಿಕ್ಸ್ ಅಸೋಸಿಯೇಷನ್, ಸಿಂಹಾಸ್ ಸೆಲೆಕ್ಟ್ ಆರ್ಟಿಸ್ಟ್ಸ್, ಯುನೈಟೆಡ್ ಆರ್ಟಿಸ್ಟ್ ಕಂಬೈನ್, ಶೇಷಕಮಲ ಕಲಾ ಮಂಡಳಿಗಳಲ್ಲಿ ನಾಯಕಿಯ ಪಾತ್ರ ಮಾಡಿದ್ದೇನೆ. ಈ ನಾಟಕದ ಹುಚ್ಚಿನಲ್ಲಿ ನನ್ನದೇ ಒಂದು ನಾಟಕದ ಕಂಪೆನಿ ಬೆಂಗಳೂರು ಥಿಯೇಟ್ರಿಕಲ್ ಕಂಪೆನಿ ನಡೆಸಿ ಕೈ ಸುಟ್ಟುಕೊಂಡಿದ್ದೂ ಆಯಿತು. ಏಳು ದಶಕಗಳ ನನ್ನ ವೃತ್ತಿ ಜೀವನದಲ್ಲಿ ಸುಮಾರು ೩೦೦೦ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ ಸಂತೃಪ್ತಿ ನನ್ನದು.

**ಹೊ.** : ಕನ್ನಡ ಚಿತ್ರರಂಗಕ್ಕೆ ಈಗ ೮೨ ತುಂಬಿದೆ. ಈಗಿನ ಸ್ಥಿತಿಯ ಬಗ್ಗೆ ನಿಮಗೇನಿಸುತ್ತದೆ ?

**ಪ. ದೇ.** : ಈಗ ಎಲ್ಲ ರಂಗಗಳಲ್ಲೂ ವ್ಯಾಪಾರವೇ ವೃತ್ತಿಧರ್ಮ. ಅದಕ್ಕೆ ಪೂರಕವಾಗಿ ತಾಂತ್ರಿಕತೆಯೂ ವಿಜೃಂಭಿಸಿದೆ. ಚಿತ್ರರಂಗ ಕೂಡ ಇದಕ್ಕೆ ಹೊರತಲ್ಲ. ಕನ್ನಡದಲ್ಲೂ ತುಂಬ ಒಳ್ಳೊಳ್ಳೆಯ ಚಿತ್ರಗಳು ಬಂದಿವೆ. ಕೆಲವು ಚಿತ್ರಗಳು ದೇಶ ವಿದೇಶಗಳಲ್ಲಿ ಹೆಸರು ಮಾಡಿವೆ. ಆದರೆ ಅವುಗಳ ಸಂಖ್ಯೆ ಗೌಣ, ಮನೋರಂಜನೆಯ ಮಸಾಲೆ ಅರೆದು ಹೇಗಾದರೂ ಹಣ ಮಾಡುವ ಪ್ರವೃತ್ತಿ ಇದಕ್ಕೆ ಕಾರಣವಿರಬೇಕು. ಜೊತೆಗೆ ಬೇರೆ ಭಾಷೆಯ ಚಿತ್ರಗಳನ್ನು ನಕಲು ಮಾಡಿ ಹಳಸಲು ಊಟ ಹಾಕಿದರೆ ಎಷ್ಟು ದಿನ ತಿನ್ನಲು ಸಾಧ್ಯ ? ಇದರಿಂದಾಗಿಯೇ ಕನ್ನಡ ಚಿತ್ರಗಳಿಗೆ ಪ್ರೇಕ್ಷಕರ ಕೊರತೆ ಕಾಡುತ್ತಿದೆ ಅಂತ ನನ್ನ ಅನಿಸಿಕೆ. ಮೊದಲಿನಿಂದಲೂ ನಾವು ಕನ್ನಡಿಗರು ಸ್ವಾಭಿಮಾನಿಗಳೇ ಹೊರತು ದುರಭಿಮಾನಿಗಳಲ್ಲ. ನಾವು ಎಲ್ಲರನ್ನೂ, ಎಲ್ಲದನ್ನೂ ವಿಶಾಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತೇವೆ. ನಮ್ಮತನ ನಮಗೆ ಅಷ್ಟಕ್ಕಷ್ಟೆ. ನಮ್ಮ ಈ ಮನೋಭಾವವು ಕೂಡ ನಮ್ಮ ಕಲೆ, ಸಂಸ್ಕೃತಿ, ಸಾಹಿತ್ಯ ಎಲ್ಲದರ ಮೇಲೂ ಪರಿಣಾಮ ಬೀರುತ್ತಿದೆ. ಬರಬರುತ್ತಾ ಕನ್ನಡಿಗರು ನಿರಭಿಮಾನಿಗಳಾಗುತ್ತಿದ್ದಾರೇನೋ ಎನ್ನುವ ಸಂಶಯ ಇತ್ತೀಚೆಗೆ ನನ್ನನ್ನು ಕಾಡುತ್ತಿದೆ.



ಮಗ, ಸೊಸೆ, ಮೊಮ್ಮಕ್ಕಳೊಂದಿಗೆ ಪದ್ಮಾದೇವಿ

**ಹೊ.** : ಕಂಪನಿ ನಾಟಕಗಳು ಮರೆಯಾಗಿ ಇಂದು ಹವ್ಯಾಸಿ ನಾಟಕಗಳಿಗೆ ಹೆಚ್ಚು ಪ್ರಾಶಸ್ತ್ಯ ಬಂದಿದೆ. ಈ ಕುರಿತು ನಿಮ್ಮ ಅಭಿಪ್ರಾಯ ?

**ಪ. ದೇ.** : ಕಾಲಪ್ರವಾಹದೊಂದಿಗೆ ಬದಲಾಗುತ್ತಿರುವ ಸಮಾಜ, ಸಂಸ್ಕೃತಿ ಮತ್ತು ಪ್ರೇಕ್ಷಕರ ಅಭಿರುಚಿಗೆ ತಕ್ಕಂತೆ ಎಲ್ಲ ರಂಗಗಳಲ್ಲಿ ಬದಲಾವಣೆ ಸಹಜವೇ. ಮೊದಲು ಮನೋರಂಜನೆಯ ಸಾಧನವಾಗಿ ನೃತ್ಯ, ಸಂಗೀತಗಳ ಜೊತೆಗೆ ನಾಟಕವೂ ಒಂದಾಗಿತ್ತು. ಅದನ್ನು ರಂಗಮಂದಿರದಲ್ಲಿ ಕುಳಿತೇ ನೋಡಬೇಕಾಗಿತ್ತು. ಇದನ್ನು ಬಿಟ್ಟರೆ ಜನರ ಮನರಂಜನೆಗೆ ಬೇರೆ ಸಾಧನಗಳಿರಲಿಲ್ಲ. ಈ ಅವಕಾಶವನ್ನು ಮೊದಲು

ವ್ಯಾಪಾರೀಕರಿಸಿದ ಕೀರ್ತಿ ಕಂಪೆನಿ ನಾಟಕಗಳಿಗೆ ಸಲ್ಲಬೇಕು. ಯಾವಾಗ ನಾವು ಹಣಕ್ಕಾಗಿ ಕಲೆಯನ್ನು ಅವಲಂಬಿಸುತ್ತೇವೋ ಆಗ ಪ್ರೇಕ್ಷಕರ ಇಷ್ಟಾನಿಷ್ಟಗಳಿಗೆ ತಕ್ಕಂತೆ ನಾವು ಮನೋರಂಜನೆಯನ್ನ ರೂಪಿಸಬೇಕಾಗುತ್ತದೆ. ಹಾಗಾಗಿ ನಾಟಕವನ್ನೇ ನಂಬಿಕೊಂಡು ಬದುಕು ಕಟ್ಟಿಕೊಂಡ ಒಂದು ವರ್ಗವೇ ಸೃಷ್ಟಿಯಾಯಿತು. ಇವರು ವೃತ್ತಿನಿರತ ಕಲಾವಿದರಾದರು.

ಜೊತೆಜೊತೆಯಲ್ಲೇ ನಾಟಕವನ್ನು ತಮ್ಮ ಖುಷಿಗಾಗಿ, ಮನಸ್ಸಂತೋಷಕ್ಕಾಗಿ ಮಾಡುತ್ತಿದ್ದ ಇನ್ನೊಂದು ವರ್ಗದವರು ಹವ್ಯಾಸಿ ಎನಿಸಿಕೊಂಡರು. ಆಗಿನ ಕಾಲದಲ್ಲೂ ಹವ್ಯಾಸಿಗಳಿರಲಿಲ್ಲವೆಂದಲ್ಲ. ಹಾಗೆ ನೋಡಿದರೆ ನಾನು ರಂಗ ಪ್ರವೇಶಿಸಿದ್ದೇ ಹವ್ಯಾಸಿ ಸಂಸ್ಥೆಯ ಮೂಲಕ. ವರದಾಚಾರ್ ಮೆಮೋರಿಯಲ್ ಆಗಿನ ಕಾಲದ ಮೊದಲ ಹವ್ಯಾಸಿ ರಂಗತಂಡ. ಆಮೇಲೆ ಶುರುವಾದದ್ದು ಅಮೆಚೂರ್ ಡ್ರಮಾಟಿಕ್ಸ್ ಅಸೋಸಿಯೇಷನ್. ನನ್ನ ತಂದೆ ಅದರ ಸ್ಥಾಪಕ ಸದಸ್ಯರಲ್ಲೊಬ್ಬರು. ತಮ್ಮ ಸೃಜನಶೀಲ ಅಭಿವ್ಯಕ್ತಿಗಾಗಿ ಕಲೋಪಾಸಕರಾಗಿರುವ ಹವ್ಯಾಸಿಗಳು ಪ್ರೇಕ್ಷಕರ ಅಭಿರುಚಿಯ ಹಂಗಿಲ್ಲದೆ ಹೊಸ ಹೊಸ ಪ್ರಯೋಗಗಳನ್ನು ಮಾಡಲು ಸಾಧ್ಯ. ಸಹಜವಾಗೇ ಹೊಸದಕ್ಕೆ ಪ್ರಾಶಸ್ತ್ಯ ಸಿಗುತ್ತದೆ. ನಾನು ಎರಡು ಪ್ರಕಾರಗಳಲ್ಲೂ ಕೆಲಸ ಮಾಡಿಕೊಂಡು ಬಂದಿದ್ದೇನೆ. ಪ್ರಾಶಸ್ತ್ಯ ಯಾರಿಗೆ ಸಿಕ್ಕಿದರೂ ರಂಗಭೂಮಿಗೇ ಅಲ್ಲವೇ ?

**ಹೊ.** : ಆಕಾಶವಾಣಿಯಲ್ಲಿ ದೀರ್ಘಕಾಲ ದುಡಿದಿದ್ದೀರಿ. ಅಲ್ಲಿನ ನಿಮ್ಮ ಅನುಭವದ ಬಗ್ಗೆ ತಿಳಿಸಿ.

**ಪ. ದೇ.** : ಕಾಯಕವೇ ಕೈಲಾಸ ಎಂದು ನಂಬಿ ಬದುಕಿದವಳು ನಾನು. ಯಾವಾಗ ಸಿನೆಮಾ, ನಾಟಕಗಳಲ್ಲಿ ಅವಕಾಶಗಳು ಕಡಿಮೆಯಾದವೋ, ದುಡಿಯಲು ಬೇರೆ ಮಾರ್ಗೋಪಾಯಗಳಿಗಾಗಿ ಹುಡುಕತೊಡಗಿದೆ. ೧೯೬೪ರಲ್ಲಿ ಬೆಂಗಳೂರು ಆಕಾಶವಾಣಿಯಲ್ಲಿ ರಂಗಧ್ವನಿಗಾಗಿ ಕಲಾವಿದರು ಬೇಕೆಂದು ಆಹ್ವಾನಿಸಿದ್ದರು. ಅದು ನನ್ನ ಅನುಭವಕ್ಕೂ, ಸಾಮರ್ಥ್ಯಕ್ಕೂ ಸರಿಯಾದ ಕೆಲಸವೆಂದು ನನಗನ್ನಿಸಿತು, ನನ್ನ ಸಂದರ್ಭವೂ ಹಾಗೇಯೇ ಇತ್ತು, ಅರ್ಜಿ ಹಾಕಿದೆ. ಕೆಲಸ ಸಿಕ್ಕಿತು. ರಂಗದ ಮೇಲೆ ಕೈ ಕಾಲು ಚಲಿಸಿ ಮುಖಾಭಿನಯದ ಜೊತೆ ಅಭಿವ್ಯಕ್ತಿಸಿದವರಿಗೆ, ಬರೀ ಧ್ವನಿಯ ಏರಿಳಿತಗಳಲ್ಲೇ ಭಾವನೆಗಳನ್ನು ಸಂವಹನ ಮಾಡುವುದಕ್ಕೆ ಸಮಯ ಹಿಡಿಯುತ್ತದೆ. ನನಗೂ ಇದೆಲ್ಲಾ ಹೊಸದು. ರಂಗಭೂಮಿಯ ಅನುಭವ ಸ್ವಲ್ಪಮಟ್ಟಿಗೆ ಸಹಾಯ ಮಾಡಿತಾದರೂ ಈ ಕೆಲಸಕ್ಕೆ ಹೊಂದಿಕೊಳ್ಳಲು ಸ್ವಲ್ಪ ಕಾಲ ಹಿಡಿಸಿತು.

ರಂಗಭೂಮಿಯಲ್ಲಿ ರಾಣಿಯಾಗಿ, ದೇವತೆಯಾಗಿ ಮೆರೆದವಳಿಗೆ ಆಫೀಸಿನ ಸಮಯದ ಕಟ್ಟುಪಾಡು, ಮಾತುಕತೆ, ರೀತಿ ರಿವಾಜುಗಳು ಒಂದು ರೀತಿಯಲ್ಲಿ ಸ್ವಾತಂತ್ರ್ಯಕ್ಕೆ ಧಕ್ಕೆ ಎನಿಸಿದರೂ, ಹೊಸದನ್ನು ಕಲಿಯಬೇಕು, ಇಲ್ಲೂ ಏನಾದರೂ ಸಾಧಿಸಬೇಕು ಎನ್ನುವ ಹಟದಿಂದ ಕೆಲಸಕ್ಕೆ ತೊಡಗಿದೆ. ನನ್ನನ್ನು ಧ್ವನಿ ಕಲಾವಿದೆಯಾಗಿ ತೆಗೆದುಕೊಂಡಿದ್ದರೂ ಆಸ್ಥೆಯಿಂದ ಬೇರೆ ಎಲ್ಲಾ ಕೆಲಸಗಳನ್ನೂ ಕಲಿತೆ. ನಿರ್ದೇಶನ, ಎಡಿಟಿಂಗ್, ಮಿಕ್ಸಿಂಗ್, ಡಬ್ಬಿಂಗ್ ಎಲ್ಲಾ ಕಲಿತುಕೊಂಡೆ. ನಾಟಕ, ಮಕ್ಕಳ ಕಾರ್ಯಕ್ರಮ, ಮಹಿಳಾ ವಾಣಿ, ಕೊನೆಗೆ ಕೈಗಾರಿಕಾ ಕಾರ್ಯಕ್ರಮಗಳವರೆಗೆ, ಕನ್ನಡದಿಂದ ಹಿಡಿದು ತೆಲುಗು, ತಮಿಳು, ಹಿಂದಿ, ಹೀಗೆ ಎಲ್ಲಾ ಭಾಷೆಗಳ ವಿಭಿನ್ನ ಕಾರ್ಯಕ್ರಮಗಳನ್ನ ಪ್ರಸಾರಮಾಡಿ ಭೇಷ್ ಅನ್ನಿಸಿಕೊಂಡೆ. ನನಗೊಂದು ನಿಶ್ಚಿತ ಬದುಕು, ವೃತ್ತಿ ಗೌರವ ಹಾಗೂ ಬಹಳ ತೃಪ್ತಿ ಕೊಟ್ಟ ಕೆಲಸ ಅದು. ಈವತ್ತಿಗೂ ಸ್ವಾವಲಂಬಿಯಾಗಿ ಬದುಕುತ್ತಿರುವುದು ಆಕಾಶವಾಣಿಯ ನನ್ನ ವೃತ್ತಿ ಪಿಂಚಣಿಯಿಂದ.



**ಹೊ.** : ಟಿ. ವಿ. ಧಾರಾವಾಹಿಗಳನ್ನು ನೀವು ನೋಡುತ್ತಿರುತ್ತೀರಿ. ಅವುಗಳ ಬಗ್ಗೆ ನಿಮ್ಮ ಅನಿಸಿಕೆ ಏನು ?

**ಪ. ದೇ.** : ನಾನು ಮೊದಲೇ ಕಂಪನಿ ನಾಟಕಗಳ ಬಗ್ಗೆ ಹೇಳಿದ ಹಾಗೆ, ಎಲ್ಲಿ ಕಲೆಗೆ ಬೆಲೆ ಕಟ್ಟಲು ಶುರುವಾಗುತ್ತದೋ, ಎಲ್ಲಿ ಅದು ಹೃದಯದ ಸಂವೇದನೆಗಳ ಸಂವಹನವಾಗದೆ ಬರೇ ಮನರಂಜನೆಯ ಮಾತಾಗುತ್ತದೋ, ಆಗ ಅದು ಸಜೀವವಾಗಿ ಉಳಿಯುವುದಿಲ್ಲ. ಆ ಕ್ಷಣದ ಕಿಕ್‌ಗಾಗಿ, ಬೇಸರ ನೀಗುವ ಮೋಜಿಗಾಗಿ, ಹುಚ್ಚು ಮನಸ್ಸಿನ ಉನ್ಮಾದಕ್ಕಾಗಿ ಕಲೆಯ ವ್ಯಾಪಾರೀ ಬಲೆಯನ್ನು ಹೆಣೆಯಲಾಗುತ್ತದೆ. ನಾವೆಲ್ಲರೂ ಅದರಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದೇವೆ. ಟಿ. ವಿ. ಧಾರಾವಾಹಿಗಳೂ ಇದಕ್ಕೆ ಹೊರತಲ್ಲ.

**ಹೊ.** : ಆಕಾಶವಾಣಿಯ ಇಂದಿನ ಪರಿಸ್ಥಿತಿ ಮತ್ತು ದೂರದರ್ಶನದಿಂದಾಗುತ್ತಿರುವ ಪ್ರಭಾವ ಇವುಗಳ ಬಗ್ಗೆ ನಿಮ್ಮ ಅನುಭವದ ಹಿನ್ನೆಲೆಯಲ್ಲಿ ಒಂದೆರಡು ಮಾತು.

**ಪ. ದೇ.** : ದೂರದರ್ಶನ ಬಂದ ಹೊಸತರಲ್ಲಿ ಸುಮಾರು ವರ್ಷಗಳು ಅದು ಎಲ್ಲರನ್ನೂ ತನ್ನ ಮಾಯಾಜಾಲದಲ್ಲಿ ಬಂಧಿಸಿತ್ತು. ಆಗೆಲ್ಲಾ ಜನ ಆಕಾಶವಾಣಿಯ ಕಥೆ ಮುಗಿದೇ ಹೋಯಿತು ಎಂದಿದ್ದರು. ಆದರೆ ನನಗೆ ಹಾಗೆನಿಸಿರಲಿಲ್ಲ. ಹೃದಯಗಳ ಮಾತು ಒಂದು ರೀತಿಯ ಪ್ರೈವೆಸಿಯನ್ನ ಕೊಡುತ್ತದೆ. ಪುಸ್ತಕ ಓದಿದಾಗ ಆಗುವ ಅನುಭವದ ತರಹ. ನಮ್ಮ ನಡುವಿನ ಆತ್ಮೀಯ ಸಂಭಾಷಣೆಗೆ ಎಂದೂ ಸಾವಿಲ್ಲ. ಈಗ ನೋಡಿ, ಒಂದಲ್ಲಾ ನೂರಾರು ರೇಡಿಯೋ ಚಾನಲ್‌ಗಳು ಶುರುವಾಗಿವೆ. ನಮ್ಮ ನಿಮ್ಮ ಡೈಲಾಗ್ ನಿರಂತರ ಮುಂದುವರಿಯುತ್ತಿದೆ.

**ಹೊ.** : 'ಪದ್ಮಾಂತರಂಗ' ನಿಮ್ಮ ವ್ಯಕ್ತಿತ್ವದ ವಿವಿಧ ಮುಖಗಳನ್ನು ಮನತಟ್ಟುವಂತೆ ಪರಿಚಯಿಸುತ್ತದೆ. ವಿವಿಧ ಲೇಖಕರು, ಲೇಖಕಿಯರು, ಕಲಾವಿದರು ನಿಮ್ಮ ಸಾಧನೆಗಳ ಬಗ್ಗೆ ತುಂಬ ಆತ್ಮೀಯವಾಗಿ ಬರೆದಿದ್ದಾರೆ. ಅವು ಒಂದು ರೀತಿಯಲ್ಲಿ ಆಪ್ತ ನುಡಿಗಳು. ಆ ಹಿನ್ನೆಲೆಯಲ್ಲಿ ಈಗ ನಿಮ್ಮ ಅಂತರಂಗ ಏನು ಹೇಳುತ್ತದೆ ?

**ಪ. ದೇ.** : ತೊಂಭತ್ತು ವರ್ಷಗಳ ಈ ಸುದೀರ್ಘ ಬಾಳಿನ ಘಟನೆಗಳನ್ನೆಲ್ಲಾ ಮೆಲುಕುಹಾಕುತ್ತಾ ಹೋದಾಗ ನನ್ನ ಮನಸ್ಸಿಗೆ ಬರುವ ಯೋಚನೆ ಒಂದೇ. ನಾನಿನ್ನೂ ಪರಿಪೂರ್ಣಳಲ್ಲ, ಹಾಗಾಗಿ ಸಾಧಿಸುವುದು ಇನ್ನೂ ಉಳಿದಿದೆ. ಈಗಲೂ ಪ್ರತಿಭಾವಂತ ಕಲಾವಿದರು ಒಳ್ಳೆಯ ಪಾತ್ರಗಳನ್ನು ಅಭಿನಯಿಸಿದಾಗ ಅದರಲ್ಲಿ ತಲ್ಲೀನಳಾಗಿ ನಾನೇ ಆ ಪಾತ್ರವಾಗಿಬಿಡುತ್ತೇನೆ. ಈಗಲೂ ನನ್ನ ಶಕ್ತಿ, ಸಾಮರ್ಥ್ಯಗಳಿಗೆ ಸವಾಲೊಡ್ಡುವ ಪಾತ್ರ ಸಿಕ್ಕಿದರೆ ನಟಿಸುವಾಸೆ. ಸದಾ ನಾನು ದೇವರಲ್ಲಿ ಕೇಳಿಕೊಳ್ಳುವುದೊಂದೆ. ಮುಂದಿನ ಜನ್ಮ ಅನ್ನೋದು ಇರೋದೇ ನಿಜವಾದಲ್ಲಿ ನಾನು ಮತ್ತೆ ಕಲಾವಿದೆಯಾಗಿಯೇ ಹುಟ್ಟಬೇಕು. ಪರಿಪೂರ್ಣತೆಯನ್ನು ಸಾಧಿಸಬೇಕು.

**ಹೊ.** : ನೀವು ಸಲ್ಲಿಸಿರುವ ಅಮೋಘ ಸೇವೆಯನ್ನು ಗಮನಿಸಿದರೆ ನಿಮಗೆ ಸಂದಿರುವ ಗೌರವ, ಪ್ರಶಸ್ತಿಗಳು ತೀರಾ ಕಡಿಮೆ. ಇಂಥವನ್ನು ನೀವು ಯಾವತ್ತಿಗೂ ಅರಸಿಹೋಗಿಲ್ಲ. ಮಗ, ಸೊಸೆ, ಮೊಮ್ಮಕ್ಕಳೊಂದಿಗೆ ೯೩ರ ಸಾರ್ಥಕ ಬದುಕು ನಡೆಸುತ್ತಿದ್ದೀರಿ. ಇದರ ಗುಟ್ಟೇನು ?

**ಪ. ದೇ.** : ಬದುಕಿನ ಸಾರ್ಥಕತೆಯಿರುವುದು ಬದುಕುವುದರಲ್ಲಿ ಎಂದು ನಂಬಿದವಳು ನಾನು. ಬದುಕು ಕೊಡುವ ಸುಖ, ಸಂತೋಷ, ನೆಮ್ಮದಿ, ಆನಂದಗಳೇ ಜೀವನ ನಮಗೆ ಕೊಡುವ ಪ್ರಶಸ್ತಿ, ಪುರಸ್ಕಾರ. ನನ್ನ ತಂದೆ, ತಾಯಿ, ಗುರುಗಳು, ಅಣ್ಣ ತಮ್ಮಂದಿರು, ತಂಗಿಯರು, ಸ್ನೇಹಿತರು, ಸಹಚರರು, ಸಹಕರ್ಮಿಗಳು, ಅಭಿಮಾನಿಗಳು, ಎಲ್ಲರೂ ನನ್ನನ್ನು ತುಂಬು ಪ್ರೀತಿ, ವಿಶ್ವಾಸಗಳನ್ನುಣಿಸಿ ಬೆಳೆಸಿದ್ದಾರೆ, ಉಳಿಸಿದ್ದಾರೆ. ಇದಕ್ಕಿಂತ ಹೆಚ್ಚಿನದೇನನ್ನೂ ನಾನು ಬಯಸುವುದಿಲ್ಲ.

**ಹೊ.** : ಕನ್ನಡ ಚಿತ್ರರಂಗದ ಮೊಟ್ಟ ಮೊದಲನೆಯ ಹಿನ್ನೆಲೆ ಗಾಯಕಿ ಎಂಬ ಖ್ಯಾತಿ ನಿಮ್ಮದು. ನೀವು ಹಾಡಿದ ಮೊದಲನೆಯ ಹಾಡಿನ ಒಂದೆರಡು ಸಾಲುಗಳನ್ನು ಸುಮ್ಮನೆ ಹಾಗನ್ನಿ.

**ಪ. ದೇ.** : ಇದು ನಾನು ವಸಂತಸೇನಾ ಚಿತ್ರದಲ್ಲಿ ಹಾಡಿದ ಹಾಡು.

ಪಾಲಿಸೌ ಜಗದಂಬೆ ॥ ಪರಿಪಾಲಿಸೌ ಜಗದಂಬೆ ॥
ಪಾವನ ಚರಿತೆ ॥ ಮಂಗಳ ಗೀತೆ ॥ ॥ ಪ ॥
ಪತಿಯ ಪಾದವೇ । ಗತಿಯೆಂದಿಹೆ ನಾ ।
ಪತಿಯ । ಪ್ರೇಮವೇ । ಜೀವನವು...

**ಹೊ.** : ನಮಸ್ಕಾರ. ಹೋಗಿ ಬರುತ್ತೇವೆ.

---

ಸಂದರ್ಶನ – ಲೇಖನ : **ನಂದಕಿಶೋರ್ ಎಂ. ಪಿ.**
ನಂ. ೧೦೨೪, ೨೭ನೇ 'ಎ' ಮುಖ್ಯರಸ್ತೆ, ೯ನೇ ಬ್ಲಾಕ್
ಜಯನಗರ ಪೂರ್ವ, ಬೆಂಗಳೂರು – ೫೬೦ ೦೬೯



## ಹೊಸ ಓದು



**ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಮುಂತಾದವರೊಡನೆ**

ಕೋಚೆ

**ಪುಟ : viii+೧೩೬=೧೪೪**

**ಬೆಲೆ : ರೂ. ೧೨೦**

**ಕೋ. ಚೆನ್ನಬಸಪ್ಪ, ಶ್ರೀ ಅರವಿಂದ ಪ್ರಕಾಶನ,** ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು – ೫೬೦ ೦೮೬

ಮೊದಲ ವ್ಯಕ್ತಿ ಚಿತ್ರವೇ ಸ್ವತಂತ್ರ ಭಾರತದ ಪ್ರಥಮ ದಂಡನಾಯಕರಾಗಿದ್ದ ಹೆಮ್ಮೆಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪನವರ ಬಗೆಗಿದ್ದು ಲೇಖಕರು ಮೊದಲ ಗೌರವ ಸಲ್ಲಿಸಿದ್ದಾರೆ. ಮುಂದಿನ ಲೇಖನಗಳೂ ಪ್ರಸಿದ್ಧರ ಕುರಿತಾಗಿಯೇ ಇವೆ. ತನ್ನ ಕಾಲದ, ತಾನು ತೀರ ಹತ್ತಿರದಿಂದ ಬಲ್ಲ ವ್ಯಕ್ತಿಗಳನ್ನು ಕೋಚೆ ಇಲ್ಲಿ ಪರಿಚಯಿಸಿದ್ದಾರೆ. ಎಲ್ಲರೂ ಸಜ್ಜನಿಕೆಯ ಸಾಕಾರ ಮೂರ್ತಿಗಳು, ಸಹೃದಯರು. ಇಂದು ಬಲು ಅಪರೂಪಕ್ಕೆ ಕಾಣಸಿಗುವಂತಹ ವ್ಯಕ್ತಿತ್ವ ಹೊಂದಿರುವವರು. ಮನುಷ್ಯನ ನಡವಳಿಕೆಗಳಲ್ಲಿ, ಯೋಚನೆಗಳಲ್ಲಿ ಭಾರಿ ಬದಲಾವಣೆ ಕಂಡುಬರುತ್ತಿರುವ ಇಂದಿನ ದಿನಮಾನಕ್ಕೆ ಅತಿ ಅವಶ್ಯ ವಾಗಿರುವ ಮಾದರಿಯಾಗಿರುವವರು. ನಮಗಿಂತ ಒಂದೆರಡು ತಲೆಮಾರು ಹಿಂದೆ ಬದುಕಿದ್ದವರು, ಅಷ್ಟೆ. ಕಾಲ ಬದಲಾದಂತೆ ಮನುಷ್ಯರೂ ಮೌಲ್ಯಗಳನ್ನು ಅನಿವಾರ್ಯ ವಾಗಿ ಬದಲಿಸುತ್ತಿದ್ದಾರೆ. ಇಲ್ಲಿ ಮೂಡಿಬಂದಿರುವ ವ್ಯಕ್ತಿಚಿತ್ರಗಳನ್ನೋದಿ ನಾವು ಕಳೆದುಕೊಂಡದ್ದನ್ನು ಮತ್ತೆ ಪಡೆಯುವಂತಾದರೆ ಎಷ್ಟು ಚೆನ್ನ ಅಲ್ಲವೇ? ಈ ಲೇಖನಗಳ ಉದ್ದೇಶವೂ ಅದೇ ಆಗಿದೆ. ವ್ಯಕ್ತಿಚಿತ್ರ ಗಳನ್ನೋದುತ್ತಿದ್ದಂತೆ ನಾವೂ ಅಂದಿನ ಸಹಜ ಪರಿಸರಕ್ಕೆ ತಂತಾನೇ ಹೊರಳಿಬಿಡುತ್ತೇವೆ. ಇಂದಿನಂತೆ ಆಧುನಿಕ ವಲ್ಲದ ಕಷ್ಟಸಹಿಷ್ಣುಗಳಾದ ಜನರಿಂದ ತುಂಬಿದ ಆ ಕಾಲವನ್ನು ನಾವು ಊಹಿಸಿ ಮಾತ್ರ ತಿಳಿದುಕೊಳ್ಳಬೇಕಷ್ಟೆ.

ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ – ೨

**ಚೀಣಾದಲ್ಲಿ ತತ್ತ್ವಶಾಸ್ತ್ರ** *ಡಾ॥ ಜಿ. ರಾಮಕೃಷ್ಣ, ಕನ್ನಡಕ್ಕೆ : ಡಾ॥ ಜಿ. ರಾಮಕೃಷ್ಣ*

**ಪುಟ : ೧೯೬** **ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಚೀಣ ಇಂದು ಆಧುನಿಕ ರಾಷ್ಟ್ರಗಳಲ್ಲೊಂದು. ಎಲ್ಲರೂ ಆ ದೇಶದ ಕಡೆಗೆ ಮುಖ ಮಾಡಿದ್ದಾರೆ. ಈ ದೇಶದ ಬಗೆಗೆ ಸುಮಾರು ಕ್ರಿ. ಪೂ. ೧೬೦೦ರಷ್ಟು ಹಿಂದಕ್ಕೆ ದೃಷ್ಟಿ ಹಾಯಿಸಿ ಇತಿಹಾಸವನ್ನು ಬಗೆದು ಅಲ್ಲಿನ ಪ್ರಾರಂಭದ ತತ್ತ್ವಶಾಸ್ತ್ರದ ಬೇರುಗಳನ್ನು ಅರ್ಥೈಸುವ ಈ ಪ್ರಯತ್ನ ಶ್ಲಾಘನೀಯ. ಓದುಗರಿಗೊಂದು ರೋಚಕ ಅನುಭವ. ಪ್ರಾಚೀನ ಚೀಣವು ದೈವೀಕಲ್ಪನೆಗಳಿಗೆ – ಮತಧರ್ಮಗಳಿಗೆ ಎಂದೂ ಪ್ರಾಮುಖ್ಯ ಕೊಟ್ಟಿರಲಿಲ್ಲ. ಮುಂದೆ ಅಲ್ಲಿ ಬೌದ್ಧಧರ್ಮ ಹೆಚ್ಚು ಪ್ರವರ್ಧಮಾನಕ್ಕೆ ಬರಲು ಈ ಮನೋಭಾವನೆಯೂ ಹೆಚ್ಚು ಗುಣಾತ್ಮಕವಾಗಿದ್ದಿರಬಹುದು. ಚೀಣದ ಪ್ರಾಚೀನ ತತ್ತ್ವಶಾಸ್ತ್ರವು ಹೊಸ ದೃಷ್ಟಿಕೋನ ಬೆಳೆಸಿಕೊಂಡಿತ್ತು ಎನ್ನುವುದು ಇದರಿಂದ ಸ್ಪಷ್ಟ. ಸದಾ ಅಧ್ಯಾತ್ಮದ ಗುಂಗಿನಲ್ಲಿರದೆ ಹೊಸ ವಿಚಾರಗಳಿಗೆ ತೆರೆದುಕೊಂಡಿದ್ದ ಇಲ್ಲಿನ ತತ್ತ್ವಶಾಸ್ತ್ರಕ್ಕೆ ಜಗತ್ತಿನಲ್ಲೆಲ್ಲ ವಿಶಿಷ್ಟ ಸ್ಥಾನವಿದೆ. ಈ ಗ್ರಂಥದ ವಿಶೇಷವೆಂದರೆ ಭಾರತದ ತತ್ತ್ವಶಾಸ್ತ್ರ ಶಾಖೆಗಳೊಡನೆ ಇಲ್ಲಿನವುಗಳನ್ನು ತುಲನೆ ಮಾಡಿರುವುದು. ಕನ್‌ಫ್ಯೂಶಿಯಸ್, ತವೋಸಿದ್ಧಾಂತ, ಮೋ ಹಾಗೂ ಇತರ ವೈಚಾರಿಕ ತತ್ತ್ವಜ್ಞಾನ ಶಾಖೆಗಳ ವಿವರ ಕೊಟ್ಟಿರುವ ಈ ಗ್ರಂಥ ಅಧ್ಯಯನ ಯೋಗ್ಯವಾಗಿದ್ದು ಅಪರೂಪದ ಮಾಹಿತಿ ಸಂಗ್ರಹವಾಗಿದೆ. ಇಂಗ್ಲಿಷ್ ಮೂಲದ ಲೇಖಕರು ಮತ್ತು ಅನುವಾದಕರು ಒಬ್ಬರೇ ಆಗಿರುವುದರಿಂದ ಕೃತಿ ಇನ್ನಷ್ಟು ಸ್ಫುಟವಾಗಿ ಮೌಲಿಕವಾಗಿದೆ.



ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ – ೩

**ಭಾರತದಲ್ಲಿ ತತ್ತ್ವಶಾಸ್ತ್ರ**

*ಡಾ॥ ಎಂ. ಕೆ. ಗಂಗೋಪಾಧ್ಯಾಯ, ಕನ್ನಡಕ್ಕೆ : ಡಾ॥ ಬಿ. ಎನ್. ಸುಮಿತ್ರಾಬಾಯಿ*

**ಪುಟ : ೧೭೭** **ಬೆಲೆ : ರೂ. ೧೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಅತಿ ಪ್ರಾಚೀನ ಹಾಗೂ ತುಂಬ ವಿಸ್ತಾರವುಳ್ಳ ಭಾರತೀಯ ತತ್ತ್ವಶಾಸ್ತ್ರವನ್ನು ಸಾಮಾನ್ಯ ಜನರಿಗೂ ನಿಲುಕುವಂತೆ ಸರಳವಾಗಿ ಪರಿಚಯಿಸುವ ಕೃತಿ ಇದು. ವಿಶ್ವದ ಬಗೆಗಿನ ಅರಿವನ್ನು ಹೆಚ್ಚಿಸಲು ನೆರವಾಗುವ ತತ್ತ್ವಶಾಸ್ತ್ರದ ಬಗೆಗೆ ಜಗತ್ತಿನಾದ್ಯಂತ ದಾರ್ಶನಿಕರು ಚಿಂತನೆ ನಡೆಸಿದ್ದಾರೆ. ಅಂತೆಯೇ ಭಾರತವೂ ಹಿಂದೆ ಬಿದ್ದಿಲ್ಲ ಮಾತ್ರವಲ್ಲ – ಒಂದು ಹೆಜ್ಜೆ ಮುಂದೆಯೇ ಸಾಗಿದೆ. ಹಾಗಾಗಿ ಭಾರತೀಯ ತತ್ತ್ವಶಾಸ್ತ್ರವು ಲೋಕದಲ್ಲೆಲ್ಲ ಖ್ಯಾತಿ ಪಡೆದು ಬಹು ಚರ್ಚಿತವೂ ಆಗಿ ವಿದ್ವಾಂಸರ ಗಮನ ಸೆಳೆದು ಮನ್ನಣೆ ಪಡೆದಿದೆ. ಕಾಲ–ದೇಶಗಳ ವ್ಯಾಪ್ತಿಗೆ ಒಳಗಾಗಿ ಅನೇಕ ಅಭಿಪ್ರಾಯ ಭೇದಗಳು, ಹಲವು ವ್ಯಾಖ್ಯೆಗಳು, ವಿವಿಧ ಶಾಖೆಗಳು ಅಲ್ಲಿದ್ದು ಬಹುಮುಖೀ ಪ್ರತಿಪಾದನೆಗಳ ಮಹಾಸಾಗರವದು. ಪ್ರಕೃತಿ ಮತ್ತು ಮಾನವನ ನಡುವಿನ ಸಂಬಂಧಗಳ ಬಗ್ಗೆ ಚಿಂತನೆ ನಡೆಸುತ್ತ ಕವಲುಗಳಾಗಿ ಒಡೆಯುತ್ತ ಮತ್ತೆ ಒಂದಾಗಿ ಭೋರ್ಗರೆಯುತ್ತ ಎಲ್ಲಿಂದೆಲ್ಲಿಗೋ ಹರಿದ ಭಾರತೀಯ ತತ್ತ್ವಶಾಸ್ತ್ರ ಹೊಸ ಹೊಸ ಹೊಳಹುಗಳನ್ನು ಗಳಿಸಿದೆ. ಬೌದ್ಧ, ಜೈನ, ಚಾರ್ವಾಕರಂಥ ನಿರೀಶ್ವರವಾದಿ ಪಂಥಗಳಿಂದ ಶ್ರೀಮಂತವಾಗಿದ್ದ ಭಾರತದ ದಾರ್ಶನಿಕ ಪರಂಪರೆ ಈಶ್ವರವಾದಿಗಳ ನೆಲೆಯಾಗಿ ಪರಿವರ್ತಿತವಾದ ಸತ್ಯವನ್ನೂ ಇಲ್ಲಿನ ಅಧ್ಯಾಯಗಳಲ್ಲಿ ಓದಬಹುದು. ಹಲವು ಪಂಥಗಳ ಅಪಾಯಕಾರಿ ಘರ್ಷಣೆಯಿಂದಾದ ಅನಾಹುತಗಳೂ ಇಲ್ಲಿ ಚರ್ಚೆಗೊಳಪಟ್ಟಿವೆ. ತತ್ತ್ವಶಾಸ್ತ್ರದ ಸಂಕ್ಷಿಪ್ತ ಇತಿಹಾಸದಂತಿರುವ ಅಮೂಲ್ಯ ಕೃತಿ.

**ವಾದಿ ಸಂವಾದಿ (ಸಂಗೀತವನ್ನು ಕುರಿತು ಪಂಡಿತ್ ರಾಜೀವ ತಾರಾನಾಥ ಅವರ ಚಿಂತನೆಗಳು)**

*ಸಂಪಾದನೆ ಹಾಗೂ ಅನುವಾದ : ಶೈಲಜ ಮತ್ತು ಟಿ. ಎಸ್. ವೇಣುಗೋಪಾಲ್*

**ಪುಟ : ೧೬೮** **ಬೆಲೆ : ರೂ. ೧೨೫**

**ರಾಗ ಮಾಲಾ,** ಸಿ ಹೆಚ್ – ೭೫, ೭ನೇ ಮುಖ್ಯರಸ್ತೆ, ಸರಸ್ವತೀಪುರಂ, ಮೈಸೂರು – ೫೭೦ ೦೦೯




'ಸರೋದ್ ಮಾಂತ್ರಿಕ' ಎಂದೇ ಖ್ಯಾತರಾದ ರಾಜೀವ್ ತಾರಾನಾಥರ ಸಂಗೀತದ ಬಗೆಗಿನ ಚಿಂತನೆಗಳು – ಅನಿಸಿಕೆಗಳು ಇಲ್ಲಿ ದಾಖಲಾಗಿವೆ. ಇಲ್ಲಿ ಪುಸ್ತಕದ ತುಂಬ ರಾಜೀವ್ ತಾರಾನಾಥರೇ ಮಾತನಾಡಿದ್ದಾರೆ. ಬದುಕಿನ ವಿವರಗಳನ್ನು ಸಂಗೀತದ ಜೊತೆಗಿರಿಸಿ ಆತ್ಮೀಯವಾಗಿ ಹೇಳಿಕೊಂಡಿದ್ದಾರೆ. ಸಂಗೀತದ ಮಧ್ಯೆಯೇ ಹುಟ್ಟಿ ಬೆಳೆದು, ಸಂಗೀತವನ್ನೇ ಆರಾಧಿಸಿ ಉಸಿರಾಡಿದ ರಾಜೀವ್ ತನ್ನ ಬಗ್ಗೆ ಮಾತ್ರ ಹೇಳಿಕೊಳ್ಳದೆ ತನ್ನನ್ನು ರೂಪಿಸಿದ ಅಂದಿನ ಇನ್ನೂ ಅನೇಕ ಪ್ರಸಿದ್ಧ ಸಂಗೀತ ದಿಗ್ಗಜರನ್ನೂ ನೆನಪಿಸಿಕೊಂಡಿದ್ದಾರೆ. ಸಂದರ್ಶನಗಳಲ್ಲಿನ ಮಾತುಗಳು, ಪ್ರಸಿದ್ಧರು ಹಾಗೂ ಜನಸಾಮಾನ್ಯರೊಂದಿಗಿನ ಸಂಭಾಷಣೆಗಳು, ತನ್ನ ನೆನಪಿನಾಳದಿಂದ ತೋಡಿಕೊಂಡ ಆತ್ಮೀಯ ಭಾವನೆಗಳು ಕೃತಿಯ ಸಾಲು ಸಾಲುಗಳಲ್ಲೂ ಪ್ರತಿಧ್ವನಿಸಿ ಸಂಗೀತಮಯ ಸನ್ನಿವೇಶವನ್ನೇ ಸೃಷ್ಟಿಸಿಬಿಟ್ಟಿವೆ. ಸರೋದ್ ಕೇಳುತ್ತಿರುವೆವೋ ರಾಜೀವ್ ಮಾತುಗಳನ್ನೋ ಎಂಬಷ್ಟು ತಾದಾತ್ಮ್ಯ ಮೂಡಿಬಂದಿದೆ. ಇಷ್ಟೆಲ್ಲ ಮಾತನಾಡುವಾಗ ರಾಜೀವ್ ತನಗೆ ಅತಿ ಪೂಜ್ಯರಾದ, ತನಗೆ ಬಾಲ್ಯದಲ್ಲಿ ಗುರುಗಳಂತಿದ್ದ ತನ್ನ ತಂದೆ ತಾರಾನಾಥರನ್ನು ಮರೆತಿಲ್ಲ. ತನ್ನ ತಾಯಿಯನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಅಪರೂಪದ ಛಾಯಾಚಿತ್ರಗಳು ಪುಸ್ತಕಕ್ಕೆ ಮೆರಗನ್ನು ನೀಡಿವೆ.

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨

ಕೀರ್ತನೆಯನ್ನು ನಾವು ಈವರೆಗೆ ಅರ್ಥ ಮಾಡಿಕೊಂಡಿರುವುದು ಅದು ತಾನು ಅನುಸಂಧಾನಿಸುತ್ತಿರುವ ದೈವದ ಲೀಲಾ ವಿಲಾಸಗಳ ನಿರೂಪಣೆ ಎಂದು. ಭಕ್ತನ ಆತ್ಮನಿವೇದನೆ ಹಾಗೂ ಸಮಾಜ ವಿಮರ್ಶೆ ದಾಖಲೆ ಎಂಬ ಆಯಾಮಗಳಲ್ಲಿ ವಿವರಿಸುವ-ಅರಿಯುವ ಪ್ರಯತ್ನಗಳೂ ನಡೆದಿವೆ.  ಮುಖ್ಯವಾಗಿ ಭಕ್ತನಿಗೆ ಈ ಭವದ ಪದಾರ್ಥ ಲೋಕದ ಮೂಲಕವೇ ದೈವ ಸಾಕ್ಷಾತ್ಕಾರವಾಗುವ ಪರಿಯನ್ನು ಅಥವಾ ಆ ಅರಿವನ್ನೇ ಅನುಭಾವವಾಗಿ ಕೀರ್ತನಾ ಪರಂಪರೆ ಕಟ್ಟಿಕೊಟ್ಟಿದೆ.

# ಕನಕದಾಸರ ಕೀರ್ತನೆಗಳಲ್ಲಿ ಅನುಭಾವ ದರ್ಶನ



*ಕಲ್ಪವೃಕ್ಷ ವೃಂದಾವನಗಳಲಿ ಹೇಗೋ ಹೊಕ್ಕು ಬಂದೆ*
*ಅಲ್ಲ ನಿದ್ದೆಯೂ ಅಲ್ಲ ಎಚ್ಚರವೂ ಯಾವ ಯಾವ ಯೋಗದಿಂದೆ ?*

**– ಬೇಂದ್ರೆ**

ಅನುಭಾವ ಎಂದರೆ ಏನು ? ಎನ್ನುವ ಪ್ರಶ್ನೆ ಮತ್ತೆ ಮತ್ತೆ ಸಂಸ್ಕೃತಿ ವಿಮರ್ಶೆಯಲ್ಲಿ ಕಾಣಿಸಿಕೊಳ್ಳುತ್ತಿದೆ. ಅನುಭಾವ ಎನ್ನುವ ಪದ ಆಧ್ಯಾತ್ಮಿಕವಾದ ಅನುಭವವನ್ನು ಸೂಚಿಸುವಂತಹ ಪದ ಎಂಬ ರೂಢಿಯ ಅರ್ಥದಿಂದಾಗಿಯೇ ನಾವು ದಾರಿ ತಪ್ಪಿರುವ ಹಾಗೆ ತೋರುತ್ತದೆ. ಅನುಭಾವ ಎನ್ನುವ ಅರಿವಿನ ನೆಲೆಯನ್ನು ವಿವರಿಸಲು ಯತ್ನಿಸುವ ಅತೀತ–ಅಲೌಕಿಕ–ಅತಾರ್ಕಿಕ–ಅನೂಹ್ಯ–ಅಗೋಚರ–ಆಗಮಿಕ–ಅನುಭೂತಿ ಇತ್ಯಾದಿ ಪದಗಳು ಬಳಕೆಯಲ್ಲಿವೆ. ಇದು ಕೂಡ ಸಮಸ್ಯೆ ಮತ್ತಷ್ಟು ಸಂಕೀರ್ಣವಾಗಲು ಕಾರಣವಾಗಿದೆ. ಮನುಷ್ಯನ ಲೋಕ ಸಂಬಂಧಗಳು ಕಾಲದೇಶಗಳ ಕುರುಹಿನ ಜೊತೆ ತಾರ್ಕಿಕವಾಗಿ ಅರಿವಿಗೆ ಬರುವ ಪ್ರಕ್ರಿಯೆಯನ್ನು ಅನುಭವ ಎಂದು ಸರಳವಾಗಿ ಗ್ರಹಿಸಬಹುದು. ಆದರೆ ಕೆಲವು ಅನುಭವಗಳನ್ನು ಭಾಷೆಯಲ್ಲಿ ಸಿದ್ಧಗೊಂಡಿರುವ ಅರ್ಥಗಳಲ್ಲಿ ಗ್ರಹಿಸಲಾಗುವುದಿಲ್ಲ. ಅಂತಹವನ್ನು ಸಾರಾಸಗಟಾಗಿ ಅನುಭಾವದ ಗುಂಪಿಗೆ ಒಗ್ಗಿಸಲಾಗುವುದಿಲ್ಲ. ಮನುಷ್ಯ ತನ್ನ ಸ್ವಂತದ್ದು ಎಂದು ತಿಳಿಯುವ ಅನೇಕ ಅನುಭವಗಳು ನಿರೂಪಿಸುತ್ತಿರುವ ವ್ಯಕ್ತಿಯದಾಗಿರದೆ ಮತ್ತೊಬ್ಬರು ಈಗಾಗಲೇ ಗ್ರಹಿಸಿ ಬಳಸುತ್ತಿರುವ ಭಾಷಿಕ ನೆಲೆಯ ವಿಸ್ತರಣೆಯಾಗಿಯೋ ಅಥವಾ ಪುನರ್ ಅನುಕರಣೆಯಾಗಿಯೋ ಕಾಣಿಸಿಕೊಳ್ಳುತ್ತದೆ. ನನ್ನದೆಂಬ ಈ ಮಾತು ಮತ್ತ್ಯಾರದೋ ಪ್ರತಿಧ್ವನಿಯಾಗಿ ಕೇಳಿಸುವುದು ಮಾತಿಗಿರುವ ಸಂಕಟ. ಅಲ್ಲಮ ಪ್ರಭು ಭಾಷೆಯೆಂಬುದು ಪ್ರಾಣಘಾತಕ ಎಂದಿರುವುದು ಕೂಡ ಈ ಕಾರಣದಿಂದಲೇ ಇರಬಹುದು. ಅನುಭಾವ ಎನ್ನುವುದು ಅರಿವನ್ನು ಒಡೆದು ನೋಡುವ ಕ್ರಮ. ಕಾಲದೇಶಗಳು ಒಂದು ವಿಶಿಷ್ಟ ರೀತಿಯಲ್ಲಿ ಮುರಿದುಬೀಳುತ್ತಿರುವ ವಿನ್ಯಾಸ. ಆದ ಕಾರಣ ಬಸವಣ್ಣ ಇದನ್ನು 'ಶಿಶು ಕಂಡ ಸ್ವಪ್ನ' ಎಂದು ಕರೆದಿದ್ದಾರೆ. ಸಂತರು ಅನುಭವವನ್ನು ನಡೆದ ದಾರಿ ಎಂದು ಕರೆದರೆ, ಅನುಭಾವದ ನಡೆ ಹೆಜ್ಜೆಯನ್ನು ಅಳಿಸಿಕೊಂಡು ನಡೆಯಬೇಕಾದ ಪ್ರಯಾಣ ಎಂದು ವಿವರಿಸಿದ್ದಾರೆ. ಅನುಭಾವ ಎನ್ನುವುದು ಗುರುತುಗಳನ್ನು ಈಡಾಡುತ್ತಿರುವ ಪ್ರಕ್ರಿಯೆ ಮಾತ್ರವಲ್ಲ, ಅನುಭವದ ಮೈಲಿಗೆಯನ್ನು ತೊಳೆಯುವ ಕ್ರಿಯೆಯೂ ಹೌದು. ವಸ್ತುಲೋಕದಿಂದ ಮನುಷ್ಯ ಪಡೆಯುವ ಹೊಚ್ಚ ಹೊಸ ಅನುಭವವನ್ನು ಅನುಭಾವವೆಂದು ಕರೆಯಬಹುದೆ ?

ಅನುಭಾವ ಎನ್ನುವುದು ಅಂತಿಮವಾಗಿ ಐಂದ್ರಿಕ ಜನ್ಯವೇ ಆದರೂ ಅದು ಅಭಿವ್ಯಕ್ತವಾಗುವುದಕ್ಕೆ ಆಶ್ರಯಿಸುವ ಆಕರಗಳು ಮಾತ್ರ ಲೋಕ ಪದಾರ್ಥಗಳೇ ಆಗಿವೆ. ಆದರೆ ಅನುಭವಾರ್ಥ ಮಾತ್ರ ಭಿನ್ನ.  ಸಾಹಿತ್ಯ ಮತ್ತು ಸಂಸ್ಕೃತಿಯ ಚರ್ಚೆಯಲ್ಲಿ ಅನುಭಾವದ ಗುರುತು ಮತ್ತು ಅರ್ಥ ನಿಷ್ಕರ್ಷೆ ಇನ್ನೂ ಬಗೆಹರಿಯದ ಸಂಗತಿ. ಶರಣರು, ದಾಸರು, ಸಂತರು, ಈ ಅಗ್ನಿದಿವ್ಯಕ್ಕೆ ತಮ್ಮನ್ನು ಒಡ್ಡಿಕೊಂಡಿದ್ದರಿಂದ ಕನ್ನಡ ಸಂವೇದನಾ ಜಗತ್ತು ಈ ವಿಷಯದಲ್ಲಿ ಸಾಕಷ್ಟು ಶ್ರೀಮಂತವಾಗಿರುವುದು ಕನ್ನಡ ಭಾಷೆಯ ಪುಣ್ಯ.

ಕೀರ್ತನೆಯನ್ನು ನಾವು ಈವರೆಗೆ ಅರ್ಥ ಮಾಡಿಕೊಂಡಿರುವುದು ಅದು ತಾನು ಅನುಸಂಧಾನಿಸುತ್ತಿರುವ ದೈವದ ಲೀಲಾ ವಿಲಾಸಗಳ ನಿರೂಪಣೆ ಎಂದು. ಭಕ್ತನ ಆತ್ಮನಿವೇದನೆ ಹಾಗೂ ಸಮಾಜ ವಿಮರ್ಶೆ ದಾಖಲೆ ಎಂಬ ಆಯಾಮಗಳಲ್ಲಿ ವಿವರಿಸುವ – ಅರಿಯುವ ಪ್ರಯತ್ನಗಳೂ ನಡೆದಿವೆ.  ಮುಖ್ಯವಾಗಿ ಭಕ್ತನಿಗೆ ಈ ಭವದ ಪದಾರ್ಥ ಲೋಕದ ಮೂಲಕವೇ ದೈವ ಸಾಕ್ಷಾತ್ಕಾರವಾಗುವ ಪರಿಯನ್ನು ಅಥವಾ ಆ ಅರಿವನ್ನೇ ಅನುಭಾವವಾಗಿ ಕೀರ್ತನಾ ಪರಂಪರೆ ಕಟ್ಟಿಕೊಟ್ಟಿದೆ. ಕನಕದಾಸರೂ ಇತರ ಎಲ್ಲಾ ದಾಸರಂತೆ ಅನುಭಾವದ ಅಭಿವ್ಯಕ್ತಿಗೆ ಕೆಲ ತೊಡರುಗಳನ್ನು

**ಕೆ. ವೈ. ನಾರಾಯಣಸ್ವಾಮಿ**

ಎದುರಿಸಿದ್ದಾರೆ. ಅನುಭವಕ್ಕೆ ಕಾರಣೀಭೂತವಾಗಿರುವ ಲೋಕ–ದೇಹ–ಭಾಷೆ ಇವುಗಳನ್ನು ಕನಕದಾಸರು ನಿಭಾಯಿಸಿರುವ ಕ್ರಮ ಅವರ ಕಾಣ್ಕೆಯನ್ನು ಅನನ್ಯವಾಗಿಸಿರುವ ಅಂಶವಾಗಿದೆ.

ಕನಕದಾಸರು ಅನುಸಂಧಾನಿಸುವ ವಸ್ತುಲೋಕ ಮತ್ತು ದೈವ ಇವು ಬೇರೆಬೇರೆಯಲ್ಲ. ದೈವ ಮತ್ತು ಭೌತಿಕ ಪದಾರ್ಥಗಳು ಕೂಡ ಮಾಯಾ ಗುಣಗಳನ್ನು ಪಡೆದಿವೆ. ಮಾಯೆ ಎಂಬುದನ್ನು ಗ್ರಹಿಸುತ್ತಿರುವ ವಿನ್ಯಾಸವು ಕೂಡ ವಿಶಿಷ್ಟವಾಗಿದೆ. ಲೋಕದ ಮಾಯೆ ದೈವವನ್ನು ಅರಿಯಲು ಅಡ್ಡಿ ಎಂಬ ತಿಳುವಳಿಕೆ ಕನಕದಾಸರಲ್ಲಿ ಪಲ್ಲಟವಾಗಿರುವುದನ್ನು ಕಾಣಬಹುದು. ಮಾಯೆ ಎನ್ನುವುದು ಇರುವ ಸಂಗತಿಯಲ್ಲ, ಅದು ತೋರುವ ವಿಶಿಷ್ಟತೆ ಎಂಬ ನಿಲುವು ಅನುಭಾವದ ಮತ್ತೊಂದು ಆಯಾಮವನ್ನು ನಮ್ಮ ಅರಿವಿಗೆ ತರುತ್ತದೆ.

**ತಲ್ಲಣಿಸುವ ಲೋಕ**

ಕನಕದಾಸರ ಕೀರ್ತನೆಗಳಲ್ಲಿ ಕಂಡರಿಸಿದ ಲೋಕ ತಲ್ಲಣದ ಲೋಕ. ಈ ತಲ್ಲಣ ವಸ್ತುವಿನ ನಿತ್ಯ ಪರಿವರ್ತನಾಶೀಲತೆಯಿಂದ ಉಂಟಾದುದ್ದು. 'ತಲ್ಲಣಿಸದಿರು ಕಂಡ್ಯ ತಾಳು ಮನವೇ ಎಲ್ಲರನು ಸಲಹುವವನು ಇದಕೆ ಸಂಶಯವಿಲ್ಲ' ಎಂದು ಮತ್ತೆ ಮತ್ತೆ ಸಂತೈಸುವ ಪ್ರಯತ್ನದಲ್ಲಿಯೇ ಅನಿಶ್ಚಿತತೆ ಎದ್ದು ಕಾಣುತ್ತದೆ. ನಾವು ಭಾವಿಸಿರುವಂತೆ ಅಪ್ರತಿಮ ನಂಬಿಕೆಯ ಸಂಗತಿಯಲ್ಲ ಅದು. ಪರಿವರ್ತನೆ ವ್ಯಾಪಾರಗಳು ಕ್ಷಣ ಕ್ಷಣವೂ ಸಂಶಯವನ್ನು ಹುಟ್ಟು ಹಾಕುತ್ತಿರುವುದರಿಂದ 'ಇದಕೆ ಸಂಶಯವಿಲ್ಲ' ಎಂದು ಭರವಸೆಯನ್ನು ಕಟ್ಟಿಕೊಳ್ಳುವ ವಿನ್ಯಾಸ ಭಕ್ತನಿಗೆ ದೈವದಲ್ಲಿ ದೃಢನಂಬಿಕೆ ಹೊಂದಿದ್ದಾನೆ ಎಂಬ ನಮ್ಮ ತಿಳುವಳಿಕೆಯನ್ನು ಪಲ್ಲಟಿಸುವಂತಿದೆ.

*ನವ ಮೋಹನಾಂಗೇರ ರೂಪವ ಕಣ್ಣಲ್ಲಿ*
*ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ...*
*ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ*
*ಕಡು ರುಚಿಗೊಂಡರೆ ಆ ರುಚಿ ನಿನ್ನದಯ್ಯ ...*

– ಇಲ್ಲಿನ ತಲ್ಲಣದ ನೆಲೆ ಐಂದ್ರಿಕವಾದ ಪ್ರವೃತ್ತಿಗಳ ಕುರಿತದ್ದು. ಭಕ್ತನು ಕೂಡ ಪಂಚೇಂದ್ರಿಯಗಳ ವರ್ತನೆಗಳಿಗೆ ಅಧೀನನಾಗಿ ಮತ್ತು ಅವು ಆತನ ಇಚ್ಛೆಗೆ ವಿರುದ್ಧವಾಗಿ ವರ್ತಿಸುವ ರೀತಿ ತಲ್ಲಣದ




ಕಾರಣದ್ರವ್ಯವಾಗಿದೆ. ಲೋಕದ ಸಂಭ್ರಮಗಳಿಗೆ ವಿಮುಖವಾಗಿರುವ ಡಾಂಭಿಕತೆಯಾಗಲಿ ಅಥವಾ ಹುಸಿ ನಿರ್ಲಕ್ಷತೆಯಾಗಲಿ ಇಲ್ಲಿ ಕಾಣುವುದಿಲ್ಲ. ನೋಟ ಮತ್ತು ರುಚಿಗಳನ್ನು ನಿರೂಪಿಸುವಾಗ ಕಾಣುವ ತೀವ್ರತೆಯನ್ನು ಗಮನಿಸಿದರೆ ಸಾಕು, ಇಲ್ಲಿನ ಪದಗಳಲ್ಲಿ ಅನುಭವದ ತಿರಸ್ಕಾರ ಕಾಣುವುದಿಲ್ಲ. ಅಲ್ಲದೆ ಈ ತಲ್ಲಣವನ್ನು ದೇವರು ಒಡ್ಡುತ್ತಿರುವ ಪರೀಕ್ಷೆ ಎಂಬಂತೆ ಕನಕದಾಸರು ಪರಿಭಾವಿಸದಿರುವುದೇ ಈ ಕೀರ್ತನೆಗಳ ಸೊಗಸಿಗೆ ಕಾರಣವಾಗಿರುವಂತೆ ಇತರ ಕೀರ್ತನೆಕಾರರಿಂದಲೂ ಕನಕರನ್ನು ಪ್ರತ್ಯೇಕಿಸುವ ಅಂಶವಾಗಿದೆ. 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' ಎನ್ನುವ ಕೀರ್ತನೆಯ ಆರಂಭದಲ್ಲಿ ನಿರೂಪಣೆಗಳು ಬೆರಗಿನಂತೆ ಕಂಡರೂ ಅದು ಪರಸ್ಪರ ಸಂಧಿಗೊಳ್ಳುವ ಪ್ರಕ್ರಿಯೆಯನ್ನು ಆತಂಕ ಮೂಲವಾಗಿಯೇ ಗ್ರಹಿಸಿರುವುದು 'ಉಸಿರೆನ್ನಳವಲ್ಲ ಎಲ್ಲ ನಿನ್ನೊಳಗೋ ಹರಿಯೆ' ಎಂಬ ಸಂಶಯದ ನೆಲೆಗೆ ಸರಿಯುವುದನ್ನು ಗಮನಿಸಬಹುದು.



**ದೇಹವೆಂಬ ಲಜ್ಜೆ**

ಅಧ್ಯಾತ್ಮದ ಮಾತು ಬಂದಾಗಲೆಲ್ಲ ದೇಹವನ್ನು ಅನುಭಾವದ ದಾರಿಯಲ್ಲಿನ ಅಡ್ಡಿಯಾಗಿ ಗ್ರಹಿಸುವ ಸಾಂಪ್ರದಾಯಿಕ ನೆಲೆ ನಮ್ಮ ಭಕ್ತಿ ಸಾಹಿತ್ಯದಲ್ಲಿ ವಿಪುಲವಾಗಿ ಕಂಡುಬರುತ್ತದೆ. ದೇಹ ನಶ್ವರವೂ ಅಶಾಶ್ವತವೂ ಆಗಿರುವುದರಿಂದ ಅದು ಭವಿ. ವಿಶಿಷ್ಟಾದ್ವೈತದಲ್ಲಿ ಶರೀರವನ್ನು ನಿತ್ಯನರಕಿ ಎಂದೇ ಗುರುತಿಸಲಾಗಿದೆ. ಹಸಿವು, ನೀರಡಿಕೆ, ನಿದ್ದೆ, ಮೈಥುನಾದಿಗಳ ಹಂಗಿನಿಂದ ಮುಕ್ತವಾಗಲಾರದ ಈ ಶರೀರವು ಪರದ ಶತ್ರು ಎಂಬಂತೆ ಕಲ್ಪಿಸಿಕೊಳ್ಳಲಾಗಿದೆ. ಆದರೆ ಕನಕರಲ್ಲಿ ಮಾತ್ರ ದೇಹ ಇಹದ ಪಾರಮ್ಯವನ್ನು ಒಪ್ಪುವಂತಹದು. ಇವರಲ್ಲಿ ಇತರರಂತೆ ದೇಹವನ್ನು ಕುರಿತ ತುಚ್ಛೀಕರಣ ಭಾವವನ್ನು ಹೊಂದಿಲ್ಲದಿರುವುದು ಅಚ್ಚರಿಯನ್ನೂ ಗೌರವವನ್ನೂ ತರುವ ವಿಷಯವಾಗಿದೆ. ದೈವದ ಮಾಯೆ ಮೈದೋರುವ ಮಾಧ್ಯಮ ಶರೀರವೇ ಎಂಬ ಪ್ರಾಥಮಿಕ ಅವಶ್ಯಕತೆಯನ್ನು ಕನಕರು ಗ್ರಹಿಸಿರುವುದನ್ನು ಅವರ ಕೀರ್ತನೆಗಳು ಸಾದರಪಡಿಸುತ್ತವೆ. ಕನಕರ ಕೀರ್ತನೆಗಳಲ್ಲಿ ಕೇಶವನೂ ಕೂಡ ಭಕ್ತರ ಹಾಗೆಯೆ ಶರೀರದ ದೈನಂದಿನ ದುರಂತಗಳಿಗೆ ಒಳಗಾಗುವ ನೆಲೆಯನ್ನು ನಿರೂಪಿಸಿರುವುದು ಅತ್ಯಂತ ವಿಶಿಷ್ಟ ಸಂಗತಿಯಾಗಿದೆ. ಅಲ್ಲದೆ ದೇಹ ತೊಡಕು ಅಲ್ಲ, ಅನುಭಾವ ಪಯಣದ ಸೋಪಾನವೆಂಬ ಅರಿವೇ ಕನಕದರ್ಶನದ ತಿರುಳು.

*ಒಡಲಿನಾಯಾಸದಲಿ*
*ಲಜ್ಜೆಗಾಗಿ ತಲೆ ಬಗ್ಗಿ ಮಲಗಿದ್ದಿಯೋ*
*ರಮಣಿ ಭೂಮಿಯನು ತಂದಾಲಸ್ಯವೋ*
*ಕ್ಷಮೆಯ ನಳದೀ ಪಾದ ಕಮಲ ನೊಂದಾವೋ...*

– ಕಾಲು ನೀಡಿ ಎಡಗೈಯನ್ನು ಹೊತ್ತಿಗೆ ಮಾಡಿಕೊಂಡು ಪವಡಿಸಿರುವ ಶ್ರೀರಂಗನಾಥನನ್ನು ಕಂಡು ಗೇಲಿಮಾಡುವ ಧಾಟಿಯಲ್ಲಿರುವ ಮೇಲಿನ ಸಾಲುಗಳು ದೇವರು ಪರವಸ್ತುವೆಂಬ ನಂಬಿಕೆಯನ್ನು ಬುಡಮೇಲು ಮಾಡಿದಂತಿವೆ. "ಓ ಜೀವವೇ ಮೈಯಲ್ಲಿ ನವೆ ಗಾಯ ಗಾಯ ಕಟ್ಟುವರಿಲ್ಲ ಗಾಳಿ ಬೀಸುವರಿಲ್ಲ." ದೈವವೂ ಇಹದಲ್ಲಿ ಮನುಷ್ಯ ಆವರಣದೊಳಗೆ ಅಸ್ತಿತ್ವದಲ್ಲಿರುವ ನೋವು, ಅಪಮಾನ, ಹಸಿವು, ಆಯಾಸಗಳನ್ನು ಅನುಭವಿಸುವ, ಲಜ್ಜೆಗೊಳ್ಳುವ ವಿವರಣೆಗಳು ದೇವರು ಮತ್ತು ಭಕ್ತರ ನಡುವಿನ ಸಂಬಂಧವನ್ನು ಸಮಪಾತಳಿಯಲ್ಲಿ ಗ್ರಹಿಸಿರುವ ಕನಕರ ದೃಷ್ಟಿಕೋನವು ಕೀರ್ತನಾ ಪರಂಪರೆಯಲ್ಲಿಯೇ ಅನನ್ಯವಾಗಿ ಕಾಣುತ್ತದೆ. ಆದ್ದರಿಂದಲೇ ಕನಕದಾಸರಲ್ಲಿ ದಾಸ ಎನ್ನುವ ಪರಿಕಲ್ಪನೆಯು ಅಧೀನತೆಯಾಗಿ ಪರಿಗಣಿತವಾಗದೆ ಎಲ್ಲ ಬಗೆಯ ಹಂಗುಗಳನ್ನು ಧಿಕ್ಕರಿಸುವ, ಪ್ರಶ್ನಿಸುವ ಮನೋಧರ್ಮವಾಗಿ ಮಂಡಿತವಾಗಿರುವುದು ಅಭ್ಯಾಸ ಯೋಗ್ಯವಾದ ಸಂಗತಿಯಾಗಿದೆ.

**ಭಾಷೆಯೆಂಬ ಸಂಕ**

ಅನುಭಾವಿಗಳಿಗೆ ಲೋಕದ ಹಾಗೆ, ದೇಹದ ಹಾಗೆ ಭಾಷೆ ಕೂಡ ಬಹು ಮುಖ್ಯವಾದ ಸವಾಲು. ಭಾಷೆ ಕುರಿತಾದ ಆತಂಕ, ಅನಿವಾರ್ಯತೆ ಮತ್ತು

ಬೆಡಗು ಇವುಗಳನ್ನು ಕನ್ನಡದ ವಚನ ಪರಂಪರೆ ಚೂಲಮೂಲವಾಗಿ ಚರ್ಚಿಸಿದೆ. ದೇವರೊಡನೆ, ಲೋಕದೊಡನೆ, ತನ್ನೊಡನೆ ತಾನೇ ಸಂವಾದಿಸಲು ಅನುಭಾವಿಯಾದವನು ಹುಡುಕುವ ಭಾಷಿಕ ರೂಪಗಳ ಅಧ್ಯಯನವು ಕುತೂಹಲಕಾರಿಯಾದ ಸಂಗತಿಗಳನ್ನು ಹೊರಗೆಡವಬಲ್ಲದು. ಅನುಭಾವ ಅಥವಾ ಅಧ್ಯಾತ್ಮದ ನಡಿಗೆಗೆ ಇರುವ ಸಂಕಟಗಳಲ್ಲಿ ತಾನು ಹಾದುಬರುತ್ತಿರುವ ಕೊಂಡಗಳ ಅನುಭವವನ್ನು ಮಾತಿನಲ್ಲಿ, ಲೋಕದ ಜೊತೆ ಹಂಚಿಕೊಳ್ಳುವಲ್ಲಿ ತಲೆದೋರುವ ಸಮಸ್ಯೆಯಾಗಿದೆ. ಮಾತು ಅಥವಾ ಪದ ಎನ್ನುವುದು ಕೇವಲ ಶಬ್ದ ಮಾತ್ರ. ಅರ್ಥವೇನಿದ್ದರೂ ಲೋಕ ಕಟ್ಟಿಕೊಂಡ ತಿಳಿವು. ಆದ್ದರಿಂದಲೇ ಅದು ಮೈಲಿಗೆ ಎಂದು ಶ್ರಮಣ ಪರಂಪರೆಗಳು ನಂಬಿರುವುದು. ಪ್ರತಿಯೊಬ್ಬ ಸಂತ-ದಾಸ-ಫಕೀರರು ಈ ಮಾತಿನ ಮೈಲಿಗೆಯನ್ನು ಕಳೆಯಲು ಉಗ್ರಹಠದಿಂದ ಪ್ರಯತ್ನ ಪಟ್ಟಿರುವುದನ್ನು ಅವರ ಕೃತಿಗಳು ಮನಗಾಣಿಸುತ್ತವೆ. ಕನಕದಾಸರ ಭಾಷೆಯ ಪ್ರಯೋಗದಲ್ಲಿ ಇಂತಹ ಭಾಷಿಕ ಆಯಾಮಗಳಿರುವುದನ್ನು ಗುರುತಿಸಬಹುದು. ಕನಕರ ಈ ಬಗೆಯ ಕೀರ್ತನೆಗಳನ್ನು ಗುರುತಿಸಿ ಅರ್ಥೈಸಲು ಕೀರ್ತನೆಗಳನ್ನು ಹೊಸ ಹೊಸ ಬಗೆಗಳಲ್ಲಿ ಓದುವುದರಿಂದ ಸಾಧಿಸಿ ತೋರಿಸಬಹುದು. ಉದಾಹರಣೆಗಾಗಿ, ಕನಕರ ಬಹು ಪ್ರಸಿದ್ಧವೂ ಜನಪ್ರಿಯವೂ ಆಗಿರುವ 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ' ಎನ್ನುವ ನಿರೂಪಣೆಯನ್ನು ಅಭ್ಯಾಸಮಾಡಬಹುದು. ಈ ಪದ್ಯ ಪಲ್ಲವಿಯನ್ನು ಗಮನಿಸಿ ಮೊದಲ ಸಾಲಿನ ಕೊನೆಯ ಪದ 'ಹರಿಯೇ' ಎನ್ನುವುದು, ಎರಡನೆಯ ಸಾಲಿನ ಕೊನೆಯ ಪದ 'ನರಹರಿಯೇ' ಎನ್ನುವುದು. ಈ ಎರಡು ಪದಗಳನ್ನು ಕನಕದಾಸ ಇಷ್ಟದೈವವಾದ ಕೇಶವನ ಹೆಸರು (ಹರಿ, ನರಹರಿ = ಕೇಶವನ ಹಲವು ಹೆಸರುಗಳು – ಇವು ನಾಮಪದ) ಎಂದು ಈವರೆಗೆ ಅಭ್ಯಾಸಮಾಡಲಾಗಿದೆ, ಅರ್ಥ ನೀಡಲಾಗಿದೆ. ಆದರೆ ಈ ಪದಗಳಿಗೆ ಕನ್ನಡ ಭಾಷೆಯ ಪ್ರಯೋಗಗಳಲ್ಲಿ ಕ್ರಿಯಾಪದದ (ನರ ಹರಿಯೇ = ಗಂಟಲು ಹರಿದುಹೋಗುವ ಹಾಗೆ ಕೂಗಿದರೂ) ನೆಲೆಯೂ ಉಂಟು. ಈ ಅರ್ಥದ ಹಿನ್ನೆಲೆಯಿಂದ ಗ್ರಹಿಸುವುದಾದರೆ ಕೀರ್ತನೆಯಲ್ಲಿ ಪ್ರಸ್ತಾಪವಾಗುತ್ತಿರುವ ದೈವ ಮತ್ತು ಭಕ್ತನ ಸಂಬಂಧದಲ್ಲಿನ ಅಧಿಕಾರ ಸಂಬಂಧಗಳು ಉಲ್ಟಾಪಲ್ಟಾ ಆಗುತ್ತವೆ ಎನ್ನುವುದು ಥಟ್ಟನೆ ಹೊಳೆಯುತ್ತದೆ. ಗಂಟಲು ಹರಿದುಹೋಗುವಷ್ಟು ಗಟ್ಟಿಯಾಗಿ ಕಿರುಚಿ ದೈವವನ್ನು ನಿರ್ದೇಶಿಸು ತ್ತಿರುವ ಅಂಶ ತಿಳಿಯುತ್ತದೆ. ಕೊಡು ಎನ್ನುವುದು ವಿನಂತಿಯ ಮಾತಾದರೆ, ಕೊಡೊ ಎನ್ನುವುದು ಅಧಿಕಾರದ ಮಾತಾಗುತ್ತದೆ. ಈ ಕೀರ್ತನೆ ಭಕ್ತ ಮತ್ತು ದೇವರ ನಡುವಿನ ಸಂಬಂಧದ ಪ್ರಶ್ನೆಯನ್ನು ನಿರೂಪಿಸುವುದಿಲ್ಲ. ಅದು ಬಾಗಿಲಾಚೆ ಹತ್ತಿರ ಇದ್ದರೂ, ಗಂಟಲು ಹರಿಯುವ ಹಾಗೆ ಶಬ್ದಮಾಡಿ ಮಾತನಾಡಿಸಿದರೂ ದೈವಕ್ಕೆ ಮೊರೆ ಕೇಳಿಸದಿರುವ ಸ್ಥಿತಿಯನ್ನು ಮನಗಾಣಿಸಲು ಪ್ರಯತ್ನಿಸಿರುವಂತೆ ಕಾಣುತ್ತದೆ. ಏಕೆಂದರೆ ನಂತರದ ಚರಣಗಳಲ್ಲಿ ಪ್ರಸ್ತಾಪವಾಗುತ್ತಿರುವ ಕರಿರಾಜ, ಪ್ರಹ್ಲಾದ ಮತ್ತು ದ್ರೌಪದಿಯ ಪ್ರಸಂಗಗಳಲ್ಲಿ ದೇವರಿಗೆ ಭಕ್ತರ ಮಾತು ಕೇಳಿಸಿದ್ದರಿಂದ ಇಷ್ಟದೈವವು ಅವರ ಕಷ್ಟಕ್ಕೆ ಒದಗಿಬಂದ ಸಂಗತಿಗಳು ನಿರೂಪಗೊಂಡಿರುವುದನ್ನು ಅರಿತರೆ ನನ್ನ ಮಾತು ಸ್ಪಷ್ಟವಾಗುವುದು. ಈ ಪ್ರಕರಣಗಳಲ್ಲಿ ಭಕ್ತರು ದೈವವನ್ನು ಉದ್ದೇಶಿಸಿ ಆಡಿದ ಮಾತು ದೂರದ ಪರಮಪದದಲ್ಲಿರುವ ಅವನಿಗೆ ಕೇಳಿಸಿದ್ದು ಹೇಗೆ ? ಬಾಗಿಲಾಚೆಯಿಂದ ನರಹರಿಯೇ ಕೂಗಿಕೊಂಡರೂ ಮಾತು ಕೇಳದೆ ಹೋದದ್ದು ಹೇಗೆ ? ಎನ್ನುವ ಪ್ರಶ್ನೆಯೇ ಈ ಭಾಷಿಕ ನಿರೂಪಣೆಯನ್ನು ಹೊಸ ಹೊಳಪಿಗೆ ಒಡ್ಡುತ್ತದೆ. ಕನಕದಾಸರ ಕೀರ್ತನೆಗಳನ್ನು ಈಗಾಗಲೇ ಚರಿತ್ರೆ ಆಧಾರಿತ ಮತ್ತು ಧಾರ್ಮಿಕ ಪರಿವೇಶಗಳ ಅರ್ಥಗಳಿಗೆ ಒಗ್ಗಿಸಿ ವಿವರಿಸಿರುವ ಕ್ರಮಗಳನ್ನು ಬದಿಗಿರಿಸಿ ನಿಜ ಅನುಭಾವಿಕ ಆಯಾಮಗಳ ಮೂಲಕ ಎದಿರುಗೊಳ್ಳಬೇಕಾದ ಅವಶ್ಯಕತೆಯು ಇಂದಿನ ನಮ್ಮ ಸಾಂಸ್ಕೃತಿಕ ತುರ್ತು ಹಾಗೂ ಜವಾಬ್ದಾರಿಯೂ ಆಗಿದೆ. ಆಗ ಮಾತ್ರ ಹೊಸ ಅರಿವಿನ ಲೋಕಗಳು ಅಕ್ಷರಗಳ ಮರೆಯಿಂದ ಬಯಲಿಗೆ ಬರುತ್ತವೆ. ಆ ದಿಕ್ಕಿನತ್ತ ನಡೆಯಲು ಈ ಲೇಖನ ಪ್ರೇರಣೆ ನೀಡಬೇಕು ಎನ್ನುವುದು ನನ್ನ ಆಶಯ.

**ಕೆ. ವೈ. ನಾರಾಯಣಸ್ವಾಮಿ**
ನಂ. ೪೭, ಎನ್. ಆರ್. ಬಡಾವಣೆ, ೯ನೇ ಮುಖ್ಯರಸ್ತೆ
ಬೊಮ್ಮನಹಳ್ಳಿ (ವಿರಾಟ್‌ನಗರ), ಬೆಂಗಳೂರು – ೫೬೦ ೦೬೮

ಕಾವ್ಯಲೋಕ

# ಅದು ನಿಮ್ಮದೇ ತಪ್ಪು

ಆಗಲಿ, ನೀವು ಅವುಗಳೊಂದಿಗೆ ಆಟ ಆಡಬಹುದು
ಅಲ್ಲಿ ಅವುಗಳಿಗೆ ಅಪಾಯವಿಲ್ಲ.
ಅವು ಕೇವಲ ಶಬ್ದಗಳಾಗಿವೆ.
ಶಬ್ದಗಳು ಮಾತ್ರ ನಿಜವಾಗಲೂ ಒಳ್ಳೆಯವು, ಯಾರೋ ಹೇಳಿದ್ದರು.
ಮತ್ತೆ ಕೂಡ ಯಾರೋ ಹೇಳಿದ್ದರು;
ಬಡಿಗೆಗಳ ಮತ್ತು ಕಲ್ಲುಗಳ ಹಾಗೆ ಈ
ಶಬ್ದಗಳು ನಿಮ್ಮ ಮೂಳೆಗಳನು ಮುರಿಯುವುದಿಲ್ಲ.

(ಅದೊಂದು ಪ್ರಾಸವೆಂದು ಕರೆದಿದೆ. ಕಾಲ-ಕಾಲಕೆ
ಆಟವಾಡಲು ಪ್ರಾಸವು ಕೂಡ ಚನ್ನಾಗಿರುವುದು).

ಏನು ? ಅವು ಕೊಳೆಯಾಗಿವೆಯೆ ?
ಅವು ನಿಮ್ಮನು ಪರಚಿವೆಯೇ ಮತ್ತೆ ಕಚ್ಚಿವೆಯೆ ?
ನನ್ನನು ನಂಬಿ, ಈ ಪ್ರದೇಶದ ತುಂಬ ರಕ್ತ ಚಲ್ಲಿದೆ.
ಹಾಗೆಯೇ ಮೂಳೆಗಳೂ ಮುರಿದಿವೆ.

ನಾ ಅವುಗಳನ್ನು ಬಿಟ್ಟಾಗ ಅವು ಸಂಪೂರ್ಣವಾಗಿ ಪಳಗಿದ್ದವು.

ಅದೇನೊ ಅವು ತಂದಿರುವ ಪದಾರ್ಥವು ಅವುಗಳೊಂದಿಗೆ ಹೋದದಂತಿರಬೇಕು. ನೀವು ಅರಿತಂತೆ ಹೊಸ ಅರ್ಥವನೂ ನೀವು ತಿನ್ನಿಸಿರಬೇಕು ? ಹಾಗಿದ್ದರೆ ಆಶ್ಚರ್ಯವಿಲ್ಲ.

('ಇಟ್ ಈಸ್ ಯುವರ್ ಓನ್ ಫಾಲ್ಟ್')

ಮೂಲ : **ಡಿ. ಜೆ. ಏನ್‌ರೈಟ್**
ಕನ್ನಡಕ್ಕೆ : **ಶಂಕರಗೌಡ ಸಾತ್ಮಾರ**
'ಹೊಂಗಿರಣ', ನಂ. ೫೨, ಡಾ॥ ರಾಧಾಕೃಷ್ಣನ್ ನಗರ
ಗೋಕುಲ ರಸ್ತೆ, ಹುಬ್ಬಳ್ಳಿ – ೫೮೦ ೦೩೦



# ಮಾಧ್ಯಮ ಯಾವುದಾದರೇನು?

ಈ ದೇಶದಲ್ಲಿ ಶಾಲಾ ಮಕ್ಕಳ ಕಲಿಕೆಯಷ್ಟು ವಿವಾದಗಳಿಗೆ ಗ್ರಾಸವಾದ ವಿಚಾರ ಪ್ರಾಯಃ ಇನ್ನೊಂದಿರಲಾರದು. ಮಕ್ಕಳು ಎಷ್ಟು ವಿಷಯಗಳನ್ನು ಕಲಿಯಬೇಕು ? ಯಾವ ಭಾಷೆಗಳನ್ನು ಕಲಿಯಬೇಕು ? ಈ ಭಾಷೆಗಳನ್ನು ಎಷ್ಟು ವರ್ಷಗಳ ಕಾಲ ಹೇಗೆ ಕಲಿಯಬೇಕು ? ಮಕ್ಕಳ ಕಲಿಕೆಯ ಮೌಲ್ಯಮಾಪನ ಹೇಗಿರಬೇಕು ? ಯಾವ ಭಾಷೆಯ ಮೂಲಕ ಮಕ್ಕಳು ಕಲಿಯಬೇಕು ? ಮುಂತಾದ ಹತ್ತಾರು ಪ್ರಶ್ನೆಗಳು ಕಳೆದ ಹಲವು ದಶಕಗಳಿಂದ ನಮ್ಮನ್ನು ಕಾಡುತ್ತಲೇ ಇವೆ. ಈ ಪ್ರಶ್ನೆಗಳಿಗೆ ಸರ್ವಸಮ್ಮತವಾದ, ವೈಜ್ಞಾನಿಕವಾದ ಪರಿಹಾರವನ್ನು ನಾವಿನ್ನೂ ಕಂಡುಕೊಂಡಿಲ್ಲ. ಬಹಳ ಮುಖ್ಯವಾಗಿ, ಶಾಲಾ ಹಂತದಲ್ಲಿ ಭಾಷಾ ಮಾಧ್ಯಮ ಅಥವಾ ಕಲಿಕೆಯ ಮಾಧ್ಯಮ ಇಂದು ಕಗ್ಗಂಟಾಗಿದೆ. ಬಗೆಬಗೆಯ ಒಲವುಳ್ಳ ಜನ ತಮ್ಮ ಬಲಪ್ರಯೋಗ ಮಾಡಿ ಗಂಟು ಬಿಡಿಸುವುದೇ ದುಸ್ತರವಾಗಿದೆ. ಕೆಲವು ಸಂದರ್ಭಗಳಲ್ಲಿ ಭಾಷಾ ವಿಜ್ಞಾನಿಗಳಲ್ಲಿ ಕೆಲವರು ಉದಾರ ಭಾವದಿಂದ 'ಮಾಧ್ಯಮ ಯಾವುದಾದರೇನು ? ಕಲಿಕೆ ನೆರವೇರುವುದು ಮುಖ್ಯ' ಎಂಬ ತೀರ್ಪು ಕೊಟ್ಟುಬಿಡುತ್ತಾರೆ. ಈ ತೀರ್ಪುಗಳೇ ನಮ್ಮ ಪಾಲಿಗೆ ಇಂದು ಆತಂಕಕಾರಿಯಾಗಿವೆ.

ಕಲಿಕೆ ನೆರವೇರುವುದು ಮುಖ್ಯ; ಎಲ್ಲ ಶಿಕ್ಷಕರೂ ಬೋಧನೆ ಮಾಡಬೇಕು; ಎಲ್ಲ ವಿದ್ಯಾರ್ಥಿಗಳೂ ಕಲಿಯಬೇಕು, ಎಂಬ ಅಭಿಪ್ರಾಯ ನಿಸ್ಸಂದಿಗ್ಧವಾಗಿದೆ. ಆದರೆ ಮಾಧ್ಯಮ ಯಾವುದಾದರೇನು ? ಎಂಬ ಹಾರಿಕೆಯ ಮಾತು ಅಪಾಯಕಾರಿ. ಏಕೆಂದರೆ ಕಲಿಕೆಗೆ ಯಾವ ಭಾಷಾ ಮಾಧ್ಯಮವಾದರೇನು ? ಎಂದಾಗ ಅದು ಪ್ರಾದೇಶಿಕ ಭಾಷಾ ಮಾಧ್ಯಮಗಳ ಹಾದಿಯನ್ನು ದುರ್ಗಮಗೊಳಿಸುತ್ತದೆ. ಸದ್ಯದ ಸಂದರ್ಭದಲ್ಲಿ ಭಾಷಾ ಮಾಧ್ಯಮವೆಂದರೆ ಆಂಗ್ಲ ಮಾಧ್ಯಮ ಮಾತ್ರ. ಅದೊಂದೇ ಮುಕ್ತಿ ಮಾರ್ಗ ಎಂಬ ತೀರ್ಮಾನಕ್ಕೆ ಜನ ಬಂದುಬಿಡುತ್ತಾರೆ. ಪ್ರಾದೇಶಿಕ ಭಾಷಾ ಮಾಧ್ಯಮ, ರಾಜ್ಯದ ಆಡಳಿತ ಭಾಷಾ ಮಾಧ್ಯಮ ಯಾಕೆ ಕೂಡದು ?

ಶಾಲಾ ಹಂತದಲ್ಲಿ ಕಲಿಕೆಯ ಮಾಧ್ಯಮವನ್ನು ನಿರ್ಧರಿಸುವವರು ಯಾರು ? ಮಗುವಿಗೆ ಯಾವ ಭಾಷಾ ಮಾಧ್ಯಮದಲ್ಲಿ ಕಲಿಯಬೇಕೆಂದು ತೋರುತ್ತದೋ ಆ ಮಾಧ್ಯಮದಲ್ಲಿ ಕಲಿಯಲಿ, ಮಗುವಿಗೆ ತನ್ನ ಕಲಿಕೆಯ ಮಾಧ್ಯಮವನ್ನು ಆಯ್ಕೆಮಾಡುವ ಹಕ್ಕು ಇದೆ ಎಂದು ವಾದಿಸಲಾಗುತ್ತದೆ. ಆದರೆ ನಿಜವಾಗಿಯೂ ಯಾವ ಮಗುವೂ ಈ ದೇಶದಲ್ಲಿ ತನ್ನ ಕಲಿಕೆಯ ಮಾಧ್ಯಮವನ್ನು ಆಯ್ಕೆಮಾಡಿಕೊಳ್ಳುವಂತಹ ವ್ಯವಸ್ಥೆಯೇ ಇಲ್ಲ. ಮಗು ವಯಸ್ಕನಾಗುವ ತನಕ ಪರಾವಲಂಬಿ. ಹೀಗಾಗಿ ಮಗುವಿನ ಹೆಸರಿನಲ್ಲಿ ಕಲಿಕೆಯ ಮಾಧ್ಯಮವನ್ನು ಹೆತ್ತವರು ನಿರ್ಧರಿಸುತ್ತಾರೆ. ಸದ್ಯದ ಸಂದರ್ಭದಲ್ಲಿ ಮಗು ನಿಜಕ್ಕೂ ಯಾವ ಮಾಧ್ಯಮದಲ್ಲಿ ಕಲಿತರೆ ಅದರ ಬೌದ್ಧಿಕ, ಭಾಷಿಕ, ಸಾಮಾಜಿಕ, ನೈತಿಕ ವಿಕಾಸ ಚೆನ್ನಾಗಿ ಆಗುತ್ತದೆ ಎಂಬುದರ ಗೊಡವೆಗೆ ಹೋಗದೆ ಬಹುಮಂದಿ ಹೆತ್ತವರು ಶ್ರೇಣೀಕರಣ ವ್ಯವಸ್ಥೆಯಲ್ಲಿ ಏಣಿಯ ಮೇಲೇರಬೇಕೆಂಬ ಏಕೈಕ ಉದ್ದೇಶದಿಂದ ಆಂಗ್ಲ ಮಾಧ್ಯಮವನ್ನು ಆಯ್ದು ಮಗುವಿನ ಮೇಲೆ ಹೇರುತ್ತಾರೆ. ಹೆತ್ತವರು ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಆಯ್ಕೆಮಾಡಿಕೊಂಡಾಗಲೂ ಅದು ಮಗುವಿಗೆ ಹಿತಕರವೆನಿಸದಿದ್ದರೆ ಅದೂ ಹೇರಿಕೆಯೇ; ಬಲವಂತದ ಮಾಘಸ್ನಾನವೇ.

ಉನ್ನತ ಶಿಕ್ಷಣದ ಹಂತದವರೆಗೆ ಅಥವಾ ಕನಿಷ್ಠ ಪ್ರಾಥಮಿಕ ಶಿಕ್ಷಣದವರೆಗೆ ಕಲಿಕೆಯ ಮಾಧ್ಯಮವು ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿರಬೇಕು ಎಂದು ಜಗತ್ತಿನಾದ್ಯಂತ ವಿವಿಧ ತಜ್ಞರು ನಿಡುಗಾಲದಿಂದಲೂ ಶಿಫಾರಸು ಮಾಡುತ್ತಲೇ ಬಂದಿದ್ದಾರೆ. ಭಾರತ ಸರಕಾರದ ಮತ್ತು ವಿವಿಧ ರಾಜ್ಯ ಸರಕಾರಗಳ ಶಿಕ್ಷಣ ಆಯೋಗದ ವರದಿಗಳು ಮಾತೃಭಾಷೆ ಅಥವಾ ರಾಜ್ಯ ಭಾಷಾ ಶಿಕ್ಷಣ ಮಾಧ್ಯಮಗಳ ಹಿರಿಮೆ ಗರಿಮೆಗಳನ್ನು ಕೊಂಡಾಡಿವೆ. ದುರ್ದೈವದ ಸಂಗತಿ ಎಂದರೆ ಶಿಕ್ಷಣ ತಜ್ಞರ ಅಭಿಪ್ರಾಯಗಳು ಹಾಗೂ ಶಿಕ್ಷಣ ಆಯೋಗದ ವರದಿಗಳು ಇಂದು ಮೂಲೆಪಾಲಾಗುತ್ತಿವೆ. ಈ ಅಭಿಪ್ರಾಯಗಳೆಲ್ಲ ಸರಿ; ಆದರೆ ಈ ಚಿಂತನೆಗಳು ಸದ್ಯದ ವಾಸ್ತವಕ್ಕೆ ಹೊಂದಿಕೊಳ್ಳುವುದಿಲ್ಲ ಎಂದು ಅವನ್ನು ಕಸದ ಬುಟ್ಟಿಗೆ ಬಿಸಾಡುವ ಪ್ರವೃತ್ತಿ ಎದ್ದು ಕಾಣುತ್ತಿದೆ. "ಪ್ರಾದೇಶಿಕ ಭಾಷೆಗಳೂ 'ಅನ್ನದ ಭಾಷೆ'ಗಳಲ್ಲ; ಅವು 'ಭಾವದ ಭಾಷೆ'ಗಳು; ಜಗತ್ತಿನಲ್ಲಿ ಸದ್ಯ ಇಂಗ್ಲಿಷ್ ಒಂದೇ 'ಬುದ್ಧಿ'ಯ, 'ಅನ್ನದ ಭಾಷೆ'; ಹೀಗಾಗಿ ನಮ್ಮ ಮಕ್ಕಳು ಆ ಭಾಷಾ ಮಾಧ್ಯಮದಲ್ಲೇ ಓದುವುದು ಶ್ರೇಯಸ್ಕರ; ಸಿರಿವಂತರ ಮಕ್ಕಳಿಗೆ ಆಂಗ್ಲ ಮಾಧ್ಯಮ ಹಾಗೂ ಬಡವರ ಮಕ್ಕಳಿಗೆ ಪ್ರಾದೇಶಿಕ ಮಾಧ್ಯಮವನ್ನು ಶಿಫಾರಸು ಮಾಡುವುದು ಜನದ್ರೋಹಿ ಚಿಂತನೆ" ಎಂಬಂಥ ಅಭಿಪ್ರಾಯಗಳೂ ವ್ಯಕ್ತವಾಗುತ್ತಿವೆ.

ಈ ನಡುವೆ ನಮ್ಮೆಲ್ಲ ವಾದ–ವಿವಾದಗಳನ್ನು, ಚರ್ಚಾರ್ಹ ವಿಷಯಗಳನ್ನು ಪರಿಹರಿಸುವ ಸಾಮರ್ಥ್ಯ ನ್ಯಾಯಾಲಯಗಳಿಗೆ ಇದೆ ಎಂಬ ನಂಬಿಕೆಯ ಕಾರಣದಿಂದಾಗಿ ಭಾಷಾ ಮಾಧ್ಯಮದ ಸಮಸ್ಯೆಯನ್ನು ಕಟಕಟೆಯಲ್ಲಿ ನಿಲ್ಲಿಸುವ ಪ್ರಯತ್ನಗಳಾಗಿವೆ. ನ್ಯಾಯಾಧೀಶರುಗಳು ಅದೆಷ್ಟೇ ಕಾನೂನು ಪಂಡಿತರಾಗಿದ್ದರೂ, ನಿಷ್ಪಕ್ಷಪಾತಿಗಳಾಗಿದ್ದರೂ ನಮ್ಮಂತೆಯೇ ಮನುಷ್ಯರು ಎಂಬುದನ್ನು ಮರೆತು ಅವರು ನೀಡುವ ತೀರ್ಪುಗಳನ್ನು ಅತ್ಯುತ್ಸಾಹದಿಂದ ಸ್ವಾಗತಿಸುವ ಅಥವಾ ತೀವ್ರ ಹತಾಶೆಯಲ್ಲಿ ವಿರೋಧಿಸುವ ಪ್ರವೃತ್ತಿಯೂ ಇಂದು ನಮ್ಮೆದುರಿಗಿದೆ.

ಕಲಿಕೆಯ ಮಾಧ್ಯಮದ ಪ್ರಶ್ನೆ ಮಕ್ಕಳ ನ್ಯಾಯಾಲಯದಲ್ಲೋ, ಜನತಾ ನ್ಯಾಯಾಲಯದಲ್ಲೋ ಅಥವಾ ಸಾಂವಿಧಾನಿಕ ನ್ಯಾಯಾಲಯಗಳಲ್ಲೋ ತೀರ್ಮಾನವಾಗಬೇಕಾದ ಸಂಗತಿಯಲ್ಲ. ನಮ್ಮದು ಒಕ್ಕೂಟ ರಾಜ್ಯ ವ್ಯವಸ್ಥೆ. ಆಯಾ ರಾಜ್ಯಗಳು ತಂತಮ್ಮ ಸಂಸ್ಕೃತಿ ಹಾಗೂ ಭಾಷೆಗಳ ಅಭಿವೃದ್ಧಿಯನ್ನು ಸಾಧಿಸಬೇಕೆಂಬ ದೃಷ್ಟಿಯಿಂದ ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ವಿಂಗಡನೆಯಾಯಿತು. ಹೀಗಾಗಿ ಪ್ರತಿಯೊಂದು ರಾಜ್ಯ ಸರಕಾರವೂ ತನ್ನ ನಾಡುನುಡಿಯನ್ನು ಬೆಳೆಸಬೇಕಾದ ಶಾಸನಾತ್ಮಕ ಅಧಿಕಾರ ಹಾಗೂ ಜವಾಬ್ದಾರಿಯನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಒಂದು ರಾಜ್ಯದಲ್ಲಿ ಶಿಕ್ಷಣದ ಒಂದು ಹಂತದವರೆಗಾದರೂ ಬೋಧನೆ ಹಾಗೂ ಕಲಿಕೆಯ ಮಾಧ್ಯಮ ಯಾವುದಿರಬೇಕು ಎಂದು ನಿರ್ಧರಿಸುವ ಹಕ್ಕು ಪ್ರಭುತ್ವಕ್ಕೆ ಇದೆಯೇ ಹೊರತು ಶಾಲಾ ಮಕ್ಕಳಿಗೆ ಅಥವಾ ಅವರ ಪಾಲಕರಿಗೆ ಇಲ್ಲ. ಮೂಲಭೂತ ಹಕ್ಕುಗಳ ನೆಪದಲ್ಲಿ ಕಲಿಕೆಯ ಮಾಧ್ಯಮವನ್ನು ಸರಕಾರಗಳು ಮಕ್ಕಳ ಮೇಲೆ ಹೇರುವಂತಿಲ್ಲ ಎಂಬ ವಾದ ಸಮರ್ಥನೀಯವಲ್ಲ. ಯಾವುದೇ ಒಂದು ನಾಡಿನ ಜನಭಾಷೆ ಉಳಿಯುವುದು ಬೆಳೆಯುವುದು ಆ ಭಾಷೆಯ ಮೂಲಕ ಶೈಕ್ಷಣಿಕ ವ್ಯವಹಾರಗಳು ನಡೆದಾಗ ಮಾತ್ರ. ಎಲ್ಲರಿಗೂ ಶಿಕ್ಷಣವನ್ನು ಉಚಿತವಾಗಿ ಮತ್ತು ಕಡ್ಡಾಯವಾಗಿ ಒದಗಿಸುವ ಹಕ್ಕು ಮತ್ತು ಜವಾಬ್ದಾರಿ ರಾಜ್ಯ ಸರಕಾರಗಳ ಮೇಲಿದೆ ಎಂದರೆ ಅಂಥ ಶಿಕ್ಷಣವನ್ನು ನಾಡುನುಡಿಯ ಹಿತದೃಷ್ಟಿಯಿಂದ ಯಾವ ಭಾಷಾಮಾಧ್ಯಮದ ಮೂಲಕ ಒದಗಿಸಬೇಕು ಎಂದು ನಿರ್ಧರಿಸುವ ಹಕ್ಕು ಕೂಡ ಇದರಲ್ಲಿ ಅಂತರ್ನಿಹಿತ ವಾಗಿದೆ ಎಂದೇ ಅರ್ಥ. ಹೀಗಾಗಿ ಶಿಕ್ಷಣ ಮಾಧ್ಯಮದಂಥ ವಿಷಯವನ್ನು ನ್ಯಾಯಾಲಯಗಳ ಪರಿಧಿಯಿಂದ ಹೊರಗಿಟ್ಟು ಶಾಸನ ರಚಿಸುವವರ ಹಾಗೂ ಪ್ರಾಜ್ಞರಾದ ಶಿಕ್ಷಣ ನೀತಿ ನಿರೂಪಕರ ಮಡಿಲಿಗೆ ಹಾಕುವುದು ವಿವೇಕದ ನಿರ್ಧಾರ.

**ಡಾ॥ ಮಹಾಬಲೇಶ್ವರ ರಾವ್**

ಪ್ರಾಚಾರ್ಯರು, ಡಾ॥ ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ – ೫೭೬ ೧೦೨



# ಬುಧ – ಗುರು – ಶುಕ್ರ ಮತ್ತು ಶನಿಯೂ ಸಂಜೆಯ ಆಕಾಶದಲ್ಲಿ

**ಮೇ** ಎಂದರೆ ಆಕಾಶ ಅಷ್ಟೇನೂ ಶುಭ್ರವಾಗಿಲ್ಲ ಎಂದೇ ಭಾವಿಸಬಹುದು. ಹಗಲೆಲ್ಲಾ ಚೆನ್ನಾಗಿ ಬಿಸಿಲು ಕಾದು ಸಂಜೆಗೆ ಮೋಡ ಕವುಚಿಕೊಳ್ಳುತ್ತದೆ. ಹಾಗಾದರೂ ಮಧ್ಯೆ ಮಧ್ಯೆ ಶುಭ್ರ ಆಕಾಶ ದೊರಕುವ ಸಾಧ್ಯತೆಯೂ ಇದೆ. ಆದ್ದರಿಂದ ಪ್ರಕಾಶಮಾನವಾಗಿ ಕಾಣುವ ಗ್ರಹ, ನಕ್ಷತ್ರಗಳನ್ನು ಮಾತ್ರ ನೋಡುವುದು ಸಾಧ್ಯವಾಗಬಹುದು. ಸಂಜೆ ತೆಳ್ಳನೆಯ ಮೋಡ ಇದ್ದರೂ ಪ್ರಕಾಶಮಾನವಾದ ಶುಕ್ರವನ್ನು ಪಶ್ಚಿಮದಲ್ಲಿ ನೋಡಬಹುದು. ಮಿಥುನ ರಾಶಿಯ ಪುನರ್ವಸು ಎಂಬ ಎರಡು ನಕ್ಷತ್ರಗಳ ಸಮೀಪ ಹಾದು ಹೋಗುವುದು. ಮೋಡ ಇಲ್ಲದಿದ್ದಾಗ ಅದರ ಮೇಲೊಂದು ಪ್ರಕಾಶಮಾನ ಗ್ರಹ ಕಾಣುವುದು ಅದೇ ಗುರು. ಬರಿಗಣ್ಣಿಂದ ಸುಲಭವಾಗಿ ಗುರುತಿಸಬಹುದು. ತಿಂಗಳ ಮೊದಲ ವಾರದಲ್ಲಿ ಶುಕ್ರದ ಅರ್ಧದಷ್ಟು ಎತ್ತರದಲ್ಲಿ ಇನ್ನೊಂದು ಗ್ರಹ ಬುಧವೂ ಕಾಣುತ್ತದೆ. 12ರಂದು ಬುಧ ಮತ್ತು ರೋಹಿಣಿ ಒಟ್ಟಾಗಿ ಇರುತ್ತವೆ. ಆದರೆ, ಸಂಜೆಗೆಂಪಿನಲ್ಲಿ ಎರಡೂ ಕರಗಿಹೋಗಬಹುದು. ಪಶ್ಚಿಮದಲ್ಲಿ ಹೀಗೆ ಗುರು, ಶುಕ್ರ ಮತ್ತು ಬುಧ ಸಾಲಾಗಿ ಕಾಣುವುವು. 12ರಂದು ಗರಿಷ್ಠ ಎತ್ತರ ಮುಟ್ಟುವ ಬುಧ ಕ್ರಮೇಣ ಕೆಳಗಿಳಿದು ಎರಡನೆಯ ವಾರಕ್ಕೆ ಕಾಣದಂತೆ ಆಗುತ್ತದೆ. ಮೇಲೇರಿ ಕೆಳಗಿಳಿಯುವ ಬುಧ 27ರಂದು ಪುನಃ ರೋಹಿಣಿಗೆ ಸಮೀಪ ಆಗುತ್ತದೆ. ಆದರೆ, ಸೂರ್ಯನಿಗೆ ತೀರಾ ಸಮೀಪವಾಗಿರುವುದರಿಂದ ಬಾಹ್ಯಾಕಾಶ ನೌಕೆ ಸೋಹೋ ಅದನ್ನು ತೋರಿಸಬಲ್ಲುದು. ಇಂಟರ್‌ನೆಟ್‌ನಲ್ಲಿ ಸೋಹೋ ಚಿತ್ರಗಳಲ್ಲಿ ಕಂಡು ತೃಪ್ತಿಪಟ್ಟುಕೊಳ್ಳಬಹುದು.




ಇದಲ್ಲದೆ ಶುಭ್ರ ಆಕಾಶವಿದ್ದಾಗ ಪ್ರಕಾಶಮಾನ ನಕ್ಷತ್ರಗಳಾದ ಲುಬ್ಧಕ (ಸಿರಿಯಸ್), ಅಗಸ್ತ್ಯ (ಕೆನೊಪಸ್) ಮತ್ತು ಬ್ರಹ್ಮಹೃದಯ (ಕಪೆಲ್ಲ) ಇವುಗಳನ್ನು ಗುರುತಿಸಬಹುದು. ಇವೆಲ್ಲಾ ಪಶ್ಚಿಮಕ್ಕೆ ಸರಿದಿರುತ್ತವೆ. ನೆತ್ತಿಯ ಮೇಲೆ ಸಿಂಹರಾಶಿ, ಉತ್ತರದಲ್ಲಿ ಸಪ್ತರ್ಷಿಮಂಡಲ, ದಕ್ಷಿಣದಲ್ಲಿ ತ್ರಿಶಂಕು (ದಕ್ಷಿಣ ಶಿಲುಬೆ) ಇವು ಪ್ರಮುಖವಾಗಿ ಗೋಚರಿಸುವುವು. ಪೂರ್ವದಲ್ಲಿ ಚಿತ್ರಾ ಮತ್ತು ಸ್ವಾತಿಯ ಹೊರತಾಗಿ ಖಾಲಿ ಎನ್ನಿಸಬಹುದು. ಮೋಡ ಇಲ್ಲದಿದ್ದಾಗ ಹಸ್ತಾ ಪುಂಜವನ್ನು ಗುರುತಿಸಬಹುದು. ಕಳೆದ ತಿಂಗಳ ಹುಣ್ಣಿಮೆಯ ಚಂದ್ರ ಚಿತ್ರಾ ಪಕ್ಕದಲ್ಲಿತ್ತು. ಈ ತಿಂಗಳ ಹುಣ್ಣಿಮೆಯ ಮರುದಿನ ಚಂದ್ರನ ಪಕ್ಕದಲ್ಲಿಯೇ ಗೋಚರಿಸುವ ಚುಕ್ಕೆಯೇ ಶನಿಗ್ರಹ. ವೈಶಾಖ ಮಾಸವಾದ್ದರಿಂದ ವಿಶಾಖ ನಕ್ಷತ್ರವೂ ಚಂದ್ರನ ಪಕ್ಕವೇ ಇರುತ್ತದೆ. ಆದರೆ ಅದು ಕ್ಷೀಣ ನಕ್ಷತ್ರ; ಚಂದ್ರನ ಬೆಳಕಿನಲ್ಲಿ ಕಾಣುವುದೋ ಇಲ್ಲವೋ ಹೇಳಲಾಗದು. ಇದರಿಂದ ಸ್ವಲ್ಪ ಕೆಳಗೆ ಕಾಣುವ ಪ್ರಖರ ನಕ್ಷತ್ರ ಜ್ಯೇಷ್ಠಾ. ತಿಂಗಳ ಕೊನೆಗೆ ಶನಿಗ್ರಹ ಸಂಜೆಗೇ ಕಾಣುವುದು. ಏಕೆಂದರೆ, 23ರಂದು ವಿಯುತಿ, ಅಂದರೆ ಸೂರ್ಯನಿಗೆ ಸರಿಯಾಗಿ ಎದುರಾಗಿ 180 ಡಿಗ್ರಿ ಕೋನದಲ್ಲಿರುತ್ತದೆ. ಸೂರ್ಯ ಕಂತುವಾಗ ಇದು ಉದಯಿಸುತ್ತದೆ. ಒಟ್ಟಿನಲ್ಲಿ ಸಂಜೆಗೆ ಮೂರು ಗ್ರಹಗಳು; ತಿಂಗಳ ಮೊದಲಿಗೆ ಬುಧ; ಕೊನೆಗೆ ಶನಿ.

ಮಂಗಳಗ್ರಹ ಸೂರ್ಯನಿಗೆ ಸಮೀಪ ಇರುವುದರಿಂದ ಕಾಣುವುದಿಲ್ಲ. ಅಮಾವಾಸ್ಯೆಯ ಮರುದಿನ ಸೋಹೋ ತೆಗೆಯುವ ಚಿತ್ರವನ್ನು ನೋಡಿದರೆ ಮಂಗಳ, ಸೂರ್ಯ, ಬುಧ ಈ ಮೂರನ್ನೂ ನೋಡಬಹುದು. ರೋಹಿಣಿಯೂ ಕಾಣಬಹುದು.



ಮೇ 5ರ ಬೆಳಗಿನ ಜಾವ ಶನಿ–ಚಂದ್ರ ನಡುವೆ 3 ಡಿಗ್ರಿ

**ಡಾ॥ ಬಿ. ಎಸ್. ಶೈಲಜಾ**

ಕಲ್ಕತ್ತಾದ ಪೊಸಿಷನಲ್ ಅಸ್ಟ್ರಾನಮಿ ಸೆಂಟರ್ ಸಂಸ್ಥೆ ಭಾರತೀಯ ಮತ್ತು ಖಗೋಳೀಯ ಕ್ಯಾಲೆಂಡರ್‌ಗಳನ್ನು ರಚಿಸುತ್ತದೆ. ಇದು ಎಲ್ಲ ಕ್ಯಾಲೆಂಡರ್ ತಯಾರಕರಿಗೆ ಅತಿ ಮುಖ್ಯವಾದ ಆಕರ. ರಾಷ್ಟ್ರೀಯ ಪಂಚಾಂಗವನ್ನು ಈ ಸಂಸ್ಥೆ ತಯಾರಿಸುತ್ತದೆ. ಅಲ್ಲದೆ ಹಬ್ಬ ಮತ್ತು ಆಚರಣೆಗಳಿಗೆ ಬೇಕಾಗುವ ಹಿಂದೂ/ಇಸ್ಲಾಮೀ/ಯೆಹೂದಿ ಇತ್ಯಾದಿ ಪಂಚಾಂಗಗಳನ್ನು ತಯಾರಿಸುತ್ತದೆ. ಇವು ಆವೃತ್ತಿ ಭಾರತೀಯ ಭಾಷೆಗಳಲ್ಲಿಯೂ ಪುಸ್ತಕ ರೂಪದಲ್ಲಿ ಲಭ್ಯವಿವೆ. ಅದರ ವೈಜ್ಞಾನಿಕ ಪಟ್ಟಿಯನ್ನು ಮೈಸೂರಿನ ಡಾ. ಪಂಡಿತಾರಾಧ್ಯ ಅವರು ಕನ್ನಡದಲ್ಲಿ ತಯಾರಿಸಿದ್ದಾರೆ. ಅವರ ಜಾಲತಾಣಕ್ಕೆ ಭೇಟಿ ಕೊಡಿ.
http://panditaputa.wordpress.com

ಈ ತಿಂಗಳುದ್ದಕ್ಕೂ ಈಟಾ–ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿ ನಡೆಯುತ್ತದೆ. ಮೇ 6–7ರಲ್ಲಿ ಗರಿಷ್ಠ ಚಟುವಟಿಕೆ ಎಂದರೆ ಗಂಟೆಗೆ 30 ಉಲ್ಕೆಗಳು ಕಾಣಬಹುದು. ಮುಂಜಾವಿನಲ್ಲಿ ಆಕಾಶ ಶುಭ್ರವಾಗಿದ್ದಲ್ಲೆಲ್ಲಾ ಗಮನಿಸಿದರೆ, ಕುಂಭರಾಶಿಯಿಂದ ಹೊರಟಂತೆ ಉಲ್ಕೆಗಳು ಕಾಣುತ್ತವೆ. ಹ್ಯಾಲೀ ಧೂಮಕೇತು ಬಿಟ್ಟು ಹೋದ ಧೂಳಿನ ಕಣಗಳು ಇವು. 6–7ರ ಗರಿಷ್ಠ ಅವಧಿಯಲ್ಲೇ ಹುಣ್ಣಿಮೆಯ ಚಂದ್ರದ ಪ್ರಕಾಶವೂ ಇರುವುದರಿಂದ ಉಲ್ಕೆಯ ಪರಿಣಾಮಕಾರಿ ನೋಟ ಕಂಡುಬರಲಾರದು.

**ಮೇ ತಿಂಗಳ ಖಗೋಳ ದಿನಚರಿ**

4 9:12ಕ್ಕೆ ಹುಣ್ಣಿಮೆ
5 ಶನಿ–ಚಂದ್ರ ನಡುವೆ 3 ಡಿಗ್ರಿ
7 ಸಂಜೆ ಬುಧ ಗ್ರಹದ ಗರಿಷ್ಠ ಕೋನೋನ್ನತಿ
11 ಚಾಂದ್ರಮಾಸದ ಕೊನೆಯ ಪಾದ
12 ರೋಹಿಣಿ–ಬುಧ ಜೋಡಿ
15 ಚಂದ್ರ–ಭೂಮಿ ನಡುವೆ ಕನಿಷ್ಠ ದೂರ
18 ಅಮಾವಾಸ್ಯೆ 9:43ಕ್ಕೆ
19 ಬುಧ ಗ್ರಹದ ಹಿನ್ನಡೆ ಆರಂಭ
21 ಶುಕ್ರ–ಚಂದ್ರ ನಡುವೆ 8 ಡಿಗ್ರಿ
23 ಶನಿಗ್ರಹದ ವಿಯುತಿ
24 ಗುರು–ಚಂದ್ರ ನಡುವೆ 6 ಡಿಗ್ರಿ ಅಂತರ
25 ಚಾಂದ್ರಮಾಸದ ಮೊದಲ ಪಾದ
26 ಚಂದ್ರ–ಭೂಮಿ ನಡುವೆ ಗರಿಷ್ಠ ದೂರ
27 ರೋಹಿಣಿ–ಬುಧ–ಮಂಗಳ ಪುಟ್ಟ ಗುಂಪು
30 ಬುಧ ಗ್ರಹದ ನೀಚಯುತಿ

**ಡಾ॥ ಬಿ. ಎಸ್. ಶೈಲಜಾ,** ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

## ಸಾದರ ಸ್ವೀಕಾರ

**ಸಂಘರ್ಷದಿಂದ ಸಾಮರಸ್ಯದೆಡೆಗೆ – ವೃತ್ತಿ ಸಂಘಟನೆಯ ಹಾದಿ** *ಟಿ. ಆರ್. ಭಟ್*
**ಪುಟ : ೪೦೮ ಬೆಲೆ : ರೂ. ೨೭೫**

**ಗಾಳಿಪಟ** *ಜಿ. ಶ್ರೀನಿವಾಸಮೂರ್ತಿ*
**ಪುಟ : ೫೬ ಬೆಲೆ : ರೂ. ೪೫**

**ಪಕ್ಷಿಗಳ ಹಾರಾಟ** *ಜಿ. ಶ್ರೀನಿವಾಸಮೂರ್ತಿ*
**ಪುಟ : ೪೮ ಬೆಲೆ : ರೂ. ೪೦**

**ಪ್ರಾಣಿಲೋಕದ ವಿಸ್ಮಯಗಳು** *ಜಿ. ವಿ. ಗಣೇಶಯ್ಯ*
**ಪುಟ : ೬೪ ಬೆಲೆ : ರೂ. ೬೫**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಗಜ಼ಲ್ ಫಲ್ ಫಲ್** *ಸಂ. ಹಾಗೂ ಅನುವಾದ : ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : ೭೨ ಬೆಲೆ : ರೂ. ೬೦**

**ಉಮಾಶಂಕರ ಜೋಶಿ ಅವರ ಕವಿತೆಗಳು** *ಸಂ. ಹಾಗೂ ಅನುವಾದ : ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : *xii* + ೭೨ = ೮೪ ಬೆಲೆ : ರೂ. ೭೫**

**ರಘುವೀರ ಸಹಾಯ ಕವಿತೆಗಳು** *ಸಂ. ಹಾಗೂ ಅನುವಾದ : ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : *xiv* + ೭೮ = ೯೨ ಬೆಲೆ : ರೂ. ೭೫**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರಗಿ – ೫೮೫ ೧೦೫

**ಶ್ರೀಮದ್ಭಗವದ್ಗೀತಾ ಮತ್ತು ಕಗ್ಗ ತಾತ್ಪರ್ಯ** *ಶ್ರೀಕಾಂತ್*
**ಪುಟ : *vi* + ೧೧೧೪ ಬೆಲೆ : ರೂ. ೩೫೦**
**ಶ್ರೀ ಎಚ್. ವಿ. ಶ್ರೀಕಂಠನ್,** ನಂ. ೨೨೬, ೮ನೇ ಅಡ್ಡರಸ್ತೆ, ೧೯ನೇ 'ಡಿ' ಮುಖ್ಯರಸ್ತೆ, ರಾಜಾಜಿನಗರ ೧ನೇ ಎನ್ ಬ್ಲಾಕ್, ಬೆಂಗಳೂರು – ೫೬೦ ೦೧೦

**ಮಿಂಚು–ಗುಡುಗು–ಸಿಡಿಲು** (ಕವನ ಸಂಕಲನ) *ಎಸ್. ಸಿ. ರಂಗನಾಥ್*
**ಪುಟ : *xiv* + ೬೬ = ೮೨ ಬೆಲೆ : ರೂ. ೭೦**
**ಜ್ಞಾನಾನಂದ ಪ್ರಕಾಶನ,** 'ಆತ್ಮಾನಂದ ನಿಲಯ' ಡಾ॥ ಎಸ್. ಶ್ರೀನಿವಾಸಮೂರ್ತಿ ಕಾಂಪೌಂಡ್, ಸಿದ್ಧಾಪುರ, ಮಧುಗಿರಿ ತಾಲೂಕು, ತುಮಕೂರು ಜಿಲ್ಲೆ – ೫೭೨ ೧೩೨

**ದ್ರೋಣಲವ್ಯ** (ಮಿನಿಕಾದಂಬರಿ) *ಉದಯಕುಮಾರ್ ಹಬ್ಬು*
**ಪುಟ : ೧೧೨ ಬೆಲೆ : ರೂ. ೭೫**
**ಅನಂತ ಪ್ರತಿಭಾ ಪ್ರಕಾಶನ,** ಕಿನ್ನಿಗೋಳಿ – ೫೭೪ ೧೫೦

**ನುಡಿಹಾರ – ೫ – ಸಾಹಿತ್ಯ ಸಂಸ್ಕೃತಿ ಚಿಂತನ ಬರಹಗಳು** *ಸಂಪಾದಕ : ಡಾ॥ ಅರುಣಕುಮಾರ್ ಎಸ್. ಆರ್.*
**ಪುಟ : *xiv* + ೨೧೦ ಬೆಲೆ : ರೂ. ೧೦೦**
**ಕಾಂತಾವರ ಕನ್ನಡ ಸಂಘ (ರಿ),** ಕಾಂತಾವರ – ೫೭೪ ೧೨೯, ಕಾರ್ಕಳ, ಉಡುಪಿ ಜಿಲ್ಲೆ

**ಮನುಸ್ಮೃತಿ ಮತ್ತು ದಲಿತರು** *ಜಹೊನಾ*
**ಪುಟ : *xvi* + ೫೬ = ೭೨ ಬೆಲೆ : ರೂ. ೫೦**
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಭಾವಭಿತ್ತಿಯ ಚಿತ್ರಗಳು** (ಹತ್ತು ಕತೆಗಳ ಸಂಕಲನ) *ಟಿ. ಕೆ. ತ್ಯಾಗರಾಜ್*
**ಪುಟ : *xviii* + ೧೨೪ ಬೆಲೆ : ರೂ. ೧೦೦**
**ಪಲ್ಲವ ಪ್ರಕಾಶನ,** ಚನ್ನಪಟ್ಟಣ ಪೋಸ್ಟ್, ಎಮ್ಮಿಗನೂರು, ಬಳ್ಳಾರಿ – ೫೮೩ ೧೧೩

**ನಬಿಲಾಲನ ಭಕ್ತಿಗೀತೆಗಳು** *ನಬಿಲಾಲ ಬಾಗಹಿಪ್ಪರಗಾ*
**ಪುಟ : *xii* + ೧೫೨ = ೧೬೪ ಬೆಲೆ : ರೂ. ೧೦೦**

**ವಿಷಯವಚನ ಸಂಪುಟಗಳು – ಸಂಪುಟ – ೧ ಅಂಗ, ಅನುಭಾವ, ಅರಿವು** *ಸಂಪಾದಕರು : ಡಾ॥ ಸಂಗಮೇಶ ಸವದತ್ತಿಮಠ*
**ಪುಟ : *xxxii*+೬೩೨ = ೬೬೪ ಬೆಲೆ : ರೂ. ೩೦೦**

**ವಿಷಯ ವಚನ ಸಂಪುಟಗಳು – ಸಂಪುಟ – ೨ ಅವಧಾನ, ಅಷ್ಟಾವರಣ, ಆಚಾರ, ಆತ್ಮ, ಆಸೆ** *ಸಂಪಾದಕರು : ಡಾ॥ ಸಂಗಮೇಶ ಸವದತ್ತಿಮಠ*
**ಪುಟ : *xxxii*+೫೮೪ = ೬೧೬ ಬೆಲೆ : ರೂ. ೩೦೦**

**ವಿಷಯ ವಚನ ಸಂಪುಟಗಳು – ಸಂಪುಟ – ೩ ಇಷ್ಟಲಿಂಗ, ಇಹಪರ, ಏಕೋತ್ತರ ಶತ (ಸ್ಥಲ) ಓಂಕಾರ/ಓಂನಮಃ ಶಿವಾಯ** *ಸಂಪಾದಕರು : ಡಾ॥ ಸಂಗಮೇಶ ಸವದತ್ತಿಮಠ*
**ಪುಟ : *xxxii*+೬೪೦ = ೬೭೨ ಬೆಲೆ : ರೂ. ೩೦೦**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ ಸುಕ್ಷೇತ್ರ,** ಹಾರಕೂಡ – ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಬಯಲು** (ಕವನ ಸಂಕಲನ) *ಶಾಂತಲಾ ಮಧು*
**ಪುಟ : ೯೬ ಬೆಲೆ : ರೂ. ೧೦೦**
**ರಶ್ಮಿ ಪ್ರಕಾಶನ,** ನಂ. ೭೦, ೪ನೇ ಮೈನ್, ೧ನೇ ಅಡ್ಡರಸ್ತೆ, ಅಕ್ಷಯನಗರ ಪಶ್ಚಿಮ, ಸೈಂಟ್ ಆನ್ಸ್ ಶಾಲೆಯ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೫೬೦ ೦೬೮

**ಕನ್ನಡ ಆರಯ್ಪು ಸಾಲು – ಎಸಳು ೬ ರಾಯಚೂರು ಜಿಲ್ಲೆಯ ಬಯಲಾಟಗಳು** *ಡಾ॥ ಹುಲುಗಪ್ಪ ಎಚ್. ಬುದ್ದಿನ್ನಿ*
**ಪುಟ : *xii* + ೩೨೨ = ೩೩೪ ಬೆಲೆ : ರೂ. ೨೬೦**
**ಪರಶುರಾಮ ಕೋಡಗುಂಟಿ, ಪ್ರಕಾಶಕ, ಬಂಡಾರ ಪ್ರಕಾಶನ,** ಮಸ್ಕಿ – ೫೮೪ ೧೨೪, ರಾಯಚೂರು ಜಿಲ್ಲೆ

**ಕುಲದೀಪ – ಚಿ. ವಿ. ಶ್ರೀನಾಥ ಶಾಸ್ತ್ರಿ ಹಾಗೂ ಡಾ॥ ಸಿ. ವಿ. ಗಿರಿಧರ ಶಾಸ್ತ್ರಿ ಅಭಿನಂದನ ಗ್ರಂಥ** *ಸಂಪಾದಕರು : ವಿದ್ಯಾವಾರಿಧಿ ಡಾ॥ ವಾಗೀಶ್ವರೀ ಶಿವರಾಮ*
**ಪುಟ : *xviii* + ೩೫೦ ಬೆಲೆ : ರೂ. ೧೫೦**
**ಶ್ರೀಮತಿ ಮಹಾಲಕ್ಷ್ಮಿ, ಸೋದರಿಯರು ಮತ್ತು ಮಕ್ಕಳು,** ೨೯೩, ೯ನೇ ಮುಖ್ಯರಸ್ತೆ, ಡಾ॥ ಜಿ. ಪಿ. ರಾಜರತ್ನಂ ರಸ್ತೆ, ಹನುಮಂತನಗರ, ಬೆಂಗಳೂರು – ೧೯

# ಕೆಳವರ್ಗದ ವಚನಕಾರ್ತಿಯರು



ಡಾ|| ಅನಿತಾ ಕೆ. ಗುಡಿ

ಕನ್ನಡಿ ಕಾಯಕದ ರೇವಮ್ಮ
ಕಾಲಕಣ್ಣಿಯ ಕಾಮಮ್ಮ
ಕೊಟ್ಟಣದ ಸೋಮಮ್ಮ

ಹನ್ನೆರಡನೆಯ ಶತಮಾನ ಶರಣರ ಶತಮಾನವೆಂದರೆ ಅದೊಂದು ಫಲಭರಿತ ಮರವಿದ್ದಂತೆ. ವಿವಿಧ ವರ್ಗಗಳಿಂದ, ಜಾತಿಗಳಿಂದ, ವಿವಿಧ ಪ್ರದೇಶಗಳಿಂದ ಕಲ್ಯಾಣಕ್ಕೆ ಬಂದು ಸೇರಿದ ಶರಣ ಸಮೂಹ, ಜಾತಿಭೇದ, ಲಿಂಗಭೇದ, ವರ್ಗಭೇದಗಳನ್ನು ತೊಡೆದುಹಾಕಿ ಸಮಾನತೆಗಾಗಿ ಚಳುವಳಿಯನ್ನು ರೂಪಿಸಿದ್ದು, ಜನಸಾಮಾನ್ಯರನ್ನೇ ಕೇಂದ್ರ ಸ್ಥಾನದಲ್ಲಿಟ್ಟು ಮುಕ್ತ ಚರ್ಚೆಯನ್ನು ಪ್ರಾರಂಭಿಸಿದ್ದು ಬಹುಮುಖ್ಯ ಸಂಗತಿ. ಶರಣಯುಗ ಎನ್ನುವ ಮಹಾಬೆಳಕಿನಲ್ಲಿ ನೂರಾರು ಜನ ಮಹಿಳೆಯರು, ಅದರಲ್ಲೂ ಕೆಳವರ್ಗದಿಂದ ಬಂದವರು, ಅಕ್ಷರ ಜ್ಞಾನ ಇರದವರು ವಚನಗಳನ್ನು ರಚಿಸಿದುದು, ಸಮಾಜವನ್ನು ಎಚ್ಚರಿಸಿದುದು ವಿಶೇಷ.

ಇಂದು ನಾನು ಮಾತನಾಡಲಿರುವ ಶಿವಶರಣೆಯರು ದಿಟ್ಟ, ನಿರ್ಭಿಡೆ ನಿಷ್ಠುರ ವಾದಿಗಳು, ಈ ಸಮಾಜವನ್ನು ನಿರ್ಭಿಡೆಯಿಂದ ಕಂಡವರು ಕನ್ನಡಿ ಕಾಯಕದ ರೇವಮ್ಮ, ಕಾಲಕಣ್ಣಿಯ ಕಾಮಮ್ಮ, ಕೊಟ್ಟಣದ ಸೋಮಮ್ಮ, ಒಂದು ಸಮಾಜದ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯನ್ನು ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಅದುಮಿಟ್ಟು ನೋಡುತ್ತಿದ್ದ ಆ ಕಾಲದ ಯಜಮಾನ ಸಂಸ್ಕೃತಿಯ ತುಳಿತಕ್ಕೆ ಒಳಗಾಗಿದ್ದ ಹೆಣ್ಣನ್ನು ಆಳವಾದ ಪ್ರಪಾತದಿಂದ ಮೇಲಕ್ಕೆತ್ತಿದ್ದ ಯಶಸ್ಸು ಬಸವಾದಿ ಶರಣರಿಗೇ ಸಲ್ಲುವದು. ಏಕಕಾಲದಲ್ಲಿ ಏಕದೇವೋಪಾಸನೆ, ರಾಜಪರಂಪರೆ, ಪ್ರಭುಸಂಸ್ಕೃತಿ, ಗಳಿಕೆಯ ಸಂಸ್ಕೃತಿಯನ್ನು ಕಸಕ್ಕಿಂತ ಕಡೆಯಾಗಿ ಕಡೆಗಣಿಸಿ, ಕಾಯಕಕ್ಕೆ ಮಹತ್ವ ನೀಡಿ, ಸಮಾನತೆಯ ಕುರುಹು ಆಗಿ ಲಿಂಗವನ್ನು ತಂದು ಕರಸ್ಥಲಕ್ಕೆ ಇಟ್ಟವರು ಶರಣರು.

'ಸ್ತ್ರೀಯನ್ನು' 'ಭರ್ತೃಹರಿ' ತನ್ನ ಶತಕದಲ್ಲಿ – ಮಹಿಳೆಯರನ್ನು 'ಮಾಯೆ' ಅವಿನಯದ ಅರಮನೆ, ಸಾಹಸಗಳ ಸಂತೆ, ಸಂಶಯದ ಮಡು, ದೋಷಗಳ ಭಂಡಾರ, ನೂರು ವಂಚನೆಗಳ ವಾಸಸ್ಥಾನ, ಸ್ವರ್ಗದ ವಿಘ್ನ, ನರಕದ ಮುಖ, ಅಮೃತಕೂಪದಲ್ಲಿರುವ ವಿಷ ಎಂದು ಹೆಣ್ಣನ್ನು ಕುರಿತು ವ್ಯಾಖ್ಯಾನಿಸಿದ್ದಾನೆ. ಆದರೆ ಶರಣರು – 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿ ಅಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ' ಎಂದು ಅವರನ್ನು ಕನಿಷ್ಠತೆಯಿಂದ ಶ್ರೇಷ್ಠತೆಯೆಡೆಗೆ ಕರೆದೊಯ್ದು, ದೈವತ್ವಕ್ಕೇರಿಸಿದವರು ಬಸವಾದಿ ಶರಣರು. 'ಗಂಡನು ಕೂಡ ಸಮಾಧಿಕೊಂಬ ಹೆಂಡಿರು ಅನಂತ, ಹೆಂಡಿರ ಕೂಡ ಸಮಾಧಿಯ ಕೊಂಬ ಗಂಡರುಂಟಿಲೋಕದೊಳ್ ?' – ಇಂಥ ಸಂದಿಗ್ಧ ಸಮಾಜದಲ್ಲಿ ಮಹಿಳೆಗೆ ಶರಣರು ನೀಡಿದಷ್ಟು ಗೌರವಾದರಗಳನ್ನು ಜಗತ್ತಿನ ಯಾವುದೇ ಕಾಲದ ಚಿಂತಕರಾಗಲಿ, ದಾರ್ಶನಿಕರಾಗಲಿ ನೀಡಿಲ್ಲ. ಇಂದು ಜಾಗತೀಕರಣದ ಈ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದ ಕೊಟ್ಟಣದ ಸೋಮಮ್ಮ, ಕಾಲಕಣ್ಣಿಯ ಕಾಮಮ್ಮ, ಕನ್ನಡಿ ಕಾಯಕದ ರೇವಮ್ಮ ಇವರ ವಿಚಾರಗಳು, ವಚನಗಳು ಹೇಗೆ ಮುಖ್ಯವಾಗುತ್ತವೆ, ಯಾವ ರೀತಿಯಲ್ಲಿ ಈ ವಚನಕಾರ್ತಿಯರನ್ನು ಸ್ಮರಿಸಿಕೊಳ್ಳಬಹುದು ಎಂಬುದು ಚರ್ಚಿತ.

ಮಹಿಳೆಯ ಅಂತಃಶಕ್ತಿಯನ್ನು ವೈಚಾರಿಕ ಸಾಮರ್ಥ್ಯವನ್ನು ಎಚ್ಚರಿಸಿದ ಬಸವಾದಿ ಶರಣರು ಅನುಭವ ಮಂಟಪದ ಶೂನ್ಯ ಸಂಪಾದನೆಯ ಅಲ್ಲಮರೊಂದಿಗೆ ನಡೆದ 'ಮಹಿಳಾ ಸಂವಾದ' ಸಂದರ್ಭ ನೋಡಿದರೆ ಶರಣರು ಸ್ತ್ರೀಯರನ್ನ ಕಂಡ ದೃಷ್ಟಿಭಾವ ವೈಶಾಲ್ಯ, ಗೌರವಿಸಿದ ರೀತಿ ಇವೆಲ್ಲಕ್ಕೂ ಸಾಕ್ಷಿಯಾಗಿ, ಸಾಮಾಜಿಕವಾಗಿ ಅತ್ಯಂತ ಕೆಳವರ್ಗದ ಸ್ತ್ರೀಯರು ಆಧ್ಯಾತ್ಮಿಕ ಸಾಧಕರಾಗಿ, ವಚನಕಾರ್ತಿಯರಾಗಿ, ಶರಣ ಪಥದಲ್ಲಿ ಆತ್ಮ ಸಾಕ್ಷಾತ್ಕಾರವನ್ನು ಮಾಡಿಕೊಂಡು, ಏಕದೇವೋಪಾಸನೆ, ಗುರುಲಿಂಗ ಜಂಗಮ, ವ್ರತನಿಷ್ಠೆ, ನಡೆ–ನುಡಿಶುದ್ಧಿ, ಸತ್ಯಶುದ್ಧಕಾಯಕ, ಭಕ್ತನ ವಿವರಗಳು ವ್ರತಹೀನನ ಸಂಗ, ವಿನಾಶಕಾರಿ, ನೇಮಕೆ ತಪ್ಪಿದ ಭಕ್ತರನ್ನು ನಿರ್ಭಯವಾಗಿ ಕೊಲ್ಲಬೇಕೆನ್ನುವ ಅಗಾಧ ನಿಷ್ಠೆಯನ್ನು ಈ ಮೂರು ಜನ ಶಿವಶರಣೆಯರ ವಚನಗಳಲ್ಲಿ ಕಾಣುತ್ತೇವೆ.

**ಕನ್ನಡಿ ಕಾಯಕದ ರೇವಮ್ಮ**

ಇನ್ನೊಬ್ಬರನ್ನು ಎತ್ತಿ ಆಡಿಕೊಳ್ಳುವವರ ಕುರಿತು, ರೇವಮ್ಮ ತನ್ನ ವಚನದಲ್ಲಿ ಬಹಳ ಸ್ಪಷ್ಟವಾಗಿ ಹೇಳುತ್ತಾಳೆ. 'ಬೇರೆಯವರ ವಿಷಯ ಎತ್ತಿ ಮಾತನಾಡಿದರೆ ಸತ್ತ ನಾಯಿ, ಕುನ್ನಿ ಹಂಗ ನಿಮ್ಮ ನಾಲಿಗೆ ಸೇದಿಹೋಗುವದು. ನಿಮ್ಮ ನಿಮ್ಮ ತನುಮನವನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಿ' ಎಂದು ಹೇಳುವ ಕನ್ನಡಿ ಕಾಯಕದ ರೇವಮ್ಮ ಅಪ್ಪಟ ದೇಸೀಯ ತಾಯಿಯಾಗಿ ಗೋಚರಿಸುವಳು. ಈ ವಚನಕಾರ್ತಿಯನ್ನು 'ರೇವಮ್ಮ' 'ರೇಮ್ಮವ್ವೆ' ಎಂಬ ಹೆಸರುಗಳಿಂದ ಗುರುತಿಸುವರು. ಈಕೆಯ ಹೆಸರಿನ ಹಿಂದೆ ಕಾಯಕಕ್ಕೆ, ವೃತ್ತಿಗೆ ಸಂಬಂಧಿಸಿದ 'ಕನ್ನಡಿ ಕಾಯಕ' ಎಂಬ ವಿಶೇಷಣ ಪದ ಇದೆ. 'ಕನ್ನಡಿ' : ಎಂದರೆ 'ಕ್ಷೌರಿಕ' ಕಾಯಕ ವೃತ್ತಿ ಎಂಬ ರೇವಮ್ಮ ಕ್ಷೌರಿಕ ಜಾತಿಗೆ ಸೇರಿದವಳಿರಬಹುದು. ಏಕೆಂದರೆ ಕನ್ನಡಿ ಕಾಯಕದ 'ಅಮ್ಮಿದೇವಯ್ಯ'ನ ವಚನಗಳಲ್ಲಿ ಕ್ಷೌರಿಕ ವೃತ್ತಿಗೆ ಸಂಬಂಧಿಸಿದ ಕತ್ತಿ,

ಕತ್ತರಿ, ಕನ್ನಡಿ ಮೊದಲಾದ ವಸ್ತುಗಳ ಹೆಸರುಗಳು ಬಳಕೆಯಾಗಿವೆ. ರೇವಮ್ಮಳೂ ಕೂಡ ತನ್ನ ವಚನದಲ್ಲಿ ಕನ್ನಡಿಯ ಉಲ್ಲೇಖ ಮಾಡಿದ್ದಾಳೆ. ರೇವಮ್ಮಳ ಕಾಲ ಸುಮಾರು ೧೧೬೦. ರೇವಮ್ಮ ಹೆಚ್ಚಿನ ಪ್ರಮಾಣದ ವಚನಗಳನ್ನು ರಚಿಸಿರಬಹುದು. ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಕಾಲಗರ್ಭದಲ್ಲಿ ಕಳೆದುಹೋಗಿರಬಹುದು. ಹೀಗಾಗಿ ರೇವಮ್ಮನ ಹೆಸರಿನಲ್ಲಿ ನಮಗೆ ಒಂದೇ ಒಂದು ವಚನ ದೊರಕಿದೆ. ಈಕೆಯ ವಚನದ ಅಂಕಿತನಾಮ 'ಸದ್ಗುರುಸಂಗನಿರಂಗಲಿಂಗ'ವಿರುವ ವಚನ :

*ಕೈಯಲ್ಲಿ ಕನ್ನಡಿಯಿರಲು ತನ್ನತಾ ನೋಡಬಾರದೆ ?*
*ಲಿಂಗ ಜಂಗಮದ ಪ್ರಸಾರಕ್ಕೆ ತಪ್ಪಿದಲ್ಲಿ ಕೊಲ್ಲಬಾರದೆ ?*
*ಕೊಂದಡೆ ಮುಕ್ತಿಯಿಲ್ಲವೆಂಬವರ ಬಾಯಲ್ಲಿ*
*ಪಡಿಹಾರನ ಪಾದರಕ್ಷೆಯನಿಕ್ಕುವೆ*
*ಮುಂಡಿಗೆಯನೆತ್ತಿರೊ ಭ್ರಷ್ಟಭವಿಗಳಿರಾ।*
*ಎತ್ತಲಾರದಡೆ, ಸತ್ತ ಕುನ್ನಿ ನಾಯಬಾಲವ*
*ನಾಲಿಗೆ ಮುರಿಟಿರೊ ಸದ್ಗುರು ಸಂಗನಿರಂಗಲಿಂಗದಲ್ಲಿ.*

ರೇವಮ್ಮನ ಈ ಒಂದೇ ಒಂದು ವಚನದಲ್ಲಿ ಲೋಕದಲ್ಲಿರುವ ಭಕ್ತರು ಹೇಗಿರಬೇಕು, ಭಕ್ತನಾದ ಮೇಲೆ ಆತನಿಗಿರಬೇಕಾದ ಜವಾಬ್ದಾರಿಗಳು, ಅವನು ಪಾಲಿಸಲೇಬೇಕಾದ ವ್ರತ, ಈ ಕುರಿತು ರೇವಮ್ಮ ಹೇಳುತ್ತ ಹೇಳುತ್ತ ಭಕ್ತನಾದವನು ವ್ರತವನ್ನು ಸರಿಯಾಗಿ ಕಾರ್ಯರೂಪಕ್ಕೆ ತರದಿದ್ದರೆ, ಕಲ್ಯಾಣದ ದ್ವಾರಪಾಲಕನಾದ ಪಡಿಹಾರದ (ಇವನು ಕೆಳಜಾತಿಗೆ, ಕೆಳವರ್ಗಕ್ಕೆ ಸೇರಿದವನು) ಉತ್ತಣ್ಣನ ಪಾದರಕ್ಷೆಯನ್ನು ಬಾಯಲ್ಲಿ ಇಕ್ಕುವೆ. ಅಷ್ಟೆ ಅಲ್ಲ ಸತ್ತ ನಾಯಿಬಾಲವ ವ್ರತಭ್ರಷ್ಟರ ಬಾಯಲ್ಲಿ ಹಾಕಬೇಕು ಎಂದು ಬಹಳ ನಿಷ್ಠುರವಾಗಿಯೇ ಕಾಯಕದಲ್ಲಿ ನಿರತರಾಗಬೇಕೆಂದು ಹೇಳುವಳು.

ನಮ್ಮ ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ರೇವಮ್ಮನ ವಚನಗಳಲ್ಲಿ ಬಳಕೆಯಾದ ದೃಷ್ಟಾಂತಗಳನ್ನು, ದುಡಿಯದೆ ಉಣ್ಣುವ, ಗಂಡುಮಕ್ಕಳಿಗೆ ಇದೇ ರೀತಿ ಬೈಯುವರು. ನಿನ್ನ ಬಾಯಾಗ ಕೆರ ಹಾಕ, ಮಣ್ಣ ಹಾಕ ಎಂದು ಬಹಳ ಆಕ್ರೋಶದಿಂದ ಈ ಪಾರಿಭಾಷಿಕ ಪದಗಳು ಬಳಕೆಗೊಳ್ಳುವವು. ಭಕ್ತನಾದವನು ಗುರುಲಿಂಗಜಂಗಮ ಪ್ರಸಾದಕ್ಕೆ ತಪ್ಪಿ ನಡೆಯಬಾರದು. ಮತ್ತು ತಪ್ಪಿ ನಡೆದರೆ ಅಂಥವರನ್ನು ಕೊಲ್ಲಬೇಕು, ಶಿಕ್ಷಿಸಬೇಕೆಂದು ಹೇಳುವಳು. ಪಾಪ ಪುಣ್ಯ, ಸ್ವರ್ಗ ನರಕ ಇಲ್ಲಿಲ್ಲ, ಕೊಂದರೆ ಪಾಪ ಬರುವುದಿಲ್ಲ. ವ್ರತಹೀನರನ್ನು ಕೊಂದರೆ ಮುಕ್ತಿಯಿಲ್ಲ ಅಂತ ಹೇಳುವವರ ಬಾಯಲ್ಲಿ ಕಲ್ಯಾಣದ ಅರಮನೆಯ ದ್ವಾರಪಾಲಕನಾದ ಉತ್ತಣ್ಣನ ಪಾದರಕ್ಷೆಯನ್ನು ಬಾಯಿಯಲ್ಲಿ ಇಡಬೇಕೆಂದು ಹೇಳುವಳು. ಭಕ್ತನು ಮಾಡಲೇಬೇಕಾದ ಗುರುಲಿಂಗ ಜಂಗಮ ಸೇವೆ, ವ್ರತಾಚರಣೆ, ಇದರ ಕುರಿತು 'ಮುಂಡಿಗೆಯನೆತ್ತಿರೊ ಭ್ರಷ್ಟ ಭವಿಗಳಿರಾ' ಎಂದು ಹೇಳುವಲ್ಲಿ 'ಮುಂಡಿಗೆ' ಎನ್ನುವ ಪಾರಿಭಾಷಿಕ ಪದವು 'ಸಮಸ್ಯೆ', 'ತಕರಾರು' ಎನ್ನುವ ಅರ್ಥವನ್ನು ಹೊರ ಹಾಕುವದು. ಕಾಲ ಕೆದರಿ ಜಗಳ, ಸಮಸ್ಯೆ ಮಾಡುವ ಭವಿಗಳಿರಾ ಭಕ್ತನ ಕಾಯಕಕ್ಕೆ ಅಡ್ಡಿ ಬಂದರೆ ಸತ್ತ ನಾಯಿಬಾಲ ಹ್ಯಾಂಗ ಮುರುಟಿ ಹೋಗಿರುತ್ತದೆಯೋ ಹಾಗೆ ನಿಮ್ಮ ನಾಲಿಗೆ ಸೇದಿಕೊಂಡು ಹೋಗುವದು ಎಂದು ಹೇಳುವ ಸಂದರ್ಭದಲ್ಲಿ ರೇವಮ್ಮ ಬಳಸುವ ದೃಷ್ಟಾಂತವೂ ಕೂಡ ದೇಸೀಯ ಜನಜೀವನದ ದೃಷ್ಟಾಂತವಾಗಿದೆ.

ಶರಣರು ಕಾಯಕ ಮಾಡುವಲ್ಲಿ ತಮ್ಮ ಪ್ರಾಣಕ್ಕೆ ಕುತ್ತು ಬಂದರೂ ಕೂಡ ಕಾಯಕ ಮುಗಿಸಿ, ಅದರಿಂದ ಗುರುಲಿಂಗ ಜಂಗಮರ ಪ್ರಸಾದ ಮಾಡಿಯೇ ಪ್ರಾಣವ ಬಿಟ್ಟವರು. ಅಷ್ಟೊಂದು ಕಾಯಕದಲ್ಲಿ ನಿಷ್ಠೆಯನ್ನು ಮೆರೆದವರು. ಇದಕ್ಕೆ ಉತ್ತಮ ನಿದರ್ಶನ ಮೇದಾರ ಕೇತಯ್ಯನವರ ಜೀವನ. ಬೆವರಿನಿಂದ ಬಂದ ಪರಿಶ್ರಮದ ಫಲಮಾತ್ರ ಲಿಂಗಯ್ಯನಿಗೆ, ಜಂಗಮನಿಗೆ ಪ್ರಸಾದವಾಗುವದು ಎಂಬುದೇ ಶರಣರ ಕಾಯಕದ ತಳಹದಿ. ಕಾಯಕದಿಂದ ಬಂದ ಗಳಿಕೆ ವ್ಯಕ್ತಿನಿಷ್ಠವಾಗಿರಬಾರದು. ಅದು ಸಮಾಜಮುಖಿಯಾಗಿ 'ಸೋಹಂ ಎನ್ನದೆ ದಾಸೋಹಂ' ಎನ್ನುವಂತಿರಬೇಕು ಎಂಬುದು ರೇವಮ್ಮಳ ಆಶಯವಾಗಿದೆ.

ಪ್ರಸ್ತುತ ರೇವಮ್ಮನ ವಚನವು ಇಂದಿನ ಸಮಾಜಕ್ಕೆ ಹಿಡಿದ ಕನ್ನಡಿ ಯಂತಿದೆ. ಕಾಯಕವಿಲ್ಲದೇ ಕಾಂಚಾಣ ಬಯಸುವ ಇಂದಿನ ಈ ಸಮಾಜಕ್ಕೆ ಕನ್ನಡಿ ರೇವಮ್ಮ ಆದರ್ಶಳಾಗುವಳು, 'ಸದ್ಗುರು ಸಂಗನಿರಂಗಲಿಂಗದಲ್ಲಿ', ನಿರಂಗ ಎಂದರೆ ನಿರ್ದೇಹಿ, ಆಕಾರವಿಲ್ಲದ ಶೂನ್ಯದಲ್ಲಿರುವ ಶಿವನನ್ನೇ ಆಹ್ವಾನಿಸಿದ್ದಾಳೆ ರೇವಮ್ಮ.

**ಕಾಲಕಣ್ಣಿಯ ಕಾಮಮ್ಮ**

ಕಾಲಕಣ್ಣಿಯ ಕಾಮಮ್ಮ ಸ್ವಭಾವತಃ ನಿರ್ಭಿಡೆಯ ಶರಣೆ. ದಿಟ್ಟ ಮಹಿಳೆ, ವ್ರತಭ್ರಷ್ಟರನ್ನು, ಭವಿಗಳನ್ನು ಸುಡುವೆ ಎಂದು ಹೇಳುವಲ್ಲಿ ಭಕ್ತನಾದವನಿಗೆ ವ್ರತದಲ್ಲಿ ನಿಷ್ಠೆ ಇರಬೇಕೆಂದು ಹೇಳುವಳು. ಕಾಯಕಮುಖಿ ಸಮಾಜವಾಗ ಬೇಕೆಂದು ಎಚ್ಚರಿಸುವ ಕಾಲಕಣ್ಣಿಯ ಕಾಮಮ್ಮನ ವೈಯಕ್ತಿಕ ಜೀವನದ ಸಂಗತಿಗಳು ನಮಗೆ ಅಷ್ಟೊಂದು ದೊರಕುವುದಿಲ್ಲ. ಚರಿತ್ರೆಕಾರರು ಕಾಮಮ್ಮನ ಕಾಲ ಸುಮಾರು ೧೫೦೦ ಇರಬಹುದು ಎಂದಿದ್ದಾರೆ. 'ಸಕಲಪುರಾತರ ವಚನಗಳು' ಕಟ್ಟುಗಳಲ್ಲಿ ಬಸವಾದಿ ಶರಣರ ಸಮಕಾಲೀನ ಶರಣೆಯರ ವಚನಗಳ ಜೊತೆಗೆ ಕಾಮಮ್ಮನ ವಚನವೂ ಇರುವುದರಿಂದ ಇವಳೂ ಕೂಡ ಶರಣರ ಸಮಕಾಲೀನ ಶರಣೆ ಇರಬಹುದು. ಕಾಮಮ್ಮನ ಹೆಸರಿನ ಹಿಂದೆ 'ಕಾಲಕಣ್ಣೆ' ವೃತ್ತಿ ಪದವಿದೆ. ಕಾಲ+ಕಣ್ಣಿ–ಕಣ್ಣಿ–ಹಗ್ಗ ಕಾಲಗ ಹಾಕಿ ಹಗ್ಗ ಹೊಸೆದು ಹಗ್ಗ ಮಾಡಿ, ಕಲ್ಯಾಣ ಪಟ್ಟಣದಲ್ಲಿ ಮಾರಿ ಬಂದ ಹಣದಿಂದ ಜಂಗಮರ ಸೇವೆ ಮಾಡಿದವಳು ಕಾಲಕಣ್ಣಿಯ ಕಾಮಮ್ಮ. ದನಕರುಗಳನ್ನು ಕಟ್ಟಲು ಬಳಸುತ್ತಿದ್ದ ಕಣ್ಣೆ ಇದು. ಆ ಕಾಲದಲ್ಲಿ ಈ ಕಾಯಕವನ್ನು 'ಕುಂಚಿಕೊರವರು' ಮಾಡುತ್ತಿದ್ದರು.

ಮನೆಮನೆಗೆ ಹೊತಕೊಂಡು ಹೋಗಿ ಮಾರುತ್ತಿದ್ದರು. ಇಂದಿಗೂ ಕೂಡ ಕೊರವರು, ಕೊರಸರು ಈ ವೃತ್ತಿಯನ್ನು ಮಾಡುತ್ತಾರೆ. ಇವನ್ನೆಲ್ಲವನ್ನು ಗಮನಿಸಿದರೆ ಕಾಮಮ್ಮ ಕೊರವ ಜಾತಿಗೆ ಸೇರಿದಳಾಗಿರಬೇಕು. ಕಾಮಮ್ಮ ಕೂಡ ಹೆಚ್ಚಿನ ಸಂಖ್ಯೆಯ ವಚನಗಳನ್ನು ಬರೆದಿರಬಹುದು. ಆದರೆ ಇವಳ ಹೆಸರಿನ ಒಂದೇ ವಚನ ನಮಗೆ ದೊರೆಯುವದು. ಇವಳ ವಚನದ ಅಂಕಿತನಾಮ "ನಿರ್ಭೀತ ನಿಜಲಿಂಗದಲ್ಲಿ" ಈ ಕಣ್ಣೆಯೊಳಗ ನಾನಾ ರೀತಿಯ ಹಗ್ಗಗಳು ಸಿಗುವದು. ದನಕರುಗಳಿಗೆ ಮೂಗುದಾಣಕ್ಕೆ ಕಣ್ಣೆ ಹಾಕಿ, ಆಕಡೆ ಈಕಡೆ ಜಗ್ಗದಂಗ ಗೂಟಕ್ಕೆ ಕಟ್ಟಿ, ಆ ಕಡೆ ಈ ಕಡೆಗೆ ಹೋಗದಂಗ ಕಾಲಿಗೆ ಕಟ್ಟುವ ಕಣ್ಣೆ, ಇದು ಬಾಹ್ಯ ಪ್ರಪಂಚ ಕಟ್ಟುವ ಹಗ್ಗದ ವಿಷಯವಾದರೆ ಕಾಮಮ್ಮ ಹೇಳುವ ವಿಚಾರದ ಹಗ್ಗ ವಿಶಾಲತೆಯ ಅರ್ಥವನ್ನು ಹೊಂದಿದೆ. ವಚನ ಇಂತಿದೆ :

*ಎನ್ನಕರಣಂಗಳ ಲಿಂಗದಲ್ಲಿ ಕಟ್ಟುವೆ.*
*ಗುರುಲಿಂಗಜಂಗಮದ ಕಾಲ ಕಟ್ಟುವೆ*
*ವ್ರತಭಷ್ಟರ ನಿಟ್ಟೊರಸುವೆ, ಸುಟ್ಟು ತುರತುರನೆ ತೂರುವೆ.*
*ನಿರ್ಭೀತ ನಿಜಲಿಂಗದಲ್ಲಿ.*

– ಹೊರಗಿನ ಜಗತ್ತಿನಷ್ಟೇ ಭಯಂಕರವಾದುದು ದೇಹದ ಒಳಗಿನ ಜಗತ್ತು. ಮನಸ್ಸು ನಾವು ಹೇಳಿದಂತೆ ಕೇಳಬೇಕು. ದುರ್ಗುಣಗಳನ್ನು ಬಿಡಬೇಕು, ಸದ್ಗುಣ ಗಳನ್ನು ಹಿಡಿಬೇಕು, ಎನ್ನುವ ಕಾಮಮ್ಮ, ಗುರುಲಿಂಗ ಜಂಗಮರ ನಡುವೆಯೇ ಇರಲು ಬಯಸುವ ಕಾಮಮ್ಮ, ವ್ರತ ಮತ್ತು ಕಾಯಕ ಕುರಿತು ಹೇಳುವಳು. ಕಾಯಕದಲಿ ನಿಷ್ಠೆ ತೋರದವರನ್ನು ಒಯ್ದು ಸುಡಬೇಕೆನ್ನುವಳು.

ಸಂಸಾರಕ್ಕಿಳಿದ ಜೀವಿಯನ್ನು ಆಸೆಯ ಪಾಶ ಕಟ್ಟಿಹಾಕುತ್ತದೆ. ಕರಣಂಗಳಾದ ಪಂಚೇಂದ್ರಿಯಗಳಿಗೆ ಸಿಲುಕದೆ, ಅಂದರೆ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಇವುಗಳಿಂದ ಉತ್ಪತ್ತಿ ಆಗುವ ರೂಪ, ಶಬ್ದ,



ಗಂಧ, ರಸ, ಸ್ಪರ್ಶ, ವಿಷಯಂಗಳತ್ತ ಮನ ಹರಿಯದಂತೆ, ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಪ್ರಲೋಭನೆಗಳನ್ನು ದಾಟಿ, ಅಷ್ಟಮದಗಳಾದ ಧನ, ಕುಲ, ವಿದ್ಯೆ, ರೂಪ, ಯೌವ್ವನ, ಬಲ, ಪರಿವಾರ, ಅಧಿಕಾರ ಎನ್ನುವ ಮಗಳನ್ನು ಗೆದ್ದು ಆತ್ಮವನ್ನು ಬಲಪಡಿಸಿ ಕೊಳ್ಳಬೇಕೆಂದು ವಚನದ ಮೊದಲ ಸಾಲು ಅರ್ಥೈಸುವದು. ತಾ ಬಲ ಜಗಬಲ ಅನ್ನುವಂಗ ಮೊದಲು ನಾನು ಆತ್ಮಬಲ ಪಡೆದುಕೊಳ್ಳಬೇಕೆಂದು ವಚನದ ಮೊದಲ ಸಾಲು ಅರ್ಥೈಸುವದು.

ಇಂದಿನ ಸಾಮಾಜಿಕ ವ್ಯವಸ್ಥೆ ನವವಸಾಹತುಶಾಹಿ ಅಕ್ರಮದಿಂದ ಸಾಮಾಜಿಕ, ಆರ್ಥಿಕ ಕ್ಷೇತ್ರಗಳು ಕುಸಿದಿವೆ. ತಲ್ಲಣಗೊಂಡಿವೆ. ಇಂಥ ಸಂದರ್ಭದಲ್ಲಿ ನಮ್ಮ ಶಿವಶರಣೆ ಕಾಮಮ್ಮಳ ವಚನವು ಬಹಳ ಪ್ರಸ್ತುತ ಎನಿಸುವದು.

'ಅರಸನ ನೋಡಿ ಪುರುಷನ (ಗಂಡ) ಮರೆತರೆ ಮರವನೇರಿ ಕೈಬಿಟ್ಟಂತಾಗುವುದು. ಹಾಗಾಗಬಾರದು' ಎನ್ನುವುದು ಕಾಮಮ್ಮಳ ಆಶಯ. ಧ್ಯಾನಸ್ಥ ನಿಲುವಿನ ಕೊರತೆಯಿಂದಾಗಿ ಕ್ರೋಧ ಹೆಚ್ಚಾಗಿದೆ. ಎಲ್ಲವೂ ತನ್ನದಾಗಬೇಕೆಂಬ ಸ್ವಾರ್ಥದಿಂದ ಲೋಭ ಬೆಳೆದಿದೆ. ಪಾಶ್ಚಾತ್ಯ ಸಂಸ್ಕೃತಿಯ ಮೋಹ ಹೆಚ್ಚಾಗಿದೆ. ಎಲ್ಲೆಂದರಲ್ಲಿ ಮದಮತ್ಸರಗಳು ತುಂಬಿಕೊಂಡಿವೆ. ಇಂಥ ಸಂದರ್ಭದಲ್ಲಿ ಕಾಮಮ್ಮನ ವಚನ ಮಹತ್ವ ಪಡೆಯುತ್ತದೆ.

**ಕೊಟ್ಟಣದ ಸೋಮಮ್ಮ**

*ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ*
*ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ.*
*ಅರಿಯದುದು ಹೋಗಲಿ, ಅರಿದು ಬೆರೆದೆನಾದಡೆ,*
*ಕಾದ ಕತ್ತಿಯಲ್ಲಿ ಕಿವಿಯ ಕೊಯ್ವರಯ್ಯಾ*
*ಒಲ್ಲೆ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ.*

– ಕೊಟ್ಟಣದ ಸೋಮಮ್ಮಳ ವಚನದ ಅಂಕಿತನಾಮ 'ನಿರ್ಲಜ್ಜೇಶ್ವರಾ' ಬಹುಧ್ವನಿಪೂರ್ಣವಾದ ಅಂಕಿತ. ಹದತಪ್ಪಿ ಕುಟ್ಟಿದರೆ ನುಚ್ಚು 'ಹದವರಿತು ಕುಟ್ಟಿದರೆ ಅಕ್ಕಿ, ಹದವರಿತರೆ ಬಾಳು, ಇಲ್ಲದಿದ್ದರೆ ಗೋಳು, ಎಂಬುದು ಸೋಮಮ್ಮಳ ವಿಚಾರ. ಸೋಮಮ್ಮ ಕಾಯಕದ ದೃಷ್ಟಾಂತದ ಹೋಲಿಕೆಯನ್ನು ಪರಿಣಾಮಕಾರಿಯಾಗಿ ನೀಡಿದ್ದಾಳೆ.

ಕೊಟ್ಟಣದ ಸೋಮಮ್ಮಳ ಸ್ವವಿಷಯ ನಮಗೆ ದೊರಕುವುದಿಲ್ಲ. ಆದರೆ "ಸಕಲ ಪುರಾತನರ ವಚನಗಳು ಮತ್ತು ಶೀಲ ಸಂಪಾದನೆ" ಎಂಬ ಕೃತಿಯಲ್ಲಿ ಈಕೆಯ ಹೆಸರಿನ ಒಂದು ವಚನ ಮಾತ್ರ ನಮಗೆ ದೊರೆಯುತ್ತದೆ. ಸೋಮಮ್ಮಳ ಕಾಲವನ್ನು ಸುಮಾರು ೧೧೬೦ ಎಂದು ಕವಿ ಚರಿತೆಕಾರರು ಊಹಿಸಿದ್ದಾರೆ. ಒಟ್ಟಿನಲ್ಲಿ ಸೋಮಮ್ಮ ಕಾಯಕ ಜೀವಿಯಾಗಿ ಶರಣರ ನಡುವೆ ಬದುಕಿದ್ದಾಳೆ ಸೋಮಮ್ಮಳ ಕಾಯಕ ಕೊಟ್ಟಣವನ್ನು ಕುಟ್ಟುವದು ಆಗಿತ್ತು. 'ಕೊಟ್ಟಣ' ಎಂದರೆ 'ಭತ್ತ'. ನಿತ್ಯ ಭಕ್ತರ ಮನೆಯ ಭತ್ತವನ್ನು ಕುಟ್ಟುವದು ಬಂದ ಧನದಿಂದ ಗುರುಲಿಂಗಜಂಗಮರ ಸೇವೆ ಮಾಡುವದು ಇವಳ ನಿತ್ಯದ ಕಾಯಕ, ಸೋಮಮ್ಮ ಕಾಯಕ ನಿಷ್ಠೆಯ ಕುರಿತು ಹೇಳುವಳು. "ನಾ ಮಾಡುವ ಕಾಯಕ. ಸತ್ಯಶುದ್ಧ ಕಾಯಕವಾಗಿರಬೇಕು. ಸಮಾಜಮುಖಿಯಾಗಿರಬೇಕು, ಜಂಗಮಮುಖಿ ಆಗಿರಬೇಕು. ಕಾಯಕ ಸ್ಥಾವರವಾಗಬಾರದು" ಎಂಬುದು ಸೋಮಮ್ಮಳ ನಿಲುವು, ಒಳಕಲ್ಲಿಗೆ ಭತ್ತ ಹಾಕಿ ಕುಟ್ಟುವಾಗ ಸರಿಪ್ರಮಾಣಕ್ಕೆ ಕುಟ್ಟಬೇಕು. ಅಂದರೆ ಮಾತ್ರ ಅಕ್ಕಿ, ಅಂದರೆ ಮಾಡುವ ಕೆಲಸದಲ್ಲಿ ನಿಷ್ಠೆ, ನಿಷ್ಠುರತೆ, ಪ್ರೀತಿ, ಪ್ರಾಮಾಣಿಕತನವಿರಬೇಕು. ಶ್ರಮದಿಂದ ಕೂಡಿರಬೇಕು ಕಾಯಕ. ಕಾಯಕ ಮಾಡುತ್ತ ಕಾಯಕಯೋಗಿ ಭಕ್ತಿ ಸ್ಥಲಕೆ ಬಂದು ನಿಲ್ಲಬೇಕು. ಕಾಯಕದಲ್ಲಿ ವೈಯಕ್ತಿಕ ಆಸೆಗಳು ನುಸುಳಬಾರದು. ಆ ರೀತಿ ಆದರೆ ಅವನು ಭಕ್ತನ ಬದಲು ಭವಿ ಆಗುವನು. ಭವಿಗಳೆಂದರೆ ವ್ರತಹೀನರು, ಕೆಲಸಗೇಡಿಗಳು, ಹೊಣೆಗೇಡಿಗಳು, ಹೇಡಿಗಳು. ಈ ಹೇಡಿಗಳ ಸಂಗದಲ್ಲಿ ನಾವಿದ್ದರೆ, ಅವರ ಸಂಗ ಮಾಡಿದರೆ ನಮಗೆ ಖಂಡಿತವಾಗಿಯೂ ನರಕ ಪ್ರಾಪ್ತಿ. ಹೇಗೆಂದರೆ ದುರ್ಜನರ ಸಂಗ ಬಚ್ಚಲ ನೀರ ಸವಿದಂತೆ. ಕೆಲವೊಂದು ಸಲ ವ್ರತಹೀನರ ಸಂಗ ಗೊತ್ತಿಲ್ಲದೆ ಆಗುವದು. ಅದಕ್ಕೆ ಶಿಕ್ಷೆಯಿಲ್ಲ. ಆದರೆ ಅಂಥವರ ಸಂಗದಲ್ಲಿ ನಾ ಬೆರೆತರೆ ಏನಾಗಬಹುದೆಂಬ ಕಲ್ಪನೆಯಿದ್ದು ಸಂಗ ಮಾಡಿದರೆ ಕಾದ ಕತ್ತಿಯಿಂದ ಕಿವಿಯ ಕೊಯ್ವರಯ್ಯಾ ನಿಮ್ಮಾಣೆ ನಿರ್ಲಜ್ಜೇಶ್ವರಾ ಎಂದು ಬರೆಯುತ್ತಾಳೆ.

ಕಾಯಕದ ಮೂಲಕ ಜಗತ್ತಿನ ಜಗದ ವಸ್ತುಗಳನ್ನು ಹಿತಮಿತವಾಗಿ ಬಳಸಿ ಕೊಳ್ಳುತ್ತಾ ಅನಂತವಾದ ಆಧ್ಯಾತ್ಮಿಕ ಬದುಕಿನೆಡೆಗೆ ಸಾಗಬೇಕೆನ್ನುವ ಸೋಮಮ್ಮ, "ಶ್ರೀಮಂತರು ವಸ್ತುಮೋಹದಿಂದ ಹೊರಬರುವದು, ಬಡವರು ವಸ್ತುಮೋಹಕ್ಕೆ ಒಳಗಾಗದೆ ಇರುವದೇ ನಿರ್ಲಜ್ಜೇಶ್ವರ ತೋರುವ ಮುಕ್ತಿಯ ದಾರಿ. ಅಂದಂದಿನ ಕಾಯಕವನ್ನು ಅಂದಂದೆ ಮಾಡಬೇಕು. ಎನ್ನುತ್ತಾಳೆ. "ಜಗಮೆಚ್ಚಿನಡೆದರೆ ಏನಾದೀತು ಮನಮೆಚ್ಚಿ ನಡೆಯುವದು ಲೇಸು". ಎನ್ನುವಂತೆ ಸಾವು ಬಂದರೂ ಹಿಡಿದ ವ್ರತವನ್ನು ಬಿಡಬಾರದೆಂದು ಈ ವಚನಕಾರ್ತಿ ಹೇಳುವಳು.

ಕಾಯಕ ಮತ್ತು ಸಮಾಜ ನಿಷ್ಠೆಯನ್ನು ಹೇಳಿದ ಅಂದಿನ ವಚನಕಾರರ ಮಧ್ಯೆ ಈ ಮೂರು ವಚನಕಾರ್ತಿಯರು ತಮ್ಮ ಕಾಯಕದ ಹಿನ್ನೆಲೆಯಿಂದಲೇ ರಚಿಸಿದ ಈ ವಚನಗಳು ಮಹತ್ವವಾದವುಗಳು. ದುಡಿವ ವರ್ಗದಿಂದ ಬಂದ ಈ ವಚನಕಾರ್ತಿಯರ ಲಭ್ಯವಾದ ಒಂದೊಂದೇ ವಚನದಲ್ಲಿ ತಮ್ಮ ತತ್ವ, ನೀತಿಗಳನ್ನು ತಮ್ಮ ಕಾಯಕದ ಹಿನ್ನೆಲೆಯಿಂದಲೇ ಹೇಳಿರುವ ಅಂಶ ಗಮನಾರ್ಹವಾದದ್ದು. ಕೆಲವೇ ವಚನಕಾರರ, ವಚನಕಾರ್ತಿಯರ ವಚನ ಗಳನ್ನು ಗಮನಿಸುವ ಇಂದಿನ ದಿನಗಳಲ್ಲಿ ಎಲ್ಲ ವಚನಕಾರರನ್ನು ಗಮನಿಸಿ ಅವರ ಆಶಯ, ಕ್ರಿಯೆಗಳನ್ನು ಗುರ್ತಿಸುವಂತಾಗಬೇಕು.

**ಡಾ॥ ಅನಿತಾ ಕೆ. ಗುಡಿ**
ಪ್ರೊ॥ ಎಸ್. ಎಸ್. ಕಟ್ಟಿ ಬಿಲ್ಡಿಂಗ್, ಸಪ್ತಾಪೂರ ೧ನೇ ಕ್ರಾಸ್, ಧಾರವಾಡ – ೫೮೦ ೦೦೧




## ಸುದ್ದಿ ಚಿತ್ರ

'ಹೊಸತು' ಪತ್ರಿಕೆ, ಸಮದರ್ಶಿ ವೇದಿಕೆ, ವಿಶ್ವವಿದ್ಯಾಲಯ ಕಾಲೇಜಿನ ಕನ್ನಡ ಸಂಘ – ಇವುಗಳ ಆಶ್ರಯದಲ್ಲಿ ಮಂಗಳೂರಿನಲ್ಲಿ 'ಆದಿವಾಸಿಗಳ ಸಾಂಸ್ಕೃತಿಕ–ಭೌತಿಕ ನಿರ್ವಸತೀಕರಣ' ವಿಷಯ ಕುರಿತು ವಿಚಾರ ಸಂಕಿರಣ ನಡೆಸಲಾಯಿತು. ಶ್ರೀಮತಿ ಸಬೀತಾ ಕೊರಗ, ಡಾ॥ ದಯಾನಂದ ಮಾನೆ, ಕೇಸರಿ ಹರವೂ, ಡಾ॥ ಸಿದ್ದನಗೌಡ ಪಾಟೀಲ ಮಾತನಾಡಿದರು. ಡಾ॥ ನಾಗಪ್ಪ ಗೌಡ ಅಧ್ಯಕ್ಷತೆ ವಹಿಸಿದ್ದರು.

ವಿಶ್ವದಾದ್ಯಂತ ಜನರನ್ನು ಬೆಚ್ಚಿಬೀಳಿಸಿದ ಹೆಚ್೧ಎನ್೧ ಅಪಾಯಕಾರಿ ಫ್ಲೂ ಎಂಬ ಬೊಬ್ಬೆ ಇದೀಗ ತಾನೆ ವಿಶ್ವ ಆರೋಗ್ಯ ಸಂಸ್ಥೆಯ 'ಜಗತ್ತಿನಿಂದ ದೂರವಾದ ಲಕ್ಷಣಗಳಿವೆ' ಎಂಬ ಘೋಷಣೆಯಿಂದ ಸ್ವಲ್ಪ ತಣ್ಣಗಾಗಿದೆ. ಕಳೆದ ವರ್ಷವಿಡೀ ಜನರ ಮುಖಕ್ಕೆ ಗವಸು ತಗಲಿಸಿ ಆಸ್ಪತ್ರೆಗಳ ಮುಂದೆ ಕ್ಯೂ ನಿಲ್ಲಿಸಿದ ಈ 'ಸೂಕರ ಶೀತಜ್ವರ' ಧನದಾಹಿ ಔಷಧ ಕಂಪನಿಗಳ ಒತ್ತಡದಿಂದಾಗಿ ವಿಶ್ವ ಆರೋಗ್ಯ ಸಂಸ್ಥೆಯನ್ನೇ ಮಣಿಸಿ, 'ಅಪಾಯಕಾರಿ ಜ್ವರವಿದು, ಎಲ್ಲರೂ ಟಾಮಿಫ್ಲೂ ಮಾತ್ರೆ ತಿನ್ನಿ – ಮತ್ತೆ ಮರುಕಳಿಸದಂತೆ ಮುನ್ನೆಚ್ಚರಿಕೆಯ ಡೋಸ್ ಚುಚ್ಚಿಸಿಕೊಳ್ಳಿ' ಎಂಬ ಫರ್ಮಾನು ಹೊರಡಿಸಿ, ಪ್ರಭಾವೀ ವ್ಯಕ್ತಿಗಳ ನಿರ್ದೇಶಕ ಮಂಡಳಿಯ ಔಷಧ ಕಂಪನಿಯ ಮಾತ್ರೆ, ಔಷಧ, ಚುಚ್ಚುಮದ್ದುಗಳನ್ನು ಭರ್ಜರಿ ಮಾರಾಟ ಮಾಡಿಸಿತ್ತು.

'ಉರಿಯುವ ಮನೆಯ ಗಳ ಹಿರಿಯುವ' ಔಷಧ ಕಂಪನಿಗಳ ಲಾಭಬಡುಕತನದಿಂದ ಸಣ್ಣ ಪುಟ್ಟ ಆರೋಗ್ಯದ ತೊಂದರೆಗಳು ದೊಡ್ಡ ದೊಡ್ಡ ಪರೀಕ್ಷೆಗಳಿಗೆ, ಲೀಟರ್‌ಗಟ್ಟಲೆ ಔಷಧ ಸೇವನೆಗೆ ದಾರಿಮಾಡಿಕೊಡುತ್ತಿರುವ 'ವೈದ್ಯಕೀಯ ಮ್ಯಾನೇಜರ್'ಗಳಿಂದ ಎಂತೆಂತಹ ಎಡಬಿಡಂಗಿತನಗಳಾಗಬಹುದು ಎಂಬ ಬಗ್ಗೆ ಗಟ್ಟಿಯಾಗಿ ದನಿ ಎತ್ತಿದವರು ಬಹಳ ಕಡಿಮೆ. ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ ಅವರ 'ಫ್ಲೂ ಎಂದು ಹೆದರುವಿರೇಕೆ ?' ಕೃತಿ ಸಾಮಾನ್ಯ ಜ್ವರ–ಶೀತ–ನೆಗಡಿಗಳ ಫ್ಲೂ ಮುನ್ನೆಚ್ಚರಿಕೆ, ಆರೈಕೆ, ಆರಾಮ ಇವುಗಳಿಂದ ವಾರದಲ್ಲಿ ವಾಸಿಯಾಗುತ್ತದೆ, ಗಾಬರಿಗೊಳ್ಳುವ ಅಗತ್ಯವಿಲ್ಲ ಎಂಬ ಆತ್ಮವಿಶ್ವಾಸವನ್ನು ತುಂಬುತ್ತಲೇ ಮಾತ್ರೆಗಳಿಂದ ಕಂಪೆನಿಗಳು, ನಿಷ್ಪ್ರಯೋಜಕವಾದ ಫ್ಲೂ ನಿರೋಧಕ ಔಷಧಗಳು ಹಾಗೂ ಲಸಿಕೆಗಳನ್ನು ತಯಾರಿಸುವ ಕಂಪೆನಿಗಳು, ಮುಖ ಕವಚಗಳನ್ನು ತಯಾರಿಸುವ ಕಂಪೆನಿಗಳು ಕೋಟಿಗಟ್ಟಲೆ ಬಾಚಿಕೊಳ್ಳುತ್ತಿವೆ. ಕೆಲವು 'ಬದಲಿ' ಪದ್ಧತಿಗಳ ತಜ್ಞರು ತಾವೇಕೆ ಹಿಂದೆ ಉಳಿಯಬೇಕೆಂದುಕೊಂಡು ಈ ಕಾರ್ಯದಲ್ಲಿ ಕೈಜೋಡಿಸಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆ, ಅಮೆರಿಕಾದ ಸಿ.ಡಿ.ಸಿ., ನಮ್ಮ ಆರೋಗ್ಯ ಇಲಾಖೆಗಳಂತಹ ಸಂಸ್ಥೆಗಳು ಇದಕ್ಕೆ ಪೂರಕವಾದ ಸಲಹೆ–ಸೂಚನೆಗಳನ್ನು ಹೊರಡಿಸುತ್ತಿವೆ. ಇವರೆಲ್ಲರ ಪ್ರಯತ್ನಗಳಿಂದಾಗಿ ಶತಮಾನಗಳಿಂದ ನಮ್ಮನ್ನು ಕಾಡುತ್ತಿದ್ದು, ತನ್ನಿಂತಾನಾಗಿ ಗುಣಹೊಂದುವ ಫ್ಲೂ ಸೋಂಕು ಈಗ ಒಮ್ಮಿಂದೊಮ್ಮೆಗೇ ಅತ್ಯಂತ ಭಯಂಕರವಾದ ಹೆಮ್ಮಾರಿಯೆಂಬಂತೆ ಬಿಂಬಿಸಲ್ಪಡುತ್ತಿದೆ. ಇದು ಮೋಸ, ಅಷ್ಟೆ" ಎಂಬ ಡಾ॥ ಶ್ರೀನಿವಾಸ ಕಕ್ಕಿಲ್ಲಾಯರ ತೀರ್ಮಾನಯುತವಾದ ಕೊನೆಯ ಮಾತು ಇಂದಿನ ಹೈಟೆಕ್, ಮಲ್ಟಿ ಸ್ಪೆಷಾಲಿಟಿ ಆಸ್ಪತ್ರೆಗಳ ಸುಲಿಗೆಕೋರತನಕ್ಕೆ, ಲಾಭಬಡುಕ ಔಷಧಿ ಕಂಪೆನಿಗಳ ಷಡ್ಯಂತ್ರಕ್ಕೆ ಹಿಡಿದ ಕನ್ನಡಿಯಾಗಿದೆ.

ಸಣ್ಣಪುಟ್ಟ ಕಾಯಿಲೆಗಳಿಗೆಲ್ಲಾ ಉದ್ದುದ್ದ ಪಟ್ಟಿ ಹಿಡಿದು ಪರೀಕ್ಷೆ ಮಾಡಿಸಿಕೊಳ್ಳುತ್ತಾ, ಮುಂಜಾಗರೂಕತಾ ಲಸಿಕೆ ಹಾಕಿಸುತ್ತಾ ನಡೆದರೆ ದೇಶದ ಆಯವ್ಯಯದ ಶೇಕಡ ನೂರಕ್ಕೂ ಹೆಚ್ಚುಪಟ್ಟು ಹಣ ಬೇಕಾಗಬಹುದು ! ಫ್ಲೂ ಒಂದಕ್ಕೆಂದೇ ಪರೀಕ್ಷೆ ಮಾಡಿಸಿದರೂ ಕನಿಷ್ಠ ೨,೩೪,೦೦೦ ಕೋಟಿ ರೂಪಾಯಿಗಳಷ್ಟು ಬೇಕಂತೆ ! (ಪುಟ ೪೩ರಲ್ಲಿ ಹೆಚ್ಚಿನ ವಿವರಗಳಿವೆ) ಈ ಹಣ

# ಫ್ಲೂ ಭೀತಿ ನಿವಾರಿಸಿ ವೈದ್ಯಕೀಯ ಭಯೋತ್ಪಾದನೆ ಅನಾವರಣಗೊಳಿಸುವ ಕೃತಿ




*ಕೃತಿ :* **ಫ್ಲೂ ಎಂದು ಹೆದರುವಿರೇಕೆ ?** *ಪುಟಗಳು :* **೭೨** *ಬೆಲೆ :* **ರೂ. ೪೦/–**
*ಲೇಖಕರು :* **ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ** *ಪ್ರಕಾಶಕರು :* **ನವಕರ್ನಾಟಕ ಪ್ರಕಾಶನ,** ಬೆಂಗಳೂರು

ಮಾತ್ರವೇ ಮುಕ್ತಿ, ಏಳೇ ದಿನಗಳಲ್ಲಿ ವಾಸಿಯಾಗುತ್ತದೆ ಎಂದು ಜಂಭ ಕೊಚ್ಚಿಕೊಳ್ಳುವ ಔಷಧ ಕಂಪನಿಗಳ ಷಡ್ಯಂತ್ರವನ್ನು ಅನಾವರಣಗೊಳಿಸುತ್ತದೆ.

ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಅವರು ೨೦೧೦ರ ಏಪ್ರಿಲ್–ಮೇ ತಿಂಗಳವರೆಗೆ ವಿಶ್ವದಾದ್ಯಂತ ಜರುಗಿದ ಎಚ್೧ಎನ್೧ ವಿದ್ಯಮಾನಗಳನ್ನು ಅಂಕಿ–ಅಂಶಗಳ ಸಹಿತ ಮಂಡಿಸುತ್ತಾ ೧೯೧೮–೧೯ರಲ್ಲಿ ಸ್ಪ್ಯಾನಿಷ್ ಫ್ಲೂನಿಂದಾಗಿ ಅಗಾಧ ಪ್ರಮಾಣದಲ್ಲಿ ಮರಣ ಸಂಭವಿಸಲು ಕಾರಣ ಫ್ಲೂ ಮಾತ್ರವೇ ಆಗಿರದೆ, ಆಗ ಲಭ್ಯವಿರದಿದ್ದ ವೈದ್ಯಕೀಯ ಸೌಲಭ್ಯ, ಪರಿಣತಿ, ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಯೂ ಕಾರಣವಾಗಿತ್ತು ಎನ್ನುವುದನ್ನು ತೋರಿಸಿದ್ದಾರೆ. ಪುಟ ೩೫ರಲ್ಲಿ ಕೊಟ್ಟಿರುವ ಕೋಷ್ಟಕ ೧೯೧೮ರಿಂದ ೨೦೦೯ರವರೆಗೆ ಜಗತ್ತನ್ನು ಕಾಡಿದ ವಿವಿಧ ಬಗೆಯ ಫ್ಲೂ ಎಷ್ಟು ಜನರಿಗೆ ತೊಂದರೆ ಕೊಟ್ಟು ಬಲಿ ತೆಗೆದುಕೊಂಡಿದೆ ಎಂಬ ವಿವರ ನೀಡಿ ಈ ಹೊಸ ಫ್ಲೂ ಕುರಿತು ಗಾಬರಿಗೊಳ್ಳಬೇಕಾದ ಅಗತ್ಯವಿಲ್ಲ ಎಂಬ ಅಂಶವನ್ನು ಮನದಟ್ಟು ಮಾಡಿಸುತ್ತದೆ.

"ಆಗಾಗ ರೂಪ ಬದಲಿಸಿ ಬರುವ ಫ್ಲೂ ವೈರಾಣು ಮತ್ತೊಂದು ರೂಪದಲ್ಲಿ ನಮ್ಮನ್ನು ಕಾಡಲು ಇದೀಗ ಮತ್ತೊಮ್ಮೆ ಬಂದಿದೆ. ಹೊಸ ರೂಪ ಧರಿಸಿ ಬಂದ ಹಳೆಯ ಫ್ಲೂ ಜ್ವರದ ಹೆಸರಲ್ಲಿ, ಅದನ್ನು ಪತ್ತೆಹಚ್ಚುವ ಪರೀಕ್ಷೆಯನ್ನು ಸಿದ್ಧಪಡಿಸಿದ ನಮ್ಮ ದೇಶದ ಔಷಧ ಕಂಪನಿಗಳಿಗೆ ಸಂದಾಯವಾಗುವುದಿಲ್ಲ. ಏಕೆಂದರೆ ಇವು ವಿದೇಶದಿಂದ ಆಮದು ಮಾಡಿಕೊಳ್ಳುವ ಔಷಧಿಗಳು ಮತ್ತು ಆ ಕಂಪನಿಗಳ ನಿರ್ದೇಶಕ ಮಂಡಳಿಯವರು ವಿಶ್ವದ ವಿವಿಧ ಸಂಘಟನೆಗಳೊಂದಿಗೆ ಗುರುತಿಸಿಕೊಂಡ ಆಢ್ಯರು ! ಅವರಿಂದ ಸೂಕ್ತ ಕಮಿಷನ್ ಕೂಡ ಸಂಬಂಧಪಟ್ಟ ಜನಕ್ಕೆ ತಲುಪುವ ವ್ಯವಸ್ಥಿತ ಒಳಸಂಚಿರುವುದರಿಂದ ಜನಸಾಮಾನ್ಯರಿಗೆ ಸುಣ್ಣದಂತಹ ಪುಡಿಯನ್ನೂ ಔಷಧಿಯಾಗಿಸಿ ನುಂಗಿಸಿಬಿಡುವ, ನಗುಮುಖದ ಸುಲಿಗೆಯ ಬಹಿರಂಗ ಸತ್ಯ ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ ಅವರ 'ಫ್ಲೂ ಎಂದು ಹೆದರುವಿರೇಕೆ ?' ಕೃತಿಯಲ್ಲಿ ಢಾಳಾಗಿ ಪಡಿಯಚ್ಚಾಗಿದೆ. ಜನರನ್ನು ಎಚ್ಚರಗೊಳಿಸುವ ಇಂತಹ ಕೃತಿಗಳು ಇನ್ನೂ ಹೆಚ್ಚು ಬರಲಿ, ಜನರ ವೈದ್ಯಕೀಯ ಮೌಢ್ಯವನ್ನು ದೂರಗೊಳಿಸಿ, ಉತ್ತಮ ಆರೋಗ್ಯ ದೊರಕಿಸುವಂತಾಗುವ ಅಗತ್ಯವಿದೆ.

**ಬೇದ್ರೆ ಮಂಜುನಾಥ**
ಕಾರ್ಯಕ್ರಮ ನಿರ್ವಾಹಕರು
ಆಕಾಶವಾಣಿ ಕೇಂದ್ರ, ಹಾಸನ – ೫೭೩ ೨೦೧

# ಸಾಲ ಮನ್ನಾ-ಬಡ್ಡಿ ಮನ್ನಾ

## ಅಥವಾ ಬೆಳೆ ವಿಮೆಗಳಿಂದ ರೈತರ ಸ್ಥಿತಿ-ಗತಿ ಸುಧಾರಣೆ ಸಾಧ್ಯವೇ?

'ಕೃಷಿಗಿಲ್ಲ ಆದ್ಯತೆ ರೈತರಿಗಿಲ್ಲ ಮಾನ್ಯತೆ' ಎಂಬಂತೆ ಕೃಷಿ ಪ್ರಧಾನವಾದ ದೇಶ ಭಾರತದಲ್ಲಿ ಸಂಘಟನೆಯ ಕೊರತೆ ಹಾಗೂ ಸರ್ಕಾರದ ಅಸಮರ್ಪಕ ನೀತಿಗಳಿಂದಾಗಿ ರೈತರು ಬಹಳಷ್ಟು ಸಂಕಷ್ಟ ಅನುಭವಿಸುತ್ತಿದ್ದಾರೆ ಮತ್ತು ರೈತರ ಸ್ಥಿತಿ–ಗತಿಗಳು ಅತ್ಯಂತ ನಿಕೃಷ್ಟದಾಯಕವಾಗಿವೆ. ರೈತರು ದೇಶದ ಸಂಪತ್ತು, ಬೆನ್ನೆಲುಬು, ಅನ್ನದಾತ ಎಂದು ಎಲ್ಲಾ ಸಂದರ್ಭಗಳಲ್ಲಿ, ಸ್ಥಳಗಳಲ್ಲಿ ಹೇಳುತ್ತಾ ನಮ್ಮ ಸರ್ಕಾರಗಳು ರೈತರನ್ನು ನೆಮ್ಮದಿಯಿಂದ, ಸ್ವಾವಲಂಬಿಯಾಗಿ ಬದುಕಲು ಬಿಡುತ್ತಿಲ್ಲ ಎಂಬುದಕ್ಕೆ ಇತ್ತೀಚೆಗೆ ಕೃಷಿ ಸಾಲ ಮನ್ನಾ ಮಾಡುವುದರಿಂದ ರೈತರಿಗೆ ಯಾವುದೇ ಪ್ರಯೋಜನವಾಗುತ್ತಿಲ್ಲ ಎಂಬ ರಿಸರ್ವ್ ಬ್ಯಾಂಕ್ ಗವರ್ನರ್ ರಘುರಾಂ ರಾಜನ್ ನೀಡಿದ ಹೇಳಿಕೆಯು ಸಾಕಷ್ಟು ಚರ್ಚೆಗೆ ಗ್ರಾಸವಾಗಿದೆ. ಈ ನಿಟ್ಟಿನಲ್ಲಿ ಕೃಷಿಕ್ಷೇತ್ರದ ಸುಧಾರಣೆಗೆ ಸಾಲ ಮನ್ನಾ, ಬಡ್ಡಿ ಮನ್ನಾ ಅಥವಾ ಬೆಳೆ ವಿಮೆಗಳಿಂದ ರೈತರ ಸ್ಥಿತಿ–ಗತಿಗಳು ಸುಧಾರಣೆ ಸಾಧ್ಯವೇ ಅಥವಾ ಇಲ್ಲವೇ ಎಂಬುದರ ಒಂದು ಮುಕ್ತ ಚರ್ಚೆ ಈ ನಿಟ್ಟಿನಲ್ಲಿ ತುಂಬ ಅವಶ್ಯವೆನಿಸಿದೆ. ಕೃಷಿಕ್ಷೇತ್ರದಲ್ಲಿ ಸಾಲ ಮನ್ನಾ ಎಂಬುದು ಪೂರಕವೇ ಅಥವಾ ಮಾರಕವೇ ಎಂಬುದರ ವಿವಿಧ ಸಾಧಕ–ಬಾಧಕಗಳ ಬಗ್ಗೆ ತಿಳಿಯುವ ಒಂದು ಸಣ್ಣ ಪ್ರಯತ್ನ ಇಲ್ಲಿದೆ. ಇತ್ತೀಚೆಗೆ, ಸೀಮಾಂಧ್ರ ಮತ್ತು ತೆಲಂಗಾಣ ಸರ್ಕಾರಗಳು ಕಳೆದ ವರ್ಷ ಪೈಲಿನ್ ಚಂಡಮಾರುತದಿಂದ ಸಂತ್ರಸ್ತರಾದವರಿಗೆ ಸಾಲ ಮನ್ನಾ ಘೋಷಿಸಿದೆ. ತೆಲಂಗಾಣ ಸರ್ಕಾರ ಮನ್ನಾ ಮಾಡಿದ ಶೇ. ೨೫ರಷ್ಟು ಬಾಬ್ತನ್ನು ಬ್ಯಾಂಕುಗಳಿಗೆ ಈಗಾಗಲೇ ನೀಡಿದೆ. ಆದರೆ ಸೀಮಾಂಧ್ರ ಸರ್ಕಾರ ಇನ್ನೂ ಬ್ಯಾಂಕುಗಳಿಗೆ ಹಣ ಸಂದಾಯ ಮಾಡಿಲ್ಲ.

ಯು.ಪಿ.ಎ. ಸರ್ಕಾರವು ೨೦೦೮ರಲ್ಲಿ ಸುಮಾರು ೪.೩ ಕೋಟಿ ರೈತರು ಮಾಡಿದ ಒಟ್ಟು ಮೊತ್ತ ರೂ. ೫೨,೫೧೬ ಕೋಟಿಯಷ್ಟು ಸಾಲವನ್ನು ಮನ್ನಾ ಮಾಡಿತ್ತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬೇರೆ–ಬೇರೆ ಸಂದರ್ಭಗಳಲ್ಲಿ ಸಾಲ ಮನ್ನಾ ಯೋಜನೆಗಳನ್ನು ಜಾರಿಗೊಳಿಸಿವೆ. ಆದರೆ ಇದರಿಂದ ಯಾವ ಉಪಯೋಗವೂ ಇಲ್ಲ ಎಂಬುದು ಹಲವಾರು ಸಂಶೋಧನಾ ಅಧ್ಯಯನಗಳಿಂದ ದೃಢಪಟ್ಟಿದೆ. ಇದು ಆರ್.ಬಿ.ಐ. ಗವರ್ನರ್‌ರವರ ಅಭಿಪ್ರಾಯವೂ ಆಗಿದೆ. ಹಾಗಾಗಿ ಸಾಲ, ಬಡ್ಡಿ, ಬೆಳೆ ವಿಮೆ ಇವೇ ಮೊದಲಾದ ತಂತ್ರಗಳನ್ನು ಸರ್ಕಾರ ಬಳಸಿಕೊಂಡು ರೈತರನ್ನು ವೋಟ್ ಬ್ಯಾಂಕ್‌ಗಳಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿವೆ. ಇದರಿಂದ ಕೇವಲ ಒಂದು



ಯು.ಪಿ.ಎ. ಸರ್ಕಾರವು 2008ರಲ್ಲಿ ಸುಮಾರು 4.3 ಕೋಟಿ ರೈತರು ಮಾಡಿದ್ದ ಒಟ್ಟು ಮೊತ್ತ ರೂ. 52,516 ಕೋಟಿಯಷ್ಟು ಸಾಲವನ್ನು ಮನ್ನಾ ಮಾಡಿತ್ತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬೇರೆ–ಬೇರೆ ಸಂದರ್ಭಗಳಲ್ಲಿ ಸಾಲ ಮನ್ನಾ ಯೋಜನೆಗಳನ್ನು ಜಾರಿಗೊಳಸಿವೆ. ಆದರೆ ಇದರಿಂದ ಯಾವ ಉಪಯೋಗವೂ ಇಲ್ಲ ಎಂಬುದು ಹಲವಾರು ಸಂಶೋಧನಾ ಅಧ್ಯಯನಗಳಂದ ದೃಢಪಟ್ಟಿದೆ. ಇದು ಆರ್.ಬಿ.ಐ. ಗವರ್ನರ್‌ರವರ ಅಭಿಪ್ರಾಯವೂ ಆಗಿದೆ. ಹಾಗಾಗಿ ಸಾಲ, ಬಡ್ಡಿ, ಬೆಳೆ ವಿಮೆ ಇವೇ ಮೊದಲಾದ ತಂತ್ರಗಳನ್ನು ಸರ್ಕಾರ ಬಳಸಿಕೊಂಡು ರೈತರನ್ನು ವೋಟ್ ಬ್ಯಾಂಕ್‌ಗಳಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿವೆ. ಇದರಿಂದ ಕೇವಲ ಒಂದು ವರ್ಗದ ರೈತ ಸಮುದಾಯ ಅನುಕೂಲವನ್ನು ಪಡೆದರೆ, ಅದೆಷ್ಟೋ ರೈತ ಸಮುದಾಯಗಳಲ್ಲಿ ಸಣ್ಣ ಮತ್ತು ಅತಿ ಸಣ್ಣ, ಶೋಷಿತ ಸಮುದಾಯ ಹಾಗೂ ನಿರ್ಗತಿಕರ ಮೇಲೆ ಇದು ಅನುಕೂಲಕರವಾದ ವಾತಾವರಣಕ್ಕಿಂತ ಅನಾನುಕೂಲಕರ ವಾತಾವರಣವನ್ನು ಸೃಷ್ಟಿ ಮಾಡಿದೆ.

**ಡಾ|| ಸುರೇಶ ಕೆ. ಪಿ.**

ವರ್ಗದ ರೈತ ಸಮುದಾಯ ಅನುಕೂಲವನ್ನು ಪಡೆದರೆ, ಅದೆಷ್ಟೋ ರೈತ ಸಮುದಾಯಗಳಲ್ಲಿ ಸಣ್ಣ ಮತ್ತು ಅತಿ ಸಣ್ಣ, ಶೋಷಿತ ಸಮುದಾಯ ಹಾಗೂ ನಿರ್ಗತಿಕರ ಮೇಲೆ ಇದು ಅನುಕೂಲಕರವಾದ ವಾತಾವರಣಕ್ಕಿಂತ ಅನಾನುಕೂಲಕರ ವಾತಾವರಣವನ್ನು ಸೃಷ್ಟಿ ಮಾಡಿದೆ.

ಕರ್ನಾಟಕದಲ್ಲೂ ೧೯೮೩ರಿಂದ ಸಾಲ ಮತ್ತು ಬಡ್ಡಿ ಎರಡನ್ನೂ ಮನ್ನಾ ಮಾಡುವುದು ರೂಢಿಗೆ ಬಂದಿದೆ. ಬರಗಾಲ ಮತ್ತು ಅತಿವೃಷ್ಟಿಯಿಂದ ಕಂಗಾಲಾಗಿದ್ದ ರೈತರಿಗೆ ನೆರವಾಗಲು ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಗಡೆಯವರು ಈ ಜನಪ್ರಿಯ ಯೋಜನೆಯನ್ನು ಜಾರಿಗೆ ತಂದಿದ್ದರು. ಅದು ಹಾಗೆಯೇ ಮುಂದುವರಿಯುತ್ತದೆ. ಮುಖ್ಯಮಂತ್ರಿ ಸಿದ್ದರಾಮಯ್ಯನವರು ಸಹ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಕೋಟ್ಯಂತರ ರೂಪಾಯಿಗಳ ಸಾಲ ಮನ್ನಾ ಮಾಡಿದ್ದಾರೆ. ಇದರಿಂದ ವಾಣಿಜ್ಯ ಬ್ಯಾಂಕುಗಳಲ್ಲಿ ಸಾಲ ಪಡೆದಿದ್ದ ರೈತರು ಪ್ರಯೋಜನ ಪಡೆದರು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಲ ಮನ್ನಾ ಎಂಬ 'ಚಕ್ರವ್ಯೂಹ'ವನ್ನು ರಚಿಸಿವೆ. ಇದರಿಂದ ರೈತರ ಸಾಲದ ಹೊರೆ ಹೆಚ್ಚಿದೆಯೇ ಹೊರತು ಕಮ್ಮಿಯೇನಾಗಿಲ್ಲ. ಸರಕಾರ ಸಾಮಾನ್ಯ ಮನುಷ್ಯನ ಜೀವನದ ಜೊತೆ ಆಟವಾಡುತ್ತಿದೆ.

**ಸಾಲ-ಬಡ್ಡಿ ಮನ್ನಾ ರೈತರ ಸ್ಥಿತಿಗತಿಗಳನ್ನು ಸುಧಾರಿಸುತ್ತಿವೆಯೇ ?**

೨೦೧೧ರ ಅಂಕಿಅಂಶಗಳ ಪ್ರಕಾರ ನಮ್ಮ ದೇಶದ ಶೇ. ೫೫ರಷ್ಟು ಜನರು ಕೃಷಿಯನ್ನೇ ಅವಲಂಬಿಸಿದ್ದಾರೆ. ಇತ್ತೀಚೆಗೆ ಇದರ ಕೊಡುಗೆ ರಾಷ್ಟ್ರೀಯ ಆದಾಯಕ್ಕೆ ಶೇ. ೧೩-೧೪ರಷ್ಟಾಗಿದ್ದು ಕೃಷಿ ಮುನ್ನಡೆಯುತ್ತಿದೆ. ಈ ನಿಟ್ಟಿನ ಕೃಷಿಯಲ್ಲಿ ಸರ್ಕಾರ ಸಾಲ ಮನ್ನಾ ಮುಂತಾದ ಕಾರ್ಯತಂತ್ರಗಳನ್ನು ರೂಪಿಸಬೇಕು. ಸರ್ಕಾರದ ಸಾಲ ಮನ್ನಾದಂತಹ ಯೋಜನೆಗಳಿಂದ ರೈತರಿಗೆ ಪ್ರಯೋಜನವಾಗಿಲ್ಲ ಎಂಬುದು ಶುದ್ಧ ಸುಳ್ಳು. ಇದರಿಂದ ಶೇ. ೯೦ರಷ್ಟು ಜನರು ಋಣಮುಕ್ತರಾಗಲು ಸಾಧ್ಯವಾಗಿದೆ ಎಂಬುದು ರೈತಸಂಘದ ಕೆ. ಎಸ್. ಪುಟ್ಟಣ್ಣಯ್ಯನವರ ವಾದ. ಪ್ರಕೃತಿ ವಿಕೋಪದ ಕಾರಣಕ್ಕೋ, ಸರಿಯಾದ ಬೆಲೆ ನೀತಿ ಇಲ್ಲದೆ ರೈತರು ಆರ್ಥಿಕ ದುರ್ಬಲರಾಗಿರುವುದಕ್ಕೋ ಅಥವಾ ರೈತರ ವೋಟ್ ಪಡೆಯುವುದಕ್ಕೋ ಇವುಗಳಲ್ಲಿ ಯಾವುದು ಸರಿಯಾದ ಕಾರಣ ಎಂಬುದು ತಿಳಿದಿಲ್ಲ.

* ಸುಮಾರು ೨೦ ಕೋಟಿಯಷ್ಟು ಜನರು ದೇಶದಲ್ಲಿ ಸುಮಾರು ೭.೫ ಲಕ್ಷ ಕೋಟಿ ಸಾಲ ಪಡೆದಿದ್ದಾರೆ. ಇದರಿಂದ ಆರ್ಥಿಕವಾಗಿ ಲಾಭಗಳಿಸಲು ಕೃಷಿ ಚಟುವಟಿಕೆಯಲ್ಲಿ ಬೆಳವಣಿಗೆ ಸಾಧಿಸಲು ಸಹಾಯಕವಾಗುತ್ತದೆ.
* ಪ್ರಕೃತಿಯನ್ನು ಅವಲಂಬಿಸಿ ಬದುಕಿರುವ ರೈತರು ಉತ್ತಮ ಬೆಳೆ ಬೆಳೆದರೂ ಸೂಕ್ತ ಮಾರುಕಟ್ಟೆ ವ್ಯವಸ್ಥೆಯ ಕೊರತೆಯಿಂದಾಗಿ ನಷ್ಟ ಅನುಭವಿಸಬೇಕಾಗಿದೆ. ಈ ಕೊರತೆಯನ್ನು ನೀಗಿಸಲು ಸಾಲ ಸೌಲಭ್ಯ ತುಂಬ ಅತ್ಯಗತ್ಯ.
* ಅತಿವೃಷ್ಟಿ, ಅನಾವೃಷ್ಟಿ ಮತ್ತು ಪ್ರಕೃತಿ ವಿಕೋಪಗಳಿಂದ ಉಂಟಾಗುವ ಬೆಳೆ ಹಾನಿಗಳಿಗೆ ಗುಣಾತ್ಮಕ ಪರಿಹಾರ ಇಲ್ಲದಿರುವುದು, ಬ್ಯಾಂಕಿಂಗ್ ಮತ್ತು ಖಾಸಗಿಯವರ ಸಾಲ ತೀರಿಸಲಾಗದ ಪರಿಸ್ಥಿತಿ, ಇವು ರೈತರ ಆತ್ಮಹತ್ಯೆಗೆ ಕಾರಣವಾಗಿವೆ. ಇಂತಹ ಅವಘಡಗಳ ಸಂದರ್ಭದಲ್ಲಿ ಸಾಲ ಮನ್ನಾ, ಬಡ್ಡಿ ಮನ್ನಾ ತುಂಬ ಪೂರಕವೆನಿಸುತ್ತವೆ.
* ದೇಶದಲ್ಲಿ ಶೇ. ೬೫ರಷ್ಟು ಕೃಷಿಕರು ವ್ಯವಸಾಯ ಮಾಡುತ್ತಿದ್ದಾರೆ. ಬರಗಾಲ ನಿಭಾಯಿಸುವುದಕ್ಕೆ ಸಂಬಂಧಿಸಿದಂತೆ ಸರ್ಕಾರ ಸಮಗ್ರ ಕೃಷಿ ನೀತಿಯನ್ನು ರೂಪಿಸುವಲ್ಲಿ ವಿಫಲವಾಗಿದೆ. ಈ ನಿಟ್ಟಿನಲ್ಲಿ ರೈತರಿಗೆ ಸಾಲ ಸೌಲಭ್ಯ, ಬಡ್ಡಿ ಮನ್ನಾ ತುಂಬ ಅಗತ್ಯವಿದೆ.
* ಬರ ಪರಿಸ್ಥಿತಿ ಬಂದಾಗ ರೈತರು ನಗರಗಳಿಗೆ ವಲಸೆ ಹೋಗುವ ಪರಿಪಾಠ ಬೆಳೆದಿದೆ. ಒಣಬರ, ಹಸಿಬರ, ಅಕಾಲಿಕ ಬೆಳೆ ನಾಶ ಮುಂತಾದುವುಗಳಿಂದ ಅವರು ಹತಾಶರಾಗುವ ಸ್ಥಿತಿ ಉಂಟಾಗುತ್ತಿದೆ. ಇದರಿಂದ ಸಾಲ ಸೌಲಭ್ಯ ನೀಡುವುದು, ಪರಿಹಾರ ನೀಡುವುದು ಅಗತ್ಯ ಕ್ರಮ.
* ಸರ್ಕಾರಗಳು ವೋಟ್ ಬ್ಯಾಂಕ್‌ಗಾಗಿ ಸಾಲ ಮನ್ನಾ ಯೋಜನೆಗಳನ್ನು ಬಳಸಿಕೊಳ್ಳುತ್ತವೆ ಎಂಬ ಆರೋಪ ಪೂರ್ಣ ಪ್ರಮಾಣದಲ್ಲಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ, ಆದರೆ ಓರೆ-ಕೋರೆಗಳನ್ನು ತಿದ್ದುವ ಕೆಲಸವನ್ನು ಸರ್ಕಾರ ಮಾಡಬೇಕು.
* ರೈತ ಕುಟುಂಬದಲ್ಲಿ ಎಲ್ಲಾ ಸದಸ್ಯರಿಗೂ ಉದ್ಯೋಗ ಸೃಷ್ಟಿಸಿಕೊಳ್ಳುವ, ವರ್ಷಪೂರ್ತಿ ವಿವಿಧ ಕಸುಬುಗಳಲ್ಲಿ ತೊಡಗಿಸಿಕೊಳ್ಳಲು ಅನುಕೂಲವಾಗುವಂತಹ ಸಾಲ ನಿಧಿಯನ್ನು ರೂಪಿಸಬೇಕಾದ ಅಗತ್ಯವಿದೆ.

**ಸಾಲ ಮನ್ನಾ (ಕೇಂದ್ರ ಸರ್ಕಾರ)**

| ವರ್ಷ | ಪ್ರಯೋಜನ ಪಡೆದ ರೈತರು | ಮನ್ನಾ ಮಾಡಿದ ಒಟ್ಟು ಮೊತ್ತ (ಕೋಟಿಗಳಲ್ಲಿ) |
|---|---|---|
| ೧೯೯೦-೯೧ | ೩.೨೦ ಕೋಟಿ | ೭೮೨೫.೦೦ |
| ೨೦೦೮-೦೯ | ೩.೬೮ ಕೋಟಿ | ೫೫೦೦೦.೦೦ |
| | ರಾಜ್ಯ ಸರ್ಕಾರ | |
| ೨೦೦೬-೦೭ | ೯.೨೦ ಲಕ್ಷ | ೧೮೯೦.೦೦ |
| ೨೦೧೧-೧೨ | ೧೫.೨೪ ಲಕ್ಷ | ೩.೬೩೯ |

ಇತ್ತೀಚೆಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಕೋಟ್ಯಾನುಕೋಟಿ ರೂಪಾಯಿ ಸಾಲ ಮನ್ನಾ ಮಾಡಿರುವುದನ್ನು ಮೇಲ್ಕಂಡ ಕೋಷ್ಟಕದಿಂದ ತಿಳಿಯಬಹುದು. ಇತ್ತೀಚೆಗೆ, ರಾಜ್ಯ ಸರ್ಕಾರವು ಸುಮಾರು ೫೦,೦೦೦ ರೂಪಾಯಿಗಳವರೆಗಿನ ಸಹಕಾರಿ ಬ್ಯಾಂಕ್‌ಗಳಿಂದ ಪಡೆದ ಸಾಲವನ್ನು ಮನ್ನಾ ಮಾಡಲು ಮುಂದಾಗಿದೆ ಎಂದು ಮುಖ್ಯಮಂತ್ರಿಗಳು ಘೋಷಿಸಿದ್ದಾರೆ. ರಾಜ್ಯದ ಈ ಸಾಲ ಸೌಲಭ್ಯವನ್ನು ಪಡೆಯುವವರ ಸಂಖ್ಯೆ ೭,೧೪,೦೩೮ ಎಂದೂ ಅದರಲ್ಲಿ ೫೦,೦೦೦ ರೂ.ಗಳವರೆಗೆ ಪಡೆಯುವವರ ಸಂಖ್ಯೆ ೭೧೮೦೭೬ ಎಂದೂ ರಾಜ್ಯ ಕೃಷಿ ಸಚಿವರು ತಿಳಿಸಿದ್ದಾರೆ.

**ಸಾಲ ಸೌಲಭ್ಯವನ್ನು ಪಡೆದವರ ಕೋಷ್ಟಕ ೨೦೧೩-೧೪**

| | |
|---|---|
| ಲಾಭ ಪಡೆಯುವ ರೈತರ ಸಂಖ್ಯೆ | ೭,೬೫,೧೩೬ |
| ೨೫೦೦೦ದವರೆಗೆ ಸಾಲ ಪಡೆಯುವವರ ಸಂಖ್ಯೆ | ೫,೯೫,೯೬೨ |
| ೫೦೦೦೦ದವರೆಗೆ ಸಾಲ ಪಡೆದವರು | ೧,೨೫,೦೭೬ |
| ಬಡ್ಡಿ ಮನ್ನಾ, ಸಾಲ ಮನ್ನಾ ಸೌಲಭ್ಯ ಪಡೆಯುವ ರೈತ | ೪.೯೦ ಲಕ್ಷ |
| ಸರ್ಕಾರಕ್ಕೆ ಬೀಳುವ ಹೊರೆ | ೧೯೮೫ ಕೋಟಿ |

ಸಾಲ ಮನ್ನಾ - ಬಡ್ಡಿ ಮನ್ನಾ ಎಂಬ ನೂತನ ಘೋಷಣೆಗಳು ರೈತರ ನಿದ್ದೆ ಕೆಡಿಸುತ್ತಿವೆ. ಅಲ್ಲದೆ ಅದು ಕೇವಲ ಭರವಸೆಗಳ ಬಾಣಲೆ ಆಗಿದೆ ಅಷ್ಟೆ. ಇಂತಹ ತಂತ್ರಗಳು ರೈತರ ಸ್ಥಿತಿ-ಗತಿಗಳ ಸುಧಾರಣೆಯೆನಿಸಿದ್ದರೂ ಅದು ಕೇವಲ ಬೆರಳೆಣಿಕೆಯಷ್ಟು ಎಂದು ಹೇಳಬೇಕಾಗುತ್ತದೆ. ಏಕೆಂದರೆ ಅದೆಷ್ಟು ರೈತಸಮುದಾಯಗಳು ಇಂತಹ ಸೌಲಭ್ಯಗಳ ಪರಿಕಲ್ಪನೆಯೇ ಗೊತ್ತಿಲ್ಲದೆ ಕಂಗಾಲಾಗಿವೆ. ಇದಕ್ಕೆ ಬದಲಾಗಿ ಸರ್ಕಾರಗಳು ರೈತರ ಜೀವನಮಟ್ಟ ಸುಧಾರಣೆಯಿಂದ ಅವರ ಸ್ಥಿತಿ-ಗತಿಗಳ ಬಗ್ಗೆ ನೂತನವಾದ ಸುಧಾರಿತ ತಂತ್ರವನ್ನು ಕೃಷಿಯಲ್ಲಿ ಅಳವಡಿಸುವುದರಿಂದ ಸ್ವಲ್ಪ ಮಟ್ಟಿಗೆ ಸುಧಾರಣೆ ಸಾಧ್ಯವಾಗುತ್ತದೆ ಎಂಬುದು ಕೃಷಿ ತಂತ್ರಜ್ಞರ ಅಭಿಪ್ರಾಯ.

ಕೃಷಿ ಸಾಲ ಮನ್ನಾ ಎಂಬುದು ತಲೆನೋವಿಗೆ ಮುಲಾಮು ಸವರಿಕೊಂಡಂತೆ. ಅದರಿಂದ ಸಿಗುವುದು ಕೇವಲ ತಾತ್ಕಾಲಿಕ ಉಪಶಮನವೇ ಹೊರತು ಶಾಶ್ವತ ಪರಿಹಾರವಲ್ಲ. ತಲೆನೋವು ಬೇರೆ ಯಾವುದೋ ದೊಡ್ಡ ರೋಗದ ಲಕ್ಷಣವಾಗಿದ್ದಾಗ ಆರೋಗ್ಯಕ್ಕೆ ಪರಿಹಾರ ಹುಡುಕಬೇಕೇ ಹೊರತು, ಮುಲಾಮು ಬಳಿದುಕೊಳ್ಳುವುದು ಪರಿಹಾರ ಆಗದು. ದೇಶದ ಕೃಷಿಕ್ಷೇತ್ರ ಇಂದು ಹಲವು ಸಮಸ್ಯೆಗಳ ಗೂಡಾಗಿದೆ. ರಾಷ್ಟ್ರೀಯ ಆದಾಯಕ್ಕೆ ಕೃಷಿ ಕ್ಷೇತ್ರದ ಕೊಡುಗೆ ೧೯೫೧ರಲ್ಲಿ ಶೇ. ೫೫ರಷ್ಟಿದ್ದುದು, ೨೦೧೩-೧೪ರಲ್ಲಿ ಅದು ಕೇವಲ ೧೩ರಿಂದ ೧೪ ಅಂತರದಲ್ಲಿದೆ. ಜಾಗತೀಕರಣದ ಪರಿಣಾಮವಾಗಿ ೧೯೯೧ರ ನಂತರ ಕೃಷಿಕ್ಷೇತ್ರದ ಹಲವು ಸಮಸ್ಯೆಗಳನ್ನು ಸುಧಾರಿಸುವ ಬದಲು ಮತ್ತಷ್ಟು ಸಮಸ್ಯೆಗಳ ಗೂಡಾಗಿದೆ. ಇತ್ತೀಚೆಗೆ, ಆಹಾರ ಉತ್ಪನ್ನವು ಇಳಿಮುಖವಾಗುತ್ತಿದೆ. ಅಂದರೆ ೨೬೪

ಮಿಲಿಯನ್ ಟನ್‌ನಷ್ಟು ಇದ್ದುದು ೨೫೪ ಮಿಲಿಯನ್ ಟನ್‌ಗೆ ಇಳಿದಿರುವುದು, ಕೃಷಿಯ ಮೇಲಿನ ಅವಲಂಬನೆ ಮತ್ತು ಉತ್ಪಾದನೆ ಇಳಿಮುಖವಾಗುತ್ತಿರುವುದು ನಕಾರಾತ್ಮಕ ಬೆಳವಣಿಗೆಯಾಗಿದೆ.

* ಕಳೆದ ಎರಡು ದಶಕಗಳಲ್ಲಿ ದೇಶಾದ್ಯಂತ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇತ್ತೀಚಿನ ವರದಿಗಳ ಪ್ರಕಾರ ಮಹಾರಾಷ್ಟ್ರದಲ್ಲಿ ೨೦೧೪-೧೫ರಲ್ಲಿ ೧೫೦೭ರಷ್ಟು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆದರೆ ಇದರ ಬಗ್ಗೆ ತಲೆಕೆಡಿಸಿಕೊಂಡವರು ಯಾರು ? ಇಂತಹ ಪ್ರಕರಣಗಳು ಇನ್ನೂ ನಡೆಯುತ್ತಲೇ ಇವೆ. ಬಹುಪಾಲು ರೈತರ ಆತ್ಮಹತ್ಯೆಗೆ ಪ್ರಧಾನ ಕಾರಣ ಸಾಲದ ಹೊರೆ.

**ರೈತರ ಆತ್ಮಹತ್ಯೆ ೨೦೧೩-೧೪**

| ವರ್ಷ | ಮೃತರ ಸಂಖ್ಯೆ | ಅವಧಿ |
|---|---|---|
| ೧೯೯೧-೧೯೯೯ | ೧೨೧೧೫೭ | ೮ ವರ್ಷ |
| ೧೯೯೯-೨೦೦೭ | ೧೪೯೭೮೩ | ೮ ವರ್ಷ |
| ೨೦೦೭-೨೦೧೫ | ೧೫೦೮೭೪ | ೮ ವರ್ಷ |

*(ಆಧಾರ : ನ್ಯಾಷನಲ್ ಕ್ರೈಂ ರೆಕಾರ್ಡ್ಸ್ ಬ್ಯೂರೋ ೨೦೧೩-೧೪)*

* ಕೃಷಿ ಕಾರ್ಯಗಳಿಗೆ ರೈತ ಸಾಲ ಮಾಡುವುದು ಅನಿವಾರ್ಯ. ಬೆಳೆದ ಬೆಳೆಗೆ ಲಾಭದಾಯಕ ಬೆಲೆ ಬಂದಾಗ ಸಾಲ ತೀರಿಸುವುದು ಸುಲಭ, ಆದರೆ ಸರಿಯಾದ ಲಾಭ ಇರಲಿ, ಖರ್ಚೂ ಹುಟ್ಟದಷ್ಟು ಕಡಿಮೆ ಬೆಲೆ ಬಂದಾಗ ರೈತ ಸಾಲ ತೀರಿಸಲಾರ. ಸಾಲಿಗರ, ಅದರಲ್ಲೂ ಖಾಸಗಿ ಲೇವಾದೇವಿಗಾರರ ಭಯ ಹಾಗೂ ಅವಮಾನ ತಡೆಯಲಾರದೆ ಸ್ವಾಭಿಮಾನಿ ರೈತರು ಆತ್ಮಹತ್ಯೆಗೆ ಶರಣಾಗುತ್ತಾರೆ. ಇದು ನಿಜವಾದ ಸಮಸ್ಯೆ. ಕೃಷಿ ಸಾಲ ನೀಡುವ ಪ್ರಧಾನ ಮೂಲಗಳೆಂದರೆ ವಾಣಿಜ್ಯ-ಬ್ಯಾಂಕುಗಳು, ಸಹಕಾರಿ ಸಂಘಗಳು ಹಾಗೂ ಖಾಸಗಿ ಸಾಲಿಗರು, ಖಾಸಗಿ ಸಾಲಿಗರು ಕೊಡುವ ಸಾಲಕ್ಕೆ ಬಡ್ಡಿ ವಿಪರೀತ ಹಾಗೂ ಮೋಸ ಅತ್ಯಧಿಕ. ಕೃಷಿಗೆ ಬೇಕಾಗುವಷ್ಟು ಸಾಲವನ್ನು ಬ್ಯಾಂಕುಗಳು, ಸಹಕಾರ ಸಂಘಗಳು ನೀಡಬೇಕು ಹಾಗೂ ಆ ಮೂಲಕ ಖಾಸಗಿ ಸಾಲಿಗರ ಹಿಡಿತದಿಂದ ರೈತರನ್ನು ಪಾರುಮಾಡಬೇಕು ಎಂಬುದು ೧೯೬೦ರ ದಶಕದಲ್ಲಿ ಸರ್ಕಾರಗಳ ಗುರಿಯಾಗಿತ್ತು. ಬ್ಯಾಂಕುಗಳ ರಾಷ್ಟ್ರೀಕರಣದ ನಂತರ ತಕ್ಕಮಟ್ಟಿಗೆ ಅದು ಸಾಧ್ಯವೂ ಆಯಿತು. ಆದರೆ ೧೯೯೧ರ ಕಾಲಘಟ್ಟದಲ್ಲಿ ಬ್ಯಾಂಕುಗಳು ನಗರಮುಖಿಯಾದವು ಹಾಗೂ ಕೃಷಿ ಸಾಲ ಪೂರೈಕೆಯಿಂದ ಹಿಂದೆ ಬಿದ್ದವು. ಹೀಗಾಗಿ ನಿರ್ದಯ ಖಾಸಗಿ ಲೇವಾದೇವಿಗಾರರ ಕೈ ಮೇಲಾಯಿತು. ಕೃಷಿ ಪತ್ರಕರ್ತ ಪಿ. ಸಾಯಿನಾಥ್‌ರವರ ಅಭಿಪ್ರಾಯದಂತೆ ೧೯೯೩ರಿಂದ ೨೦೦೭ರ ಅವಧಿಯಲ್ಲಿ, ಎಂದರೆ ೧೫ ವರ್ಷಗಳಲ್ಲಿ ಸುಮಾರು ೪೭೫೦ ಗ್ರಾಮೀಣ ಬ್ಯಾಂಕ್‌ಗಳ ಶಾಖೆಗಳನ್ನು ಮುಚ್ಚಲಾಯಿತು. ಅದೇ ಅವಧಿಯಲ್ಲಿ ಸುಮಾರು ೬೦೭೩ರಷ್ಟು ನಗರ ಶಾಖೆಗಳು ಹೆಚ್ಚಿದವು.

ಒಂದು ಕಡೆ ಏರುತ್ತಿರುವ ಬೀಜ, ಗೊಬ್ಬರ ಮತ್ತು ಕೀಟನಾಶಕಗಳ ಬೆಲೆಗಳು, ಮತ್ತೊಂದು ಕಡೆ, ಬೆಳೆಯುವವರಿಗೆ ಹೆಚ್ಚು ಲಾಭ ತಂದುಕೊಡದ ಬೆಲೆಗಳು ಹಾಗೂ ಪ್ರಕೃತಿ ವಿಕೋಪಗಳು ಇವುಗಳ ನಡುವೆ ಕೃಷಿ ಯಾರಿಗೂ ಬೇಡವಾದ ಉದ್ಯಮವಾಗಿದೆ. ರೈತನಿಗೆ ಆದಾಯವೇ ಇಲ್ಲದಿರುವಾಗ ಸಾಲ ಮನ್ನಾ ಎಂಬುದು ಶಾಶ್ವತ ಪರಿಹಾರ ನೀಡಿತು. ಕೇಂದ್ರ ಸರ್ಕಾರದ ಎನ್‌ಎಸ್‌ಎಸ್‌ಓ ಸಮೀಕ್ಷೆಯ ಪ್ರಕಾರ ೨೦೧೨-೧೩ನೇ ಸಾಲಿನಲ್ಲಿ ಶೇ. ೫೦ರಷ್ಟು ಕೃಷಿ ಕುಟುಂಬಗಳು ಸಾಲದಲ್ಲಿ ಮುಳುಗಿವೆ. ಕೃಷಿ ಕುಟುಂಬದ ಸರಾಸರಿ ಮಾಸಿಕ ಆದಾಯ ಕೇವಲ ೬೪೨೬ ರೂಪಾಯಿ. ಅಂದರೆ ಕೃಷಿ ಪರಿಸ್ಥಿತಿ ಮತ್ತಷ್ಟು ಹದಗೆಡುತ್ತಿದೆ ಎಂಬುದಕ್ಕೆ ಇದೇ ಸಾಕ್ಷಿ.

ಕೃಷಿ ಕ್ಷೇತ್ರದಲ್ಲಿ ಇಂಥ ವಿಫಲ ಪರಿಸ್ಥಿತಿ ಇರುವವರೆಗೆ ಪ್ರತಿವರ್ಷ ಕೃಷಿ ಸಾಲ ಮನ್ನಾ ಘೋಷಿಸುವುದು ಹೊಳೆಯಲ್ಲಿ ಹುಣಸೇ ಹಣ್ಣು ತೊಳೆದಂತೆ ನಿರರ್ಥಕ.



## ಬೇಲಿ




ಬೇಸರದ ತುಣುಕೊಂದು ಎದುರು ಬಯಲಿಗೆ
ಬಂದು ಕಣ್ ಮಿಟುಕಿಸಿ ನಕ್ಕಿತು.
ಸುತ್ತಮುತ್ತ ಯಾರಿರದ ಹೊತ್ತು
ನೋಡಿ ಸುತ್ತಿ ಬರಲು ಕರೆಯಿತು
ಬಾರೆ ಸಖಿ ಬಾ ಬಾರೆ ಸಖಿ
ಮುತ್ತಿ ಬರೋಣ ಹಸಿರು ಕಾನನ
ಕಿತ್ತು ಹರಡಿದೆ ಮುಂಗುರುಳು ತಲೆ ಬಾಚಿಕೋ
ಸುಕ್ಕು ಬಿದ್ದಿದೆ ಕೆನ್ನೆ ಕೆಂಪು ಕದಡಿಕೋ
ಇದೇನಿದು ಬಿಳಚಿಕೊಂಡಿದೆ ತುಟಿ ರಂಗು ಮೆತ್ತಿಕೋ
ಸುಮ್ಮನೊಂದು 'ಹವಾಯ್' ಮೆಟ್ಟಿಕೋ
ಮತ್ತೆ ಮತ್ತೆ ಕರೆಯಿತು...

> ಕಿಟಕಿ ಸರಳುಗಳ ಹಾರುವುದು ಸರಳವೇನೆ
> ಹೇಗೆ ಬರಲಿ ನಿನ್ನೊಂದಿಗೆ
> ಎದೆಯಲ್ಲಿ ಮುರಳಿಗಾನದ ಕಾತರಿಕೆ
> ಕಣ್ಣಲ್ಲಿ ಜಿನುಗುವ ನೂರಾರು ಕಾರಂಜಿಗಳ
> ಹೊಯ್ದಾಟ...
> ಮಾತು ಬಾರದ ದನಿಯಲ್ಲಿ ನುಡಿದು
> ಮುಖ ತಿರುಗಿಸಿದೆ

ಗಳಿಗೆ ಸರಿದವು. ಕಣ್ಣು ತಪ್ಪಿಸಿ ಅಲೆದೆ
ನಿಟ್ಟುಸಿರಿನ ತೋರಣದ ಕಂಪು ಅರಸಿ ಬಂದವನು
ತೋಳು ಬೆಸೆದ. ಉಸಿರು ಹೊಸೆದ
ಮೈಯ್ಯ ತುಂಬ ಒಲವ ಬಲೆ ಹೆಣೆದು
ಹೆಣೆದು ಹೊರಳಾಡಿಸಿದ...
ಬೆಳ್ಳಿ ಮಂಚದ ತುಂಬ
ಸೋತ ಬೆರಳಿನ ಜಾತ್ರೆ
ಕಿರುಗಣ್ಣ ಮಣಿ ಮತ್ತೆ
ಹೊರಟೇಬಿಟ್ಟಿತು
ಕಿಟಕಿ ಅರಸುತ್ತ
ಬರೆಯದ ಕವಿತೆ ಸದ್ದಿಲ್ಲದೆ
ಬೇಲಿ ದಾಟಿತು...

**ದೀಪ್ತಿ ಭದ್ರಾವತಿ**
'ಸ್ನಿಗ್ಧ', ೨ನೇ ತಿರುವು, ಶಂಕರಮಠ ರಸ್ತೆ
ಸಿದ್ಧಾರೂಢ ನಗರ, ಭದ್ರಾವತಿ

## ಶಾಶ್ವತ ಪರಿಹಾರ ಕ್ರಮಗಳೇನು ?

* ಕೃಷಿಕರ ಆದಾಯ ಹೆಚ್ಚಿಸುವ ಮಾರ್ಗೋಪಾಯಗಳ ಬಗ್ಗೆ ಚಿಂತಿಸಲು ಅವರಿಗೆ ಸಾಲ ಪಡೆಯುವ ಹಾಗೂ ಪಡೆದ ಸಾಲವನ್ನು ತೀರಿಸುವ ಸಾಮರ್ಥ್ಯ ನೀಡಬೇಕು ಅದೇ ಶಾಶ್ವತ ಪರಿಹಾರ. ಕೃಷಿ ಸಾಲವನ್ನು ಸರಿಯಾದ ಕ್ರಮದಲ್ಲಿ ಇಂದು ಬ್ಯಾಂಕ್‌ನಲ್ಲಿ ಬೆಳೆ ಸಾಲ ಪಡೆದು ಮರುಪಾವತಿಸದೆ ಇದ್ದರೂ ನಡೆಯುತ್ತದೆ ಎಂಬ ಮನೋಭಾವನೆಯನ್ನು ರೈತರಲ್ಲಿ ಹುಟ್ಟುಹಾಕುತ್ತದೆ. ಪ್ರಾಮಾಣಿಕವಾಗಿ ಮರುಪಾವತಿ ಮಾಡುವ ಕೃಷಿಕರನ್ನು ಹಾದಿ ತಪ್ಪಿಸುತ್ತದೆ. ಬಹು ಅನಿವಾರ್ಯ ಎನ್ನುವಂತಹ ಪರಿಸ್ಥಿತಿಯಿದ್ದರೆ ಸರ್ಕಾರ ಬಡ್ಡಿ, ಸುಸ್ತಿ ಬಡ್ಡಿ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳಬಹುದು. ಅಲ್ಲದೆ ಬೆಳೆ ವಿಫಲವಾದ ಹಂಗಾಮಿನಲ್ಲಿ ಮರುಪಾವತಿ ಸಾಧ್ಯವಾಗದೆ ರೈತರ ಸಾಲವನ್ನು ಹೊಸ ಸಾಲವಾಗಿ ಪರಿವರ್ತಿಸಬಹುದು. ಮುಂದಿನ ಹಂಗಾಮಿನಲ್ಲಿ ತೀರಿಸಲು ಅವಕಾಶ ನೀಡಬಹುದು. ಬ್ಯಾಂಕಿಂಗ್ ವಹಿವಾಟಿನಲ್ಲಿಯೇ ಸಾಲ ಮರು ಹೊಂದಾಣಿಕೆ ಅವಕಾಶವಿದೆ. ಸ್ವಾತಂತ್ರ್ಯ ಬಂದು ಆರು ದಶಕಗಳು ಸಂದರೂ ಸಮಗ್ರ ಕೃಷಿ ನೀತಿಯನ್ನು ರೂಪಿಸಲು ಸರ್ಕಾರಕ್ಕೆ ಆಗುತ್ತಿಲ್ಲ. ಬೆಲೆಗಳಿಗೆ ಕನಿಷ್ಠ ಬೆಂಬಲ ಬೆಲೆ ನಿಗದಿಪಡಿಸಿಲ್ಲ. ಈ ಬಗ್ಗೆ ಕೇಂದ್ರ ಸರ್ಕಾರವನ್ನು ಕೇಳಿದರೆ ಕೃಷಿ ರಾಜ್ಯಕ್ಕೆ ಸಂಬಂಧಿಸಿದ್ದು ಎಂದೂ ರಾಜ್ಯ ಸರ್ಕಾರವನ್ನು ಕೇಳಿದರೆ, ಅದು ಕೇಂದ್ರದ ಕೆಲಸ ಎಂದೂ ಉಡಾಫೆ ಧೋರಣೆಗಳನ್ನು ವ್ಯಕ್ತಪಡಿಸದೆ ಸರಿಯಾದ ನೀತಿಯನ್ನು ರೂಪಿಸಲಿ. ಸಾಲ ಮರುಪಾವತಿಸದವರಿಗೆ ನೋಟಿಸ್ ನೀಡುವ, ಮನೆ ಜಪ್ತಿ ಮಾಡುವ ಬದಲು ಸಾಲ ಕಟ್ಟುವಂತೆ ಅವರ ಮನವೊಲಿಸುವ ಕೆಲಸ ಮಾಡಬೇಕು. ರೈತರ ಕುಟುಂಬದಲ್ಲಿನ ಎಲ್ಲಾ ಸದಸ್ಯರಿಗೂ ಉದ್ಯೋಗ ಸೃಷ್ಟಿಸಿಕೊಳ್ಳುವ ದಿಶೆಯಲ್ಲಿ ವರ್ಷಪೂರ್ತಿ ವಿವಿಧ ಕಸುಬುಗಳಲ್ಲಿ ತೊಡಗಿಸಿಕೊಳ್ಳಲು ಅನುಕೂಲವಾಗುವಂತಹ ಸಾಲ ನೀತಿ ರೂಪಿಸಬೇಕಾದ ಅಗತ್ಯವಿದೆ. ದೇಶದಲ್ಲಿ ಕೃಷಿ ವೆಚ್ಚ ಮತ್ತು ನಷ್ಟದ ಬಗ್ಗೆ ಮಾಹಿತಿ ನೀಡುವ ಪುಸ್ತಕಗಳೇ ಇಲ್ಲ. ಕೃಷಿ ಕ್ಷೇತ್ರದಲ್ಲಿ ಸೂಕ್ತ ನೀತಿ ರೂಪಿಸಿ ರೈತರ ಗುಳೆಯನ್ನು ತಪ್ಪಿಸಬೇಕು. ಕಡಿಮೆ ಜಮೀನಿನಲ್ಲಿ ಬಹು ಬೆಳೆ ಬೆಳೆಯುವ ವಿಧಾನಗಳನ್ನು ಸಣ್ಣ ಹಿಡುವಳಿದಾರರಿಗೆ ತಿಳಿಸಿಕೊಟ್ಟು, ಅವರನ್ನು ಆರ್ಥಿಕ ಸ್ವಾವಲಂಬಿಗಳಾಗಿಸಬೇಕು. ಕೃಷಿಯನ್ನು ಲಾಭದಾಯಕವಾಗಿಸುವ ನಿಟ್ಟಿನಲ್ಲಿ ಗಮನವನ್ನು ಕೇಂದ್ರೀಕರಿಸಿದರೆ ರೈತರ ಸಮಸ್ಯೆಗಳು ತಾನೇ ತಾನಾಗಿ ಬಗೆಹರಿಯುತ್ತವೆ.
* ಕೃಷಿ ಕ್ಷೇತ್ರಕ್ಕೆ ನೀಡುತ್ತಿರುವ ಸಬ್ಸಿಡಿಗಳಿಂದಾಗಿ ರೈತರಿಗೆ ನಿರಂತರವಾಗಿ ಏನಾದರೂ ಉಪಯೋಗವಾಗಿದೆಯೋ ಅಥವಾ ಇಲ್ಲವೋ




ಎಂಬುದು ಗೊತ್ತಾಗಬೇಕು. ಕೃಷಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ಕೊಡುವುದೇನೋ ಒಳ್ಳೆಯದೆ. ಆದರೆ ಅದು ಸರಿಯಾದ ಉದ್ದೇಶಕ್ಕೆ ಬಳಕೆಯಾಗುತ್ತಿದೆಯೇ ಅಥವಾ ಅದರಿಂದ ರೈತರ ಸಾಲದ ಹೊರೆ ಇನ್ನಷ್ಟು ಹೆಚ್ಚಾಗುತ್ತಿದೆಯೇ ಅಥವಾ ಅನರ್ಥದ ಹೂಡಿಕೆಗೆ ಇದು ಎಡೆಮಾಡಿಕೊಡುತ್ತಿದೆಯೇ ಎಂಬುದರ ಬಗ್ಗೆ ಅವಲೋಕನ ನಡೆಯಬೇಕಿದೆ. ರೈತರ ಸ್ಥಿತಿಗತಿಗಳು ಸುಧಾರಣೆಯಾಗಬೇಕಾದರೆ ಸಾಲ ಮನ್ನಾ – ಬಡ್ಡಿ ಮನ್ನಾ ಜೊತೆಗೆ ಈ ಕೆಳಕಂಡ ಅಂಶಗಳು ಮಹತ್ತರವಾದ ಪೂರಕ ಹಾಗೂ ಪ್ರೇರಕ ಅಂಶಗಳಾಗುತ್ತವೆ ಎಂಬುದು ನನ್ನ ಅಭಿಪ್ರಾಯ.

## ಕೃಷಿ ಕ್ಷೇತ್ರವನ್ನು ಪುನಃಶ್ಚೇತನಗೊಳಿಸಲಿ

ಸುಮಾರು ೬೦ ದಶಕಗಳು ಕಳೆದರೂ ಕೃಷಿಯಲ್ಲಿ ಇನ್ನೂ ಹಲವಾರು ಮಾರ್ಪಾಡುಗಳು ಬಹಳ ಅವಶ್ಯವೆನಿಸಿದ್ದು ಅವುಗಳನ್ನು ವ್ಯವಸ್ಥಿತವಾಗಿ ಸುಧಾರಿಸಲು ಸರ್ಕಾರಗಳು ಮುಂದಾಗಬೇಕು. ಭೂಸುಧಾರಣೆ, ಹಿಡುವಳಿ ಕ್ರೋಢೀಕರಣ ಮುಂತಾದವುಗಳ ವರ್ಗೀಕರಣದ ಅವಶ್ಯಕತೆಯು ಬಹಳ ಅವಶ್ಯಕವಾಗಿದೆ. ಎಲ್ಲಾ ವರ್ಗದ ರೈತರಿಗೆ ಅನುಕೂಲವಾಗುವಂತೆ ಬಂಡವಾಳ ಹೂಡಿಕೆಯನ್ನು ಕ್ರಮಬದ್ಧವಾಗಿ ಹೆಚ್ಚಿಸುವ ಅಗತ್ಯವಿದೆ. ಹೀಗಾದಾಗ ರೈತರ ಸ್ಥಿತಿಗತಿಗಳು ಸ್ವಲ್ಪಮಟ್ಟಿಗೆ ಸುಧಾರಣೆಯಾಗುವ ಸಾಧ್ಯತೆ ಇದೆ. ಉತ್ಪಾದನೆಯನ್ನು ಸುಲಲಿತವಾಗಿ ಹೆಚ್ಚಿಸಲು ಅದಕ್ಕೆ ಸಬ್ಸಿಡಿಗಳ ಅಗತ್ಯವಿದೆ. ಇದನ್ನು ಹಿಂದುಳಿದ ಪ.ಜಾತಿ/ಪಂಗಡ ಸಮುದಾಯದ ಜನಾಂಗಗಳಿಗೆ ಹೆಚ್ಚಿನ ರೀತಿಯಲ್ಲಿ ಸಬ್ಸಿಡಿಯನ್ನು ನೀಡಿದಲ್ಲಿ ಸುಧಾರಣೆ ಸಾಧ್ಯವಾಗಬಹುದು. ಕೃಷಿ ಮಾರುಕಟ್ಟೆಗಳಿಂದ ಕಂಗಾಲಾದ ರೈತರಿಗೆ ಅನುಕೂಲವಾಗುವಂತೆ ಎ.ಪಿ.ಎಂ.ಸಿ ಕೃಷಿ ಮಾರುಕಟ್ಟೆ ತಿದ್ದುಪಡಿಯನ್ನು ತಂದು ದಲ್ಲಾಳಿಗಳ, ಮಧ್ಯವರ್ತಿಗಳ ಸಂಕಷ್ಟದಿಂದ ಪಾರುಮಾಡಲು ಅನುಕೂಲಕರವಾದ ತಿದ್ದುಪಡಿಯನ್ನು ಮಾಡಿದೆ ಎಂದು ಹೇಳಬಹುದು. ಡಾ॥ ಸ್ವಾಮಿನಾಥನ್ ನೇತೃತ್ವದ ಸಮಿತಿಯ ಶಿಫಾರಸ್ಸುಗಳು ರಾಷ್ಟ್ರದಾದ್ಯಂತ ಸಮರ್ಪಕವಾಗಿ ಯಶಸ್ವಿಯಾಗಿ ಜಾರಿಯಾಗಬೇಕು. ಗ್ರಾಮೀಣ ಪ್ರದೇಶಗಳಲ್ಲಿ ಕೆಲಸವಿಲ್ಲದೆ ಬಳಲುತ್ತಿರುವ ಬಡವರಿಗೆ, ದೀನದಲಿತರಿಗೆ ಕೆಲಸ ನೀಡುವ ಉದ್ಯೋಗ ಖಾತ್ರಿಯ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಮಾಡಬೇಕು. ವಿಶೇಷ ಆರ್ಥಿಕ ವಲಯ (ಎಸ್.ಇ.ಜೆಡ್)ಗಳಿಂದ ರೈತರನ್ನು ಮುಕ್ತವಾಗಿಸಬೇಕು. ದೇಶೀಯ ಮಾರುಕಟ್ಟೆಗಳಲ್ಲಿ ಸುಧಾರಣೆಯಾಗಬೇಕು. ಕೃಷಿ ಸಾಲದ ಮೇಲೆ ಬಡ್ಡಿ ದರಕ್ಕೆ ಕಡಿವಾಣ ಬೀಳಬೇಕು. ಆರ್ಥಿಕ ಸಹಾಯ ಸಣ್ಣ ಪ್ರಮಾಣದಿಂದ ಜೀವನ ನಿರ್ವಹಣೆಯ ನಿಟ್ಟಿನೆಡೆಗೆ ಬದಲಾವಣೆಯಾಗಬೇಕು. ಬಡ ಬುಡಕಟ್ಟು ಜನಾಂಗಗಳ ಪ್ರದೇಶಕ್ಕೆ ಸಾಂಸ್ಥಿಕ ಸಾಲ – ಸೌಲಭ್ಯತೆಯ ಅಗತ್ಯತೆ ಇದೆ.

* ಕೃಷಿ ಅಪಾಯ ನಿಧಿ ಜಾರಿ, ಒಂದು ಸಮಗ್ರ ಬೆಳೆ ವಿಮೆ ಜಾರಿ. ಕಿಸಾನ್ ಕ್ರೆಡಿಟ್ ಕಾರ್ಡ್ ವ್ಯವಸ್ಥೆಯನ್ನು ಮಹಿಳಾ ರೈತರಿಗೂ ನೀಡಬೇಕು.
* ತುರ್ತು ಮಾರಾಟ ಸಾಲ–ಸೌಲಭ್ಯ ನೀಡುವುದು.
* ಕುಟುಂಬ ವಿಮಾ ಪಾಲಿಸಿ ಬೆಳೆ ವಿಮೆ ಎಲ್ಲರಿಗೂ ಎಲ್ಲಾ ಕಾಲದಲ್ಲೂ ದೊರೆಯುವಂತಾಗಬೇಕು.
* ಪ್ರತಿಯೊಂದು ಹಳ್ಳಿಯಲ್ಲಿ ಕೃಷಿ ಮಾಹಿತಿ ಕೇಂದ್ರ ತೆರೆಯಬೇಕು.
* ಕೃಷಿಯಲ್ಲಿ ಜೈವಿಕ ತಂತ್ರಜ್ಞಾನದ ಬಗ್ಗೆ ಅರಿವು ನೀಡುವುದರ ಜೊತೆಗೆ ಈ ಎಲ್ಲ ಯೋಜನೆಗಳ ಜಾರಿಯಿಂದ ಕೃಷಿ ಮತ್ತು ಕೃಷಿಕ್ಷೇತ್ರದ ಹಿನ್ನಡೆಯನ್ನು ತಡೆಯಬಹುದು.

ಜಾಗತೀಕರಣ, ಉದಾರೀಕರಣಗೊಂಡ ಆರ್ಥಿಕತೆಯ ಇಂದಿನ ದಿನಗಳಲ್ಲಿ ಕೃಷಿನಿರತ ಶೇ. ೭೦ರಷ್ಟು ಜನತೆಯ ಬದುಕಿಗೆ ಭದ್ರತೆ ಒದಗಿಸಲು ನಾವು ಸೂಕ್ತ ಸಾಂಸ್ಥಿಕ ಸಾಧನ ಮತ್ತು ಕಾರ್ಯನೀತಿಗಳನ್ನು ರೂಢಿಸಬೇಕಾಗಿದೆ. ಈ ಜನ ಬೇಸಾಯ, ಪಶುಸಂಗೋಪನೆ, ಮೀನುಗಾರಿಕೆ, ಅರಣ್ಯ, ಕೃಷಿ ಅಭಿವೃದ್ಧಿಗಳನ್ನು ತಮ್ಮ ಕಸುಬಾಗಿ ಜೀವನ ನಿರ್ವಹಣೆಗೆ ಅನುಕೂಲವಾಗುವಂತೆ ಸುಧಾರಿಸುವುದು ಬಹಳ ಅಗತ್ಯ. ಹಾಗೆಯೇ ಬಜೆಟ್‌ನಲ್ಲಿ ವಿಶೇಷ ಒತ್ತು ನೀಡಬೇಕು. ಹೀಗಾದಾಗ ಮಾತ್ರ ರೈತರ ಸ್ಥಿತಿಗತಿಗಳು ಸುಧಾರಣೆಯಾಗಲು ಸಾಧ್ಯ. ಕೇವಲ ಬಡ್ಡಿ – ಸಾಲ ಮನ್ನಾಗಳಿಂದ ಸಾಮಾನ್ಯ ರೈತರ ಸ್ಥಿತಿಗತಿಗಳ ಸುಧಾರಣೆಯು ಸಾಧ್ಯಕ್ಕಿಂತ ಅಸಾಧ್ಯತೆಯ ಚಿತ್ರಣವೇ ಎದ್ದು ಕಾಣುತ್ತದೆ.

**ಡಾ॥ ಸುರೇಶ ಕೆ. ಪಿ.**
ಅರ್ಥಶಾಸ್ತ್ರ ವಿಭಾಗ, ನ್ಯಾಷನಲ್ ಡಿಗ್ರಿ ಕಾಲೇಜು(ಅಟಾನಮಸ್)
ಬಸವನಗುಡಿ, ಬೆಂಗಳೂರು – ೫೬೦ ೦೦೪

## ಶಶಿಕಾಂತ ಯಡಹಳ್ಳಿ

ಪ್ರಸನ್ನರವರ ಐಡಿಯಾಲಜಿಯ ವಾಸ್ತವತೆ ಹಾಗೂ ಅವಾಸ್ತವತೆಯನ್ನು ಪಕ್ಕಕ್ಕಿಟ್ಟು ರಂಗ ಪ್ರಯೋಗ ಸಾಧ್ಯತೆಗಳನ್ನು ಗಮನಿಸಿದರೆ, ತಮ್ಮ ಯಂತ್ರವಿರೋಧವನ್ನು ದೃಶ್ಯರೂಪದಲ್ಲಿ ಕಟ್ಟಿಕೊಡುವ ನಿರ್ದೇಶಕರ ಪ್ರಯತ್ನವೇ ಅದ್ಭುತವಾಗಿದೆ. ಮಾಮೂಲಿ ನಾಟಕ ರೂಪದಲ್ಲಿ ಈ ವಸ್ತುವನ್ನು ಕಟ್ಟಿ ಕೊಟ್ಟಿದ್ದರೆ ಬೀದಿ ನಾಟಕವಾಗುತ್ತಿತ್ತು. ಯಾಕೆಂದರೆ ಈ ಪ್ರಹಸನದಲ್ಲಿ ಚರ್ಚಿಸಲಾದ ವಸ್ತುವೇ ಸಂದೇಶಾತ್ಮಕವಾಗಿದೆ ಹಾಗೂ ಪ್ರತಿಭಟನಾತ್ಮಕ ವಾಗಿದೆ. ಆದರೆ ಈ ಘೋಷಣಾತ್ಮಕತೆಯನ್ನು ಕಲಾತ್ಮಕವಾಗಿ ಹೇಳಲು ಯಕ್ಷಗಾನ ಕಲಾ ಪ್ರಕಾರವನ್ನು ಬಳಸಲಾಗಿದೆ.

ಹೆಗ್ಗೋಡಿನ ಪ್ರಸನ್ನರವರು ತಮ್ಮ ದೇಸಿತನದ ಆದರ್ಶ ಪರಿಕಲ್ಪನೆಯನ್ನು ನಾಟಕ ರೂಪದಲ್ಲಿ ರಚಿಸಿ ನಿರ್ದೇಶಿಸಿದ್ದಾರೆ. 'ಯಂತ್ರಗಳನ್ನು ಕಳಚೋಣ ಬನ್ನಿ' ಎನ್ನುವುದು ಪ್ರಸನ್ನರವರ ಪ್ರತಿಪಾದನೆಯಾಗಿದ್ದು ಇದಕ್ಕೆ ಪೂರಕವಾಗಿ 'ಯಂತ್ರ ರಾಕ್ಷಸ ಮರ್ದಿನಿ' ಎನ್ನುವ ಈ ನಾಟಕದಲ್ಲಿ ಯಂತ್ರಗಳಿಂದಾಗುವ ಅಪಾಯಗಳು ಹಾಗೂ ಅದರ ಅವಲಂಬನೆಯಿಂದ ಹೊರಬರುವ ಮಾರ್ಗೋಪಾಯಗಳನ್ನು ನೋಡುಗರಿಗೆ ಮನದಟ್ಟುಮಾಡಲು ಪ್ರಯತ್ನಿಸಿದ್ದಾರೆ. ಸಿಜಿಕೆ ಅಂತರರಾಷ್ಟ್ರೀಯ ರಂಗೋತ್ಸವದ ಮೊದಲ ದಿನವಾದ ೨೦೧೫ ಏಪ್ರಿಲ್ ೫ರಂದು 'ಸಂಸ' ಬಯಲು ರಂಗಮಂದಿರದಲ್ಲಿ ಪ್ರದರ್ಶನಗೊಂಡ ಈ ನಾಟಕವನ್ನು 'ರಂಗನಿರಂತರ' ರಂಗತಂಡವು ನಿರ್ಮಿಸಿದೆ.

ಇದನ್ನು ಒಂದು ನಾಟಕ ಎನ್ನುವುದಕ್ಕಿಂತಲೂ ಯಕ್ಷಗಾನ ಪ್ರಸಂಗ ಮಾದರಿಯ ಬೀದಿನಾಟಕ ಎನ್ನಬಹುದಾಗಿದೆ. ಎಲ್ಲಾ ಫಾರ್ಮೆಟ್ ಯಕ್ಷಗಾನದ ಮಾದರಿಯಲ್ಲೇ ಇದ್ದು ಸಬ್ಜೆಕ್ಟ್ ಮಾತ್ರ ಸಮಕಾಲೀನ ಸಮಸ್ಯೆಯನ್ನು ಚರ್ಚಿಸುತ್ತದೆ. ಸಂದೇಶಾತ್ಮಕ ನೆಲೆಯಲ್ಲಿ ಈ ಯಕ್ಷಗಾನ ಪ್ರಹಸನವನ್ನು ಪ್ರೆಸೆಂಟ್ ಮಾಡಲಾಗಿದೆ.

ಆಕೆ ಹಳ್ಳಿಯ ಹೆಂಗಸು, ಹೆಸರು ಸಣ್ಣತಿಮ್ಮಿ. ಯಂತ್ರಗಳನ್ನು ಬಳಸದೇ ಸರಳವಾಗಿ ಬದುಕುತ್ತಿರುವ ಆಕೆ ಯಂತ್ರರಾಕ್ಷಸನಿಗೆ ಬಲು ದೊಡ್ಡ ಸವಾಲು. ಯಂತ್ರ ಮೋಹಕ್ಕೊಳಗಾಗದೇ ನೆಮ್ಮದಿಯಾಗಿ ಬದುಕುತ್ತಿರುವ ಸಣ್ಣತಿಮ್ಮಿಯನ್ನು ಹೇಗಾದರೂ ಮಾಡಿ ಯಂತ್ರಗಳನ್ನು ಬಳಸುವಂತೆ ಮಾಡಲು ಯಂತ್ರರಾಕ್ಷಸ ಏನೇನೆಲ್ಲಾ ಆಸೆ ಆಮಿಷಗಳನ್ನು ತೋರಿಸಿದರೂ ಆಕೆ ಜಗ್ಗುವುದಿಲ್ಲ. ಒತ್ತಡಗಳಿಗೆ ಬಗ್ಗುವುದಿಲ್ಲ. ಕೊನೆಗೆ ಯಂತ್ರರಾಕ್ಷಸನೇ ಸೋತು ಸಣ್ಣತಿಮ್ಮಿಗೆ ಶರಣಾಗುವ ಮೂಲಕ ಪ್ರಸನ್ನರವರು ತಮ್ಮ ಪ್ರತಿಪಾದನೆಯಲ್ಲಿ ಗೆಲುವು ಸಾಧಿಸುತ್ತಾರೆ.

# ಪ್ರಸನ್ನರವರ ಆದರ್ಶವಾದದ ಅನಾವರಣ
## ಯಂತ್ರ ರಾಕ್ಷಸ ಮರ್ದಿನಿ



**ಬೆಳಗಲಿ ಅವರಿಗೆ ಅಭಿನಂದನೆ**

ಹಿರಿಯ ಪತ್ರಕರ್ತ, ಪ್ರಗತಿಪರ ಚಿಂತಕ ಶ್ರೀ ಸನತ್‌ಕುಮಾರ ಬೆಳಗಲಿಯವರು ಈ ಬಾರಿಯ ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ. 'ಹೊಸತು' ಪತ್ರಿಕೆಯ ಬರಹಗಾರರೂ, ಹಿತೈಷಿಗಳೂ ಆಗಿರುವ ಸನತ್‌ಕುಮಾರ ಅವರಿಗೆ 'ಹೊಸತು' ಬಳಗದಿಂದ ಅಭಿನಂದನೆಗಳು. –ಸಂ.

**ಅಭಿನಂದನೆ**

ಡಾ॥ ಎಂ. ಎಸ್. ಪ್ರಭಾಕರ ಅವರು ನಮ್ಮ ನಾಡಿನ ಖ್ಯಾತ ಪತ್ರಕರ್ತರು, ವಿಶ್ಲೇಷಕರು ಮತ್ತು ಚಿಂತಕರು. ಅವರಿಗೆ ಕರ್ನಾಟಕ ಮಾಧ್ಯಮ ಅಕಾಡೆಮಿಯ ವಿಶೇಷ ಉನ್ನತ ಪ್ರಶಸ್ತಿಯನ್ನು ನೀಡಿ ಗೌರವಿಸ ಲಾಗಿದೆ. ಅವರನ್ನು 'ಹೊಸತು' ಆದರ ಪೂರ್ವಕವಾಗಿ ಅಭಿನಂದಿಸುತ್ತದೆ. –ಸಂ.

ಇಲ್ಲಿ ಸಣ್ಣತಿಮ್ಮಿಯ ಪಾತ್ರ ಪ್ರಸನ್ನರವರ ಆಶಯದ ಪ್ರತಿರೂಪವಾಗಿದೆ. ಇಡೀ ನಾಟಕ ಜಾಗತೀಕರಣದ ಕಾಲಘಟ್ಟದಲ್ಲಿ ಅವಾಸ್ತವವೆನಿಸುವ ಆದರ್ಶವಾದವೊಂದರ ರೂಪಕವಾಗಿದೆ. ಈ ರೂಪಕದಲ್ಲಿ ಪ್ರತಿಪಾದಿಸಿದಂತೆ ಯಂತ್ರಗಳ ಮೇಲಿನ ಅವಲಂಬನೆಗಳಿಂದ ಮುಕ್ತವಾಗುವಂತಹ ಸಮಾಜ ನಿರ್ಮಾಣ ನಿಜಕ್ಕೂ ಬಲು ಸುಂದರವಾದ ಕಲ್ಪನೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಅದು ಎಷ್ಟರಮಟ್ಟಿಗೆ ಕಾರ್ಯಸಾಧುವೆಂಬುದೇ ಪ್ರಶ್ನೆ. ಬಹುಶಃ ಈ ನಾಟಕ ನೋಡಿದವರು, ಮಾಡಿದವರು, ಮಾಡಿಸಿದವರು ಎಲ್ಲರೂ ಸಹ ಈ ನಾಟಕ ವಿರೋಧಿಸುವ ಮೊಬೈಲ್, ಇಂಟರ್‌ನೆಟ್, ಈಮೇಲ್ ಬಳಕೆದಾರರೇ ಆಗಿದ್ದಾರೆ. ಪ್ರಸನ್ನರವರನ್ನು ಹೊರತುಪಡಿಸಿ ಪ್ರತಿಯೊಬ್ಬರೂ ಪ್ರತಿದಿನ ಒಂದಿಲ್ಲೊಂದು ಯಂತ್ರಗಳ ಫಲಾನುಭವಿಗಳಾಗಿದ್ದಾರೆ. ನೋಡುಗರಲ್ಲಿ ಆ ಕ್ಷಣದ ಭಾವತೀವ್ರತೆಯನ್ನು ಈ ನಾಟಕ ಸೃಷ್ಟಿಸಿದರೂ ತೀವ್ರ ಬದಲಾವಣೆಯನ್ನೇನೂ ತರಲಾರದು. ಈ ನಾಟಕ ನೋಡುಗರನ್ನು ಚಿಂತನೆಗೆ ತೊಡಗಿಸುವಲ್ಲಿ ಸಫಲವಾಗಿದೆ.

ಈ ಪ್ರಹಸನದ ಆಶಯವನ್ನು ಭಾಗಶಃ ಒಪ್ಪಬಹುದಾದರೂ ಸಂಪೂರ್ಣವಾಗಿ ಒಪ್ಪಲಾಗದು. ಯಾಕೆಂದರೆ ಯಾವುದೇ ಯಂತ್ರ ಇಲ್ಲವೇ ತಂತ್ರಜ್ಞಾನವನ್ನು ಸಮರ್ಥವಾಗಿ ನಿಯಂತ್ರಿತವಾಗಿ ಬಳಸಿದರೆ ಅದರ ಪ್ರಯೋಜನವನ್ನು ಸಮರ್ಪಕವಾಗಿ ಪಡೆಯಬಹುದಾಗಿದೆ. ಕಂಪ್ಯೂಟರ್ ಒಂದು ಯಂತ್ರವಾದ್ದರಿಂದ ಅದನ್ನು ಬಳಸುವುದಿಲ್ಲ ಎಂದರೆ ನಾವಿನ್ನೂ ಒತ್ತು ಮೊಳೆಗಳನ್ನು ಜೋಡಿಸಿ ಮುದ್ರಿಸಬೇಕಾಗಿತ್ತು. ಯಂತ್ರಗಳ ಬಳಕೆಯನ್ನು ವಿರೋಧಿಸುವ ಪ್ರಸನ್ನರವರು ಬರೆದ ಪ್ರತಿಯೊಂದು ಪುಸ್ತಕಗಳೂ ಸಹ ಇದೇ ಕಂಪ್ಯೂಟರ್ ಮೂಲಕವೇ ಡಿಟಿಪಿಗೊಳಗಾಗಿ ಯಂತ್ರಗಳಲ್ಲೇ ಮುದ್ರಣವಾದವುಗಳಾಗಿವೆ. ಇಂಟರ್‌ನೆಟ್ ಬಳಕೆಯನ್ನು ಪ್ರಸನ್ನರವರ ಈ ನಾಟಕ ಲೇವಡಿ ಮಾಡುತ್ತದೆ. ಆದರೆ ಸ್ವತಃ ಪ್ರಸನ್ನರವರು ಫೇಸ್‌ಬುಕ್ ಅಕೌಂಟ್ ತೆರೆದು ಬಳಸುತ್ತಿದ್ದಾರೆ. ಉಪಗ್ರಹಗಳನ್ನು ನಿರಾಕರಿಸಿದರೆ ಪ್ರಕೃತಿ ವಿಕೋಪಗಳ ಕುರಿತು ಮಾಹಿತಿಯೇ ಸಿಗದೇ ಅದೆಷ್ಟೋ ಅವಘಡಗಳಾಗಬಹುದಾಗಿದೆ. ಕೃಷಿಯಲ್ಲಿ ಯಂತ್ರಗಳನ್ನು ಬಳಸುವುದಿಲ್ಲ ಎಂದು ಹಠ ಹಿಡಿದರೆ ಹುಟ್ಟುವ ಜನಸಂಖ್ಯೆಗಳಿಗನುಗುಣವಾಗಿ ಆಹಾರವನ್ನು ಬೆಳೆಯುವುದಾದರೂ ಹೇಗೆ? ಸಂವಹನ, ಪ್ರಸರಣ ಹಾಗೂ ಉತ್ಪಾದನೆ ಮುಂತಾದವುಗಳಿಗೆ ಯಂತ್ರಗಳ ಬಳಕೆ ಅತ್ಯಗತ್ಯವಾಗಿದೆ. ಪ್ರತಿಯೊಂದು ಯಂತ್ರವನ್ನೂ ಸಹ ಸುಖಲೋಲುಪತೆಗೂ ಬಳಸಬಹುದು ಹಾಗೂ ಅನಿವಾರ್ಯತೆಗಳ ಈಡೇರಿಕೆಗೂ ಬಳಸಬಹುದಾಗಿದೆ. ಯಂತ್ರಗಳ ದುರುಪಯೋಗವನ್ನು ವಿರೋಧಿಸಿ ಅತ್ಯಗತ್ಯವೆನಿಸುವ ಕೆಲಸಗಳಿಗೆ ಉಪಯೋಗಿಸಬೇಕಿದೆ. ಯಂತ್ರಗಳ ಬಳಕೆ ನಿಲ್ಲಿಸಿದರೆ ಆಸ್ಪತ್ರೆಗಳಲ್ಲಿ ಸಾವಿನ ಸಂಖ್ಯೆಗಳೇ ಜಾಸ್ತಿಯಾಗುತ್ತವೆ. ಜೀವ ರಕ್ಷಕವಾಗಿ ಪ್ರಯೋಜನಕ್ಕೆ ಬರುವ ಯಂತ್ರಗಳನ್ನು ವಿರೋಧಿಸಲಾಗದು. ಯಂತ್ರಗಳನ್ನು ಸಂಪೂರ್ಣ ತ್ಯಜಿಸಿ ಬದುಕಲು ಸಾಧ್ಯವಿಲ್ಲವಾದರೂ ಈ ನಾಟಕದ ಕೊನೆಗೆ ಹೇಳಿದ ಹಾಗೆ ಯಂತ್ರಗಳೇ ಮನುಷ್ಯನನ್ನು ನಿಯಂತ್ರಿಸುವ ಹಾಗಾಗಬಾರದು ಎನ್ನುವ ಆಶಯವನ್ನು ಒಪ್ಪಬಹುದಾಗಿದೆ.

ಪ್ರಸನ್ನರವರ ಐಡಿಯಾಲಜಿಯ ವಾಸ್ತವತೆ ಹಾಗೂ ಅವಾಸ್ತವತೆಯನ್ನು ಪಕ್ಕಕ್ಕಿಟ್ಟು ರಂಗ ಪ್ರಯೋಗ ಸಾಧ್ಯತೆಗಳನ್ನು ಗಮನಿಸಿದರೆ, ತಮ್ಮ ಯಂತ್ರವಿರೋಧವನ್ನು ದೃಶ್ಯರೂಪದಲ್ಲಿ ಕಟ್ಟಿ ಕೊಡುವ ನಿರ್ದೇಶಕರ ಪ್ರಯತ್ನವೇ ಅದ್ಭುತವಾಗಿದೆ. ಮಾಮೂಲಿ ನಾಟಕ ರೂಪದಲ್ಲಿ ಈ ವಸ್ತುವನ್ನು ಕಟ್ಟಿಕೊಟ್ಟಿದ್ದರೆ ಬೀದಿ ನಾಟಕವಾಗುತ್ತಿತ್ತು. ಯಾಕೆಂದರೆ ಈ ಪ್ರಹಸನದಲ್ಲಿ ಚರ್ಚಿಸಲಾದ ವಸ್ತುವೇ ಸಂದೇಶಾತ್ಮಕವಾಗಿದೆ ಹಾಗೂ ಪ್ರತಿಭಟನಾತ್ಮಕವಾಗಿದೆ. ಆದರೆ ಈ ಘೋಷಣಾತ್ಮಕತೆಯನ್ನು ಕಲಾತ್ಮಕವಾಗಿ ಹೇಳಲು ಯಕ್ಷಗಾನ ಕಲಾಪ್ರಕಾರವನ್ನು ಬಳಸಲಾಗಿದೆ. ಆ ಬಣ್ಣಬಣ್ಣದ ಯಕ್ಷವೇಷ, ಕುಣಿತ, ಚಲನೆ, ಮಾತುಗಾರಿಕೆಗಳು ನೋಡುಗರನ್ನು ಆಕರ್ಷಿಸುತ್ತವೆ. ಜೊತೆಗೆ ಎದೆಬಡಿತ ಹೆಚ್ಚಿಸುವಂತಹ ಚಂಡೆ ಮದ್ದಲೆ ವಾದ್ಯಗಳು ಹಾಗೂ ಭಾಗವತರ ವಿಶಿಷ್ಟವಾದ ಗಾಯನ ಶೈಲಿ ಪ್ರೇಕ್ಷಕರನ್ನು ಮಂತ್ರಮುಗ್ಧಗೊಳಿಸುತ್ತವೆ. ವಿರಾಟರೂಪದ ಯಕ್ಷ ಖಳಪಾತ್ರದ ಜೊತೆಗೆ ಪಂಚ್ ಕೊಡುವ ಮಾತುಗಾರಿಕೆಯ ಹಾಸ್ಯಪಾತ್ರವನ್ನು ಜೊತೆಸೇರಿಸಿ ಪ್ರೇಕ್ಷಕರಿಗೆ ಭರಪೂರ್ ಮನರಂಜನೆಯನ್ನು ಕೊಟ್ಟಿರುವುದರಿಂದ ಇಡೀ ನಾಟಕ ನೋಡಿಸಿ ಕೊಂಡು ಹೋಗುತ್ತದೆ. ಹಾಗೂ ಸಣ್ಣತಿಮ್ಮಿ ಪಾತ್ರದ ಮಾರ್ಮಿಕ ಮಾತುಗಳು ಕೇಳುಗರಲ್ಲಿ ಕಚಗುಳಿ ಇಡುತ್ತವೆ. ನಾಟಕದ ವಸ್ತು ವಿಷಯಕ್ಕಿಂತ ಅದರ ನಿರೂಪಣೆ ಮಾಡಿದ ಕ್ರಮವೇ ಸೊಗಸಾಗಿದೆ. ರಂಜನೆಯ ಮೂಲಕ ಬೋಧನೆಯನ್ನು ಹೇಳುವಲ್ಲಿ 'ಯಂತ್ರ ರಾಕ್ಷಸ ಮರ್ದಿನಿ' ನಾಟಕ ಯಶಸ್ವಿಯಾಗಿದೆ.



ಯಕ್ಷಗಾನ ಪ್ರಸಂಗಗಳಲ್ಲಿ ಹಾಡು ಸಂಗೀತಕ್ಕೆ ಕೊರತೆ ಎಲ್ಲಿದೆ. ಈ 'ಯಂತ್ರ ರಾಕ್ಷಸ...'ದಲ್ಲೂ ಸಹ ಹಾಡುಗಳು ತುಂಬ ಪ್ರಾಸಂಗಿಕವಾಗಿವೆ. ಹಾಡು ಸಂಗೀತಕ್ಕೆ ತಕ್ಕಂತೆ ಯಕ್ಷಪಾತ್ರಗಳ ಕುಣಿತ ಮೇಳೈಸಿ ರಂಗದಂಗಳದಲ್ಲಿ ಸಂಚಲನ ಮೂಡಿಸಿದ್ದಂತೂ ಸುಳ್ಳಲ್ಲ. ಒಂದು ಸಂತಸದ ಸಂಗತಿ ಏನೆಂದರೆ... ಯಕ್ಷಗಾನದ ಭಾಗವತರ ಹಾಡುಗಳು ಕರಾವಳಿ ಕನ್ನಡಿಗರನ್ನು ಹೊರತುಪಡಿಸಿ ಬೇರೆ ಪ್ರದೇಶದವರಿಗೆ ಪೂರ್ಣಪ್ರಮಾಣದಲ್ಲಿ ಅರ್ಥವಾಗುವುದು ಸುಲಭಸಾಧ್ಯವಲ್ಲ. ಆದರೆ... ಈ ಯಂತ್ರ ರಾಕ್ಷಸ ಯಕ್ಷ ಪ್ರಸಂಗದಲ್ಲಿ ಭಾಗವತರ ಹಾಡು ಹಾಗೂ ಮಾತುಗಳು ಸ್ಪಷ್ಟವಾಗಿ ಅರ್ಥವಾಗುತ್ತಿದ್ದು ಎಲ್ಲಾ ಪ್ರದೇಶದಿಂದ ಬಂದ ಕನ್ನಡಿಗರಿಗೆ ಸುಲಭಗ್ರಾಹ್ಯವಾಗಿದ್ದು

ಕಮ್ಯೂನಿಕೇಟ್ ಮಾಡುವುದರಲ್ಲಿ ಈ ಪ್ರಹಸನ ಯಶಸ್ವಿಯಾಗಿದೆ. ಬೆಳಕಿನ ವಿನ್ಯಾಸದಲ್ಲಿ ಯಾವುದೇ ಬದಲಾವಣೆ ಇದ್ದಿರಲಿಲ್ಲ ಹಾಗೂ ಈ ಪ್ರಸಂಗಕ್ಕೆ ಅದರ ಅಗತ್ಯವೂ ಇರಲಿಲ್ಲ. ಯಕ್ಷಗಾನದಲ್ಲಿ ವಿಶೇಷ ರಂಗವಿನ್ಯಾಸದ ಅಗತ್ಯವೂ ಇಲ್ಲವಾದ್ದರಿಂದ ಇಲ್ಲಿಯೂ ಕೂಡ ಯಕ್ಷಗಾನದ ಮಾದರಿಯಲ್ಲೇ ಭಾಗವತರ ಎತ್ತರದ ಟೇಬಲ್ ಹೊರತುಪಡಿಸಿ ಬೇರೆ ಯಾವುದೇ ರೀತಿಯ ಸೆಟ್ ಬಳಕೆಯಾಗಿಲ್ಲ ಹಾಗೂ ಈ ಕಲಾಪ್ರಕಾರಕ್ಕೆ ಅದು ಅವಶ್ಯಕವೂ ಅಲ್ಲ. ಆದರೆ ನಾಟಕದಲ್ಲಿ ಬಳಸಲಾಗುವ ರಂಗತಂತ್ರಗಳು ಇಲ್ಲಿ ಬಳಕೆಯಾಗಿಲ್ಲದಿದ್ದರೂ ಹಾಡು, ಸಂಗೀತ, ಅಭಿನಯ ಹಾಗೂ ಕುಣಿತಗಳು ರಂಗತಂತ್ರಗಳ ಕೊರತೆ ಕಾಣದಂತೆ ವೈಭವೀಕರಣಗೊಂಡಿವೆ.





ಯಾವುದೇ ಯಕ್ಷಗಾನ ಜಾನಪದ ಕಲಾ ಪ್ರಕಾರದಲ್ಲಿ ಜನರನ್ನು ಅತೀ ಹೆಚ್ಚು ರಂಜಿಸುವುದು ಖಳಪಾತ್ರಗಳು ಹಾಗೂ ಹಾಸ್ಯ ಪಾತ್ರಗಳು. ಈ ನಾಟಕದಲ್ಲಿ ಈ ಎರಡು ಪಾತ್ರಗಳನ್ನೇ ಪ್ರಮುಖವಾಗಿ ಎಸ್ಟಾಬ್ಲಿಷ್ ಮಾಡಿದ್ದರಿಂದ ಪ್ರೇಕ್ಷಕರ ರಂಜನೆಗೆ ಕೊರತೆ ಇರಲಿಲ್ಲ. ಹಿಮ್ಮೇಳದಲ್ಲಿ ಉದಯ ಜ್ಯೋತಿಗುಡ್ಡರವರ ಭಾಗವತಿಕೆ, ರಾಘವೇಂದ್ರ ಬಿಡುವಾಳರವರ ಚಂಡೆ ಹಾಗೂ ಸುರೇಂದ್ರರವರ ಮದ್ದಲೆಯ ಜುಗಲ್ಬಂದಿಯನ್ನು ಈ ನಾಟಕ ನೋಡಿಯೇ ಅನುಭವಿಸಬೇಕು. ರಾಧಾಕೃಷ್ಣ ಉರಾಳರು ಯಂತ್ರ ರಾಕ್ಷಸನಾಗಿ ಅದ್ಭುತ ಕುಣಿತದ ಜೊತೆಗೆ ಅಭಿನಯಿಸಿ ನೋಡುಗರ ಆಕರ್ಷಣೆಯ ಕೇಂದ್ರಬಿಂದುವಾದರು. ಉರಾಳರಿಗೆ ಪೈಪೋಟಿ ಕೊಡುವಂತೆ ವಿದೂಷಕ ಪಾತ್ರದಲ್ಲಿ ಶ್ರೀನಾಥರವರು ನಟಿಸಿದ್ದಾರೆ. ಸಣ್ಣತಿಮ್ಮಿಯ ಪಾತ್ರದಲ್ಲಿ ದು. ಸರಸ್ವತಿಯವರು ಆಂಗಿಕಾಭಿನಯಕ್ಕಿಂತಲೂ ವಾಚಿಕಾಭಿನಯ ಹಾಗೂ ಸಾತ್ವಿಕಾಭಿನಯದಲ್ಲಿ ಗಮನ ಸೆಳೆಯುತ್ತಾರೆ. ಮೂರೇ ಪ್ರಮುಖ ಪಾತ್ರಗಳನ್ನು ಇಟ್ಟುಕೊಂಡು ಜಾಗತಿಕ ಸಮಸ್ಯೆಯೊಂದನ್ನು ಯಕ್ಷ ಪ್ರಹಸನ ರೂಪದಲ್ಲಿ ಕಟ್ಟಿ ಕೊಟ್ಟ ನಿರ್ದೇಶಕರ ಕ್ರಿಯಾಶೀಲತೆ ಅಭಿನಂದನಾರ್ಹವಾಗಿದೆ. ಅದಕ್ಕಿಂತಲೂ ಹೆಚ್ಚಾಗಿ ತಾವು ನಂಬಿ ಆಚರಿಸುತ್ತಿರುವ ಸಿದ್ಧಾಂತವೊಂದನ್ನು ರಂಗ ರೂಪದಲ್ಲಿ ತಂದು ತಮ್ಮ ಚಿಂತನೆಗಳನ್ನು ಜನರಿಗೆ ತಲುಪಿಸುತ್ತಿರುವ ಪ್ರಸನ್ನರವರ ಮಹತ್ವಾಕಾಂಕ್ಷೆ ಬಲು ದೊಡ್ಡದು.

ಯಂತ್ರಗಳ ಮೇಲಿನ ಮನುಷ್ಯರ ಅವಲಂಬನೆ ಹೆಚ್ಚುತ್ತಿರುವ ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಈ 'ಯಂತ್ರ ರಾಕ್ಷಸ ಮರ್ದಿನಿ' ನಾಟಕವು ಯಂತ್ರಗಳು ಸೃಷ್ಟಿಸಬಹುದಾದ ಅಪಾಯಗಳ ಕುರಿತು ಒಂದು ಪ್ರಾತ್ಯಕ್ಷಿಕೆಯನ್ನು ಯಕ್ಷಪ್ರಸಂಗ ರೂಪದಲ್ಲಿ ಪ್ರೇಕ್ಷಕರಿಗೆ ಮನದಟ್ಟು ಮಾಡಿಕೊಡುವ ನಿಟ್ಟಿನಲ್ಲಿ ಪ್ರಯತ್ನಿಸುತ್ತದೆ. ಈ ನಾಟಕ ನೋಡಿದವರು ಮೊಬೈಲ್, ಕಂಪ್ಯೂಟರ್, ಇಂಟರ್‌ನೆಟ್ ಮೊದಲಾದ ಆಧುನಿಕ ಯಂತ್ರಗಳನ್ನು ಬಳಸುವುದನ್ನು ಬಿಡುತ್ತಾರೆನ್ನುವುದು ಭ್ರಮೆಯಾದರೂ ಜನರು ಯಂತ್ರಗಳ ಗುಲಾಮರಾಗದಂತೆ ಎಚ್ಚರಿಸುವಲ್ಲಿ ಈ ನಾಟಕ ಸಫಲವಾಗಿದೆ. ಆದರೆ ಯಾರು ಏನೇ ಹೇಳಲಿ, ಹೇಳಲು ಕೇಳಲು ಪ್ರಸನ್ನರವರ ಯಂತ್ರವಿರೋಧಿವಾದ ತುಂಬ ಚೆನ್ನಾಗಿದೆ ಆದರ್ಶಮಯವಾಗಿದೆ. ಆದರೆ... ಅನುಕರಣೆಗೆ ಆಚರಣೆಗೆ ಅಪ್ರಾಯೋಗಿಕವಾಗಿದೆ. ಈಗ ಬೇಕಾಗಿರುವುದು ಯಂತ್ರಗಳನ್ನು ಕಳಚುವುದಲ್ಲ. ಅದು ಎಲ್ಲರಿಗೂ ಸಾಧ್ಯವೂ ಇಲ್ಲ. ಯಂತ್ರಗಳು ಈಗ ಜನರ ನಾಡಿಮಿಡಿತವಾಗಿವೆ. ಸಮಾಜದ ಅವಿಭಾಜ್ಯ ಅಂಗಗಳಾಗಿವೆ. ಜನರು ಯಂತ್ರಗಳ ಗುಲಾಮರಾಗದೇ ಅಗತ್ಯವಿದ್ದಷ್ಟು ಬಳಸುವುದು ಹೇಗೆ, ನಮ್ಮ ಮುಂದಿನ ಜನಾಂಗವನ್ನು ಯಂತ್ರಗಳು ಆಳದಿರುವ ಹಾಗೆ ನೋಡಿಕೊಳ್ಳುವುದು ಹೇಗೆ ಎಂದು ಜನರಲ್ಲಿ ವಿವೇಚನೆ ಮೂಡಿಸುವುದೊಂದೆ ಈಗ ಇರುವ ಮಾರ್ಗವಾಗಿದೆ. ಯಂತ್ರಗಳಿಗಿಂತಲೂ ಯಂತ್ರಗಳ ಪ್ರಮೋಟರ್ಸ್‌ಗಳಿದ್ದಾರಲ್ಲ ಬಂಡವಾಳ ಶಾಹಿಗಳು ಹಾಗೂ ಸಾಮ್ರಾಜ್ಯಶಾಹಿಗಳು ಅವರನ್ನು ಮೊದಲು ರಂಗಮಾಧ್ಯಮಗಳಲ್ಲಿ ಬೆತ್ತಲೆ ಮಾಡಬೇಕಿದೆ. ಸರಕು ಸಂಸ್ಕೃತಿಯನ್ನು ಮೊದಲು ಶತಾಯ ಗತಾಯ ವಿರೋಧಿಸಬೇಕಿದೆ. ಸ್ವದೇಶಿ ನಿರ್ಮಿತ ಯಂತ್ರಗಳನ್ನು ಬಳಸುವ ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಉತ್ಪನ್ನಗಳನ್ನು ಬಹಿಷ್ಕರಿಸುವ ಕುರಿತು ಜಾಗೃತಿ ಮೂಡಿಸುವಲ್ಲಿ ಪ್ರಸನ್ನರಂತಹ ಹೋರಾಟಗಾರರು ಶ್ರಮಿಸುವ ಅಗತ್ಯತೆ ಇದೆ. ಇದು ಬಿಟ್ಟು ಟಿ.ವಿ. ಬಳಸಬೇಡಿ, ಮೊಬೈಲ್ ಬಿಸಾಕಿ, ಕಂಪ್ಯೂಟರ್ ತೊರೆಯಿರಿ... ಎಂದೆಲ್ಲಾ ನಾಟಕದ ಮೂಲಕ ಹೇಳಿದರೆ ಜನ ನಾಟಕ ನೋಡಿ ನಕ್ಕುಬಿಡುತ್ತಾರೆಯೇ ಹೊರತು ಬದಲಾಗುವುದಿಲ್ಲ. ಯಾವುದು ಆಯಾ ಕಾಲಕ್ಕೆ ಪ್ರ್ಯಾಕ್ಟಿಕಲ್ ಎನ್ನಿಸುತ್ತದೋ ಅವುಗಳನ್ನು ಬೋಧಿಸಿದರೆ ಜನರು ಆಲೋಚಿಸುತ್ತಾರೆ. ಯಾವ ಯಂತ್ರವನ್ನು ಬಳಸಬೇಕು ಯಾವುದನ್ನು ಬಳಸಬಾರದು, ಎಷ್ಟು ಬಳಸಬೇಕು ಎಷ್ಟು ಬಿಡಬೇಕು... ಎನ್ನುವುದರ ಕುರಿತ ಅರಿವನ್ನು ಜನರಲ್ಲಿ ಮೂಡಿಸುವ ಕೆಲಸ ಅಗತ್ಯವಾಗಿ ಆಗಬೇಕಿದೆ. ಈ ನಿಟ್ಟಿನತ್ತ ಪ್ರಸನ್ನರವರು ಚಿತ್ತಹರಿಸಬೇಕಷ್ಟೇ.

ಒಂದು ಸಂತಸದ ಸಂಗತಿ ಏನೆಂದರೆ ಒಂದೇ ಒಂದು ರೂಪಾಯಿ ಸಂಭಾವನೆಯನ್ನೂ ಪಡೆಯದೇ ಪ್ರಸನ್ನರವರು ಈ ಯಕ್ಷ ಪ್ರಸಂಗವನ್ನು 'ರಂಗನಿರಂತರ' ತಂಡಕ್ಕಾಗಿ ನಿರ್ದೇಶಿಸಿದ್ದಾರೆ. ಇದು ಪ್ರಸನ್ನರವರ ನಿರ್ದೇಶನದ ನಾಟಕ ಎನ್ನುವುದಕ್ಕಿಂತಲೂ ಅವರ ಮಾರ್ಗದರ್ಶನದಲ್ಲಿ ತಯಾರಾದ ನಾಟಕ ಎನ್ನುವುದು ಉತ್ತಮ. ಯಾಕೆಂದರೆ ಈ ನಾಟಕದ ಕಾನ್ಸೆಪ್ಟನ್ನು ಪ್ರಸನ್ನರವರು ದು. ಸರಸ್ವತಿಯವರಿಗೆ ಹೇಳಿದ್ದಷ್ಟೇ, ಉಳಿದದ್ದೆಲ್ಲವನ್ನೂ ದು. ಸರಸ್ವತಿ ಹಾಗೂ ಉರಾಳರು ಇಂಪ್ರುವೈಸ್ ಮಾಡಿಕೊಂಡಿದ್ದಾರೆ. ಕೊನೆಗೆ ಎರಡು ದಿನಗಳ ಕಾಲ ಇಡೀ ರಂಗ ತಂಡದ ಕಲಾವಿದರು, ಹಾಡುಗಾರರು, ಸಂಗೀತಗಾರರು... ಪ್ರಸನ್ನರವರು ಹೋರಾಟ ಮಾಡುತ್ತಿರುವ ಬದನವಾಳುವಿಗೆ ಹೋಗಿ ಪ್ರಸನ್ನರವರಿಂದ ಫೈನಲ್ ಟಚ್‌ಅಪ್ ಮಾಡಿಸಿಕೊಂಡಿದ್ದಾರೆ. ಹೀಗಾಗಿ ಈ ನಾಟಕ ಕಟ್ಟಿದ ಕ್ರೆಡಿಟ್ ಪ್ರಸನ್ನರವರಷ್ಟೇ ದು. ಸರಸ್ವತಿ ಹಾಗೂ ರಾಧಾಕೃಷ್ಣ ಉರಾಳರಿಗೆ ಸಲ್ಲಬೇಕು. ಕಲಾವಿದರಿದ್ದಲ್ಲಿ ನಿರ್ದೇಶಕರು ಹೋಗಿ ನಾಟಕ ಕಲಿಸುವುದು ರೂಢಿ. ಆದರೆ ಚಳುವಳಿಯಲ್ಲಿ ತೊಡಗಿಸಿಕೊಂಡ ಪ್ರಸನ್ನರವರು ರಂಗ ನಿರ್ದೇಶನವನ್ನೂ ಮಾಡಬೇಕೆಂದರೆ ರಂಗತಂಡವೇ ಅವರಿದ್ದಲ್ಲಿ ಹೋಗಿ ಅವರಿಗೆ ಸಮಯ ಸಿಕ್ಕಾಗ ನಾಟಕವನ್ನು ಸಿದ್ಧಗೊಳಿಸಿಕೊಳ್ಳುವ ಅನಿವಾರ್ಯತೆ ಇದೆ. ರಂಗಭೂಮಿಗೆ ಈ ರೀತಿಯಲ್ಲಾದರೂ ಪ್ರಸನ್ನರವರು ಕೊಡುಗೆ ಕೊಡಲಿ. ರಂಗತಂಡದವರೇ ಅವರಿದ್ದಲ್ಲಿಗೆ ಹೋಗಿ ನಾಟಕಗಳನ್ನು ನಿರ್ಮಿಸಲಿ ಎಂದು ಆಶಿಸಬಹುದಾಗಿದೆ. ಯಂತ್ರ ರಾಕ್ಷಸ ಮರ್ದನ ಎನ್ನುವ ಭಗೀರಥ ಪ್ರಯತ್ನ ನಿರತ ಪ್ರಸನ್ನರವರು ಒಂದಿಷ್ಟು ಭ್ರಷ್ಟಾಚಾರ ರಾಕ್ಷಸ ಮರ್ದನದತ್ತಲೂ ತಮ್ಮ ಚಿತ್ತಹರಿಸಿ ಭ್ರಷ್ಟಾಚಾರ ಮುಕ್ತ ಕರ್ನಾಟಕವನ್ನು ನಿರ್ಮಿಸಲು ಶ್ರಮಿಸಲಿ ಎನ್ನುವುದು ಕನ್ನಡ ರಂಗಭೂಮಿಯವರ ಅಂತರಂಗದ ಆಸೆಯಾಗಿದೆ.

**ಶಶಿಕಾಂತ ಯಡಹಳ್ಳಿ**
'ಪ್ರಗತಿ ನಿವಾಸ', ನಂ. ೧೩೧, ರಾಮ ಟೆಂಪಲ್ ಸ್ಟ್ರೀಟ್
ದೊಮ್ಮಲೂರು ವಿಲೇಜ್, ಬೆಂಗಳೂರು – ೫೬೦ ೦೭೧





ನೆತನ್ಯಾಹು



# ಯೆಮೆನ್ ಯಾದವಿ ಕಲಹ, ಇಸ್ರೇಲ್ ಪ್ರಧಾನಿ ಪುನರಾಯ್ಕೆ ಆತಂಕಕಾರಿ

ಪಶ್ಚಿಮ ಏಶಿಯಾದ ದೇಶಗಳಲ್ಲಿ ಎಲ್ಲಿ, ಯಾವಾಗ, ಏನಾಗುತ್ತದೆ ಎನ್ನುವುದನ್ನು ಕಲ್ಪಿಸಿಕೊಳ್ಳುವುದೂ ಕಷ್ಟ. ಎರಡನೇ ಮಹಾಯುದ್ಧದ ನಂತರ ಈ ಪ್ರದೇಶದಲ್ಲಿ ಶಾಂತಿಯ ವಾತಾವರಣವೇ ಅಪರೂಪ. ಅದರಲ್ಲೂ ಕಳೆದ ಹತ್ತು ವರ್ಷಗಳಲ್ಲಂತೂ ಈ ಭಾಗದ ಒಂದೆರಡು ದೇಶಗಳನ್ನು ಬಿಟ್ಟರೆ ಉಳಿದೆಲ್ಲ ದೇಶ ಗಳಲ್ಲಿ ಅಂತರ್ಯುದ್ಧದ ಪರಿಸ್ಥಿತಿ ಉಂಟಾಗಿತ್ತು. ಈಜಿಪ್ಟ್, ಸಿರಿಯ, ಇರಾಕ್, ಲಿಬಿಯ ಮೊದಲಾದ ದೇಶಗಳು ಅನುಭವಿಸಿದ, ಅನುಭವಿಸುತ್ತಿರುವ ತಳಮಳವನ್ನು ಅದಕ್ಕೆ ಉದಾಹರಿಸಬಹುದು. ಅರಬ್ ರಾಷ್ಟ್ರಗಳ ಪ್ರತಿರೋಧದ ನಡುವೆ ಇಸ್ರೇಲ್ ರಾಜ್ಯದ ಸ್ಥಾಪನೆ, ಅದಕ್ಕೆ ಅಮೆರಿಕದ ಸಂಪೂರ್ಣ ಬೆಂಬಲ, ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಗೆ ನಕಾರ ಈ ಪ್ರದೇಶದಲ್ಲಿ ಅಶಾಂತಿಗೆ ಮುಖ್ಯ ಕಾರಣ. ಇದರ ಜೊತೆಗೆ ತೈಲ ರಾಜಕಾರಣವೂ ಸೇರುತ್ತದೆ. ಈ ಪ್ರದೇಶದಲ್ಲಿರುವಷ್ಟು ಅಮೆರಿಕದ ಸೇನೆ ಬೇರೆಲ್ಲೂ ಇಲ್ಲ. ಈಗ ಪರ್ಶಿಯನ್ ಕೊಲ್ಲಿಯ ರಾಷ್ಟ್ರ ಯೆಮೆನ್‌ನ ಸರದಿ.

ಈಚೆಗೆ ಈ ಭೂಭಾಗದಲ್ಲಿ ಮೂರು ಗಮನಾರ್ಹವಾದ ಬೆಳವಣಿಗೆಗಳು ಸಂಭವಿಸಿವೆ. ಮೊದಲನೆಯದು ಯೆಮೆನ್ ರಾಜ್ಯದಲ್ಲಿ ನಡೆಯುತ್ತಿರುವ ಯಾದವಿ ಕಲಹ. ಎರಡನೆಯದು ಇಸ್ರೇಲಿನಲ್ಲಿ ಮತ್ತೆ ಪ್ರಧಾನಿ ನೆತನ್ಯಾಹು ನೇತೃತ್ವದ ಲಿಕುಡ್ ಪಕ್ಷ ಅಧಿಕಾರಕ್ಕೆ ಬಂದಿರುವುದು. ಮೂರನೆಯದು ಅಮೆರಿಕ ಮತ್ತು ಇರಾನ್ ನ್ಯೂಕ್ಲಿಯರ್ ಒಪ್ಪಂದ. ಮೊದಲೆರಡು ಆತಂಕಕಾರಿ ಬೆಳವಣಿಗೆಯಾದರೆ ಮೂರನೆಯದು ಸ್ವಾಗತಾರ್ಹವಾದ್ದು.

ಇರಾನ್‌ನ ನ್ಯೂಕ್ಲಿಯರ್ ಶಕ್ತಿಯ ವಿಚಾರದಲ್ಲಿ ಕಳೆದ ಕೆಲ ವರ್ಷಗಳಿಂದ ಅಮೆರಿಕದೊಂದಿಗೆ ಸಂಬಂಧಗಳೂ ತೀವ್ರವಾಗಿ ಹದಗೆಟ್ಟಿದ್ದುವು. ಪ್ರಧಾನವಾಗಿ ಷಿಯಾ ಪಂಗಡದ ಮುಸಲ್ಮಾನರ ನೇತೃತ್ವದಲ್ಲಿರುವ ಇರಾನ್ ತೈಲೋತ್ಪಾದನೆಯಲ್ಲಿ ಪ್ರಮುಖ ರಾಷ್ಟ್ರಗಳಲ್ಲಿ ಒಂದು. ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎನ್ನುವುದು ಅಮೆರಿಕದ ಆರೋಪ. ತಾನು ನ್ಯೂಕ್ಲಿಯರ್ ಶಕ್ತಿಯನ್ನು ಶಾಂತಿಯುತ ಉದ್ದೇಶಗಳಿಗಾಗಿ ಬಳಸುತ್ತಿದ್ದೇನೆ ಎನ್ನುವುದು ಇರಾನ್‌ನ ವಾದ. ಈ ವಿವಾದ ಒಂದು ಹಂತದಲ್ಲಿ ಎರಡೂ ದೇಶಗಳು ಸಂಘರ್ಷಕ್ಕಿಳಿಯುವ ಮಟ್ಟವನ್ನೂ ತಲಪಿತ್ತು. ನ್ಯೂಕ್ಲಿಯರ್ ಶಸ್ತ್ರ ಸೋರಿಕೆ ಒಪ್ಪಂದಕ್ಕೆ ಸಹಿ ಹಾಕಿರುವ ಇರಾನ್‌ನ ನ್ಯೂಕ್ಲಿಯರ್ ಕೇಂದ್ರಗಳಿಗೆ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಆಯೋಗದ ಅಧಿಕಾರಿಗಳು ಹಲವು ಬಾರಿ ಭೇಟಿ ನೀಡಿ ವರದಿ ಸಲ್ಲಿಸಿದ್ದಾಗ್ಯೂ ಅಮೆರಿಕ ಮಾತ್ರ ತನ್ನ ಪಟ್ಟು ಸಡಿಲಿಸಿರಲಿಲ್ಲ. ಆರೋಪವನ್ನು ಮಾಡಿ ಹಗೆತನವನ್ನು ಸಾಧಿಸುತ್ತಲೇ ಇತ್ತು. ಅರಬ್ ರಾಷ್ಟ್ರಗಳ ಪೈಕಿ ಇರಾನ್ ಇಸ್ರೇಲಿನ ಕಟ್ಟಾ ವಿರೋಧಿ ಮತ್ತು ಪ್ಯಾಲಸ್ತೀನಿಯನ್ನರ ವಿಮೋಚನಾ ಹೋರಾಟದ ಬೆಂಬಲಿಗ. ಇದೂ ಕೂಡ ಅಮೆರಿಕದೊಂದಿಗೆ ವಿರಸಕ್ಕೆ ಕಾರಣಗಳಲ್ಲಿ ಒಂದು. ಹಾಗಾಗಿ ಈಚೆಗೆ ಈ ಎರಡೂ ದೇಶಗಳು ನಡೆಸಿದ ಮಾತುಕತೆಗಳು ಫಲಕಾರಿಯಾಗಿ ಒಂದು ಒಪ್ಪಂದವಾಗಿರುವುದು ಉತ್ತಮವಾದ ಬೆಳವಣಿಗೆ. ಈ ಒಪ್ಪಂದ ಕಾರ್ಯಗತವಾಗಲು ಏನೇನು ಅಡ್ಡಿ–ಆತಂಕಗಳನ್ನು ಎದುರಿಸಬೇಕಾಗುತ್ತದೊ. ಅದೇನೇ ಇದ್ದರೂ ಈ ಪ್ರದೇಶದಲ್ಲಿ ಶಾಂತಿ ಸ್ಥಾಪನೆಯ ದಿಶೆಯಲ್ಲಿ ಅದು ಕಾರ್ಯಗತವಾಗಬೇಕು.

ಒಂದು ಕಾಲದಲ್ಲಿ ಭಾರತ ಮತ್ತು ಆಫ್ರಿಕಾಗಳ ಮಧ್ಯೆ ವಾಣಿಜ್ಯ ಕೊಂಡಿಯಾಗಿದ್ದ ಯೆಮೆನ್ ಈ ಪ್ರದೇಶದಲ್ಲಿ ಬಡರಾಷ್ಟ್ರ. ಮೂರು ದಶಕಗಳ ಹಿಂದೆ ಇಲ್ಲಿ ತೈಲನಿಕ್ಷೇಪ ಪತ್ತೆಯಾಗಿದ್ದರೂ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಸುಧಾರಿಸಿಲ್ಲ. ಇದುವರೆಗೆ ಶಾಂತಿಯಿಂದಿದ್ದ ಈ ಅರಬ್ ರಾಷ್ಟ್ರ ಈಗ ಸುನ್ನಿ–ಷಿಯಾ ಪಂಗಡಗಳ ರಣರಂಗ ವಾಗಿದೆ. ಅಧ್ಯಕ್ಷ ಅಬೆದ್ ರಬ್ಬೊ ಮನ್ಸೂರ್‌ಹದಿ ಅವರ ಪರ ಇರುವ ಭದ್ರತಾ ಪಡೆಗಳು ಮತ್ತು ಮಾಜಿ ಅಧ್ಯಕ್ಷ ಆಲಿ ಅಬ್ದುಲ್ಲಾ ಸಲೇಹ ಅವರಿಗೆ ನಿಷ್ಠವಾಗಿರುವ ಪಡೆಯ ಬೆಂಬಲ ಪಡೆದಿರುವ ಹೂತಿ ಬಂಡುಕೋರರ ಮಧ್ಯೆ ಸಂಘರ್ಷ ಏರ್ಪಟ್ಟಿದೆ. ಈಗಾಗಲೆ ಬಂಡುಕೋರರು ದೇಶದ ಹಲವು ಭಾಗಗಳನ್ನು ವಶಪಡಿಸಿಕೊಂಡಿದ್ದಾರೆ. ಷಿಯ ಮತ್ತು ಸುನ್ನಿ ಪಂಗಡಗಳ ನಡುವಿನ ಈ ಸಂಘರ್ಷ ಒಂದು ಬಗೆಯಲ್ಲಿ ಸೌದಿ ಅರೇಬಿಯ ಮತ್ತು ಇರಾನ್‌ಗಳ ನಡುವಣ ಪರೋಕ್ಷ ಯುದ್ಧವಾಗಿ ಪರಿಣಮಿಸಿದೆ. ಸೌದಿಅರೇಬಿಯ ಸುನ್ನಿ ಮುಸಲ್ಮಾನರ ಬೆಂಬಲಿಗನಾಗಿ ಬಂಡುಕೋರರ ವಿರುದ್ಧ ಬಾಂಬು ದಾಳಿ ನಡೆಸುತ್ತಿದ್ದರೆ, ಇರಾನ್ ಷಿಯಾ ಬಂಡುಕೋರರಿಗೆ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತಿದೆ. ಈ ಸಮರದಲ್ಲಿ ತೊಂದರೆಗೆ ಈಡಾಗಿರುವವರು, ಸಾಯುತ್ತಿರುವವರು ಜನಸಾಮಾನ್ಯರು. ಇಲ್ಲಿ ಉದ್ಯೋಗದಲ್ಲಿದ್ದ ಸಹಸ್ರಾರು ಮಂದಿ ಭಾರತೀಯ ಸಂಜಾತರು ಈಗಾಗಲೇ ಭಾರತಕ್ಕೆ ಆಗಮಿಸಿದ್ದಾರೆ. ಅಂತರ್ಯುದ್ಧೋಪಾದಿಯಲ್ಲಿ ನಡೆಯುತ್ತಿರುವ ಈ ಸಂಘರ್ಷ ಯಾವ ತಿರುವು ಪಡೆದುಕೊಳ್ಳುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ. ಯೆಮೆನ್ ಬಿಕ್ಕಟ್ಟನ್ನು ಬಗೆಹರಿಸಲು ಅಂತರರಾಷ್ಟ್ರೀಯ ಸಮುದಾಯ ಸೂಕ್ತ ಕ್ರಮ ಕೈಗೊಳ್ಳುವುದು ಅಗತ್ಯವಾಗಿದೆ.

ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯ ಕಡುವಿರೋಧಿ, ಉಗ್ರ ಬಲಪಂಥೀಯ ಬೆಂಜಮಿನ್ ನೆತನ್ಯಾಹು ಇಸ್ರೇಲ್ ಪ್ರಧಾನಿಯಾಗಿ ಪುನರಾಯ್ಕೆಯಾಗಿದ್ದಾರೆ. ಅವರ ನೇತೃತ್ವದ ಲಿಕುಡ್ ಪಕ್ಷ ೩೦ ಸ್ಥಾನಗಳನ್ನು ಪಡೆದುಕೊಂಡು ಅತಿ ದೊಡ್ಡ ಪಕ್ಷವಾಗಿ ಹೊರಹೊಮ್ಮಿದೆ. ಇತರ ಬಲಪಂಥೀಯ ಪಕ್ಷಗಳ ಬೆಂಬಲದಿಂದ ಅವರು ಅಧಿಕಾರಕ್ಕೇರಿದ್ದಾರೆ. ಚುನಾವಣೆಗಳಲ್ಲಿ ನೆತನ್ಯಾಹು ಪಕ್ಷದ ಸೋಲು ಖಚಿತ ಎಂದೇ ನಿರೀಕ್ಷಿಸಲಾಗಿತ್ತು. ಆದರೆ ಅದನ್ನು ಮೀರಿ ಅಧಿಕಾರದಲ್ಲಿರುವ ಲಿಕುಡ್ ಪಕ್ಷ ಜಯಗಳಿಸಿದೆ. ಇದು ಈ ಪ್ರದೇಶದಲ್ಲಿ ಶಾಂತಿಗೆ ಅನುಕೂಲವೇನಾಗುವುದಿಲ್ಲ. ಪ್ರಧಾನಿ ನೆತನ್ಯಾಹು ಈಗಾಗಲೇ ತಾವು ಅಧಿಕಾರದಲ್ಲಿರುವವರೆಗೆ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯಾಗದು ಎಂಬುದಾಗಿ ಬಹಿರಂಗವಾಗಿಯೇ ಘೋಷಿಸಿದ್ದಾರೆ. ಇದುವರೆಗೆ ಅವರು ಅಧಿಕಾರದಲ್ಲಿದ್ದಾಗ ಪ್ಯಾಲಸ್ತೀನಿಯನ್ನರ ಮೇಲೆ ನಡೆದ ದಬ್ಬಾಳಿಕೆ ಮಿತಿಮೀರಿದ್ದಾಗಿತ್ತು. ಪ್ಯಾಲಸ್ತೈನ್‌ಗೆ ಸೇರಬೇಕಾಗಿರುವ ಹಲವು ಪ್ರದೇಶಗಳಲ್ಲಿ ಅವರು ಹೊಸದಾಗಿ ಯೆಹೂದ್ಯ ಬಡಾವಣೆಗಳನ್ನು ನಿರ್ಮಿಸಿದ್ದಾರೆ. ಅಮೆರಿಕದ ಪೂರ್ಣ ಬೆಂಬಲವಿರುವುದರಿಂದ ಇಸ್ರೇಲ್ ಏಕಾಂಗಿಯಾಗಿ ಅರಬ್ ದೇಶಗಳ ದ್ವೇಷವನ್ನು ಎದುರಿಸುತ್ತ ಬಂದಿದೆ. ಪುನರಾಯ್ಕೆಗೊಂಡಿರುವ ನೆತನ್ಯಾಹು ಇನ್ನಷ್ಟು ಹೆಚ್ಚು ಉಗ್ರ ನೀತಿ ಅನುಸರಿಸುವುದರಲ್ಲಿ ಸಂಶಯವಿಲ್ಲ. ಇದು ನಿಜಕ್ಕೂ ಆತಂಕಕಾರಿ ಬೆಳವಣಿಗೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಕಡುಬಡತನ ಪ್ರಜಾಪ್ರಭುತ್ವಕ್ಕೆ ದೊಡ್ಡ ಅಡ್ಡಿ

ರಾಷ್ಟ್ರದಲ್ಲಿ ಕಾನೂನು ಸುವ್ಯವಸ್ಥೆಯನ್ನು ರಕ್ಷಿಸಿ ಕಾಪಾಡುವುದು ಪ್ರಜಾಪ್ರಭುತ್ವದ ಯಶಸ್ಸಿಗೆ ಬಹಳ ಸಹಾಯಕಾರಿಯಾಗುತ್ತಿದೆ. ಕಾನೂನು ಮತ್ತು ಸುವ್ಯವಸ್ಥೆ ಇಲ್ಲದಿದ್ದಾಗ ನಿರಂಕುಶ ಪ್ರಭುತ್ವ ಅಸ್ತಿತ್ವಕ್ಕೆ ಬರುವ ಸಾಧ್ಯತೆಯುಂಟು. ಜನರು ಕಾನೂನಿಗೆ ಅಗೌರವ ತೋರಿಸುವುದು, ಕಾನೂನನ್ನು ಕಡೆಗಣಿಸುವುದು ಸರ್ವೇಸಾಮಾನ್ಯವಾಗಿದೆ. ಇಂತಹ ಧೋರಣೆ ಪ್ರಜಾಪ್ರಭುತ್ವದ ಯಶಸ್ಸಿಗೆ ಮಾರಕವಾಗಲಿದೆ. ಕಾನೂನನ್ನು ಕಡೆಗಣಿಸುವ ಜನರ ಈ ರೀತಿಯ ಪ್ರವೃತ್ತಿಯನ್ನು ತಡೆದು, ಕಾನೂನನ್ನು ಜಾರಿಗೆ ತರುವುದು ಪ್ರಜಾಪ್ರಭುತ್ವದ ಬಲವರ್ಧನೆಗೆ ಸಹಾಯಕಾರಿಯಾಗುತ್ತದೆ. ಅಲ್ಲದೆ, ಸೂಕ್ತ ಕಾನೂನನ್ನು ಗೌರವಿಸುವಂತಹ ಮನೋಭಾವವನ್ನು ಜನರಲ್ಲಿ ಮೂಡಿಸುವ ಕೆಲಸವನ್ನು ಸರ್ಕಾರವೇ ಮಾಡಬೇಕಾದ ಅನಿವಾರ್ಯತೆಯಿದೆ. ಏಕೆಂದರೆ ಕೇವಲ ಶಿಕ್ಷೆ ವಿಧಿಸುವ ಮೂಲಕ ಕಾನೂನನ್ನು ಜಾರಿಗೊಳಿಸಲಾಗುವುದಿಲ್ಲ.

ಡಾ॥ ಸಣ್ಣಸ್ವಾಮಿ

### ೧. ಪ್ರಜಾಪ್ರಭುತ್ವದ ಸವಾಲುಗಳು

ಭಾರತವೂ ಸೇರಿದಂತೆ ಬಹುತೇಕ ಅಭಿವೃದ್ಧಿ ಹೊಂದುತ್ತಿರುವ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಬಡತನವು ಪ್ರಜಾಪ್ರಭುತ್ವದ ವ್ಯವಸ್ಥೆಗೆ ಬಹು ದೊಡ್ಡ ಸವಾಲಾಗಿ ಪರಿಣಮಿಸಿದೆ. ಭಾರತ ಮತ್ತು ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿರುವ ಆರ್ಥಿಕ ಅಸಮಾನತೆಯು ಬಡವರು ಮತ್ತು ಶ್ರೀಮಂತರ ನಡುವೆ ಸಾಕಷ್ಟು ಅಂತರವನ್ನು ಸೃಷ್ಟಿಸಿದೆ. ಸ್ವಾತಂತ್ರ್ಯ ಬಂದು ೬೦ಕ್ಕೂ ಹೆಚ್ಚು ವರ್ಷಗಳಾಗಿದ್ದರೂ ಮತ್ತು ಭಾರತ ಒಂದು ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರವಾಗಿದ್ದರೂ, ಇಂದಿಗೂ ಭಾರತದಲ್ಲಿ ಶೇಕಡ ೩೦ಕ್ಕೂ ಹೆಚ್ಚು ಜನರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆ. ಕೆಲವರಿಗೆ ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಒಂದು ಸಂಶೋಧನಾ ವರದಿಯ ಪ್ರಕಾರ, ಶೇಕಡ ೪೮ರಷ್ಟು ಬಡಜನರು ಉತ್ತರಪ್ರದೇಶ, ಮಧ್ಯಪ್ರದೇಶ, ಬಿಹಾರ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ವಾಸಿಸುತ್ತಿದ್ದಾರೆ. ಜನರು ಈ ರೀತಿ ಬಡತನ ಮತ್ತು ಹಸಿವಿನಿಂದ ಬಳಲುತ್ತಿರುವಾಗ, ಅವರು ರಾಷ್ಟ್ರದ ರಾಜಕೀಯದಲ್ಲಿ ಭಾಗವಹಿಸಿ, ತಮ್ಮ ರಾಜಕೀಯ ಸ್ವಾತಂತ್ರ್ಯವನ್ನು ಸಮರ್ಪಕವಾಗಿ ಅನುಭವಿಸಲಾಗುವುದಿಲ್ಲ. ಬಡತನವೇ ಅಲ್ಲದೆ ಭಾರತ ಮತ್ತು ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿರುವ ನಿರುದ್ಯೋಗ ಸಮಸ್ಯೆಯು ಕೂಡ ಜನರ ನಡುವೆ ಸಾಕಷ್ಟು ಆರ್ಥಿಕ ಅಂತರವನ್ನು ಸೃಷ್ಟಿಸುತ್ತದೆ. ಅಭಿವೃದ್ಧಿ ಹೊಂದಿದ ಪ್ರಜಾಪ್ರಭುತ್ವ ರಾಷ್ಟ್ರಗಳಾದ ಅಮೆರಿಕಾ ಮತ್ತು ಇಂಗ್ಲೆಂಡ್‌ಗಳಲ್ಲೂ ನಿರುದ್ಯೋಗ ಸಮಸ್ಯೆಯು ಅಲ್ಲಿನ ಪ್ರಜಾಪ್ರಭುತ್ವ ವ್ಯವಸ್ಥೆಯ ಕಾರ್ಯನಿರ್ವಹಣೆಗೆ ಸವಾಲಾಗಿ ಪರಿಣಮಿಸಿದೆ. ಆದುದರಿಂದ ಬಡತನದ ನಿರ್ಮೂಲನೆಗೆ ರಾಷ್ಟ್ರಗಳು ಹೆಚ್ಚಿನ ಆದ್ಯತೆ ಕೊಡುವುದು ಸೂಕ್ತವಾಗಿದೆ. ಇದು ಆರ್ಥಿಕ ಪ್ರಜಾಪ್ರಭುತ್ವದ ಸ್ಥಾಪನೆಗೆ ಸಹಾಯಕಾರಿಯಾಗಿದೆ. ಆರ್ಥಿಕ ಪ್ರಜಾಪ್ರಭುತ್ವದ ಸ್ಥಾಪನೆಗೆ ಭಾರತ ಸಂವಿಧಾನದಲ್ಲಿರುವ ರಾಜನೀತಿ ನಿರ್ದೇಶಕ ತತ್ವಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವಲ್ಲಿ ಸರ್ಕಾರ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಅಲ್ಲದೆ, ಬಡತನದ ನಿರ್ಮೂಲನೆಗೆ ಸರ್ಕಾರ ಕಟ್ಟುನಿಟ್ಟಿನ ಕಾರ್ಯಕ್ರಮಗಳನ್ನು ಹಾಕಿಕೊಂಡು, ಅವುಗಳನ್ನು ಕಾಲಮಿತಿಯೊಳಗೆ ಜಾರಿಗೊಳಿಸಲು ಪ್ರಯತ್ನ ಮಾಡಬೇಕು.

### ೨. ಅನಕ್ಷರತೆ

ಅನಕ್ಷರತೆಯು ಪ್ರಜಾಪ್ರಭುತ್ವದ ಮತ್ತೊಂದು ಪ್ರಮುಖ ಸವಾಲು. ಪ್ರಜಾಪ್ರಭುತ್ವದ ಯಶಸ್ವಿ ಕಾರ್ಯ ನಿರ್ವಹಣೆಗೆ ಅನಕ್ಷರತೆ ಒಂದು ಪ್ರಮುಖ ತೊಡಕಾಗಿ ಪರಿಣಮಿಸಿದೆ. ಅನಕ್ಷರತೆಯು ಪ್ರಜಾಪ್ರಭುತ್ವದ ವೈರಿ, ಸಾಕ್ಷರತೆಯು ಪ್ರಜಾಪ್ರಭುತ್ವದ ಆಸ್ತಿ ಎಂಬುದು ವಾಸ್ತವದ ಸಂಗತಿ. ಪ್ರಜಾಪ್ರಭುತ್ವದಲ್ಲಿ ಶಿಕ್ಷಣ ತುಂಬ ಪ್ರಮುಖವಾದುದು. ಜನರು ಬದುಕುಳಿಯಲು ಆಹಾರ ಮತ್ತು ನೀರಿನ ಅವಶ್ಯವಿರುವಂತೆ, ಪ್ರಜಾಪ್ರಭುತ್ವದಲ್ಲಿ ಜನರಿಗೆ ಶಿಕ್ಷಣ ಅತ್ಯವಶ್ಯಕವಾದುದು. ಪ್ರಜೆಗಳು ವಿದ್ಯಾವಂತರಾಗದಿದ್ದಾಗ ಪ್ರಜಾಪ್ರಭುತ್ವವು ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ. ಆದುದರಿಂದಲೇ ಪ್ರಜೆಗಳಿಗೆ ಮತದಾನದ ಹಕ್ಕನ್ನು ಕೊಡುವುದಕ್ಕೆ ಮೊದಲು ಸರ್ಕಾರ ಅವರಿಗೆ ಸೂಕ್ತ ಶಿಕ್ಷಣ ನೀಡಬೇಕು. ಅಭಿವೃದ್ಧಿಹೊಂದಿದ ಪ್ರಜಾಪ್ರಭುತ್ವವಾದಿ ರಾಷ್ಟ್ರಗಳಾದ ಅಮೆರಿಕಾ, ಇಂಗ್ಲೆಂಡ್ ಮುಂತಾದವುಗಳಲ್ಲಿ ಬಹುಸಂಖ್ಯಾತ ಜನರು ವಿದ್ಯಾವಂತರು. ಹಾಗಾಗಿ ಈ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ





ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ಆದರೆ ಭಾರತಕ್ಕೆ ಸ್ವಾತಂತ್ರ್ಯ ಬಂದು ೭೦ಕ್ಕೂ ಹೆಚ್ಚು ವರ್ಷಗಳಾಗಿದ್ದರೂ, ಭಾರತದಲ್ಲಿ ಕೇವಲ ಶೇಕಡ ೭೪ರಷ್ಟು ಜನರು ಮಾತ್ರ ಅಕ್ಷರಸ್ಥರಾಗಿದ್ದಾರೆ, ಇಂದಿಗೂ ಶೇಕಡ ೩೬ರಷ್ಟು ಜನರು ಅನಕ್ಷರಸ್ಥರಾಗಿದ್ದಾರೆ. ಹೀಗೆ ಜನರು ಅವಿದ್ಯಾವಂತರಾದಾಗ, ರಾಷ್ಟ್ರದ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸ ಲಾಗುವುದಿಲ್ಲ ಮತ್ತು ತಮ್ಮ ಮತದ ಮೌಲ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗುವುದಿಲ್ಲ. ಆದುದರಿಂದ ಸರ್ಕಾರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಕೊಟ್ಟು ಅಕ್ಷರಸ್ಥರ ಸಂಖ್ಯೆಯನ್ನು ಹೆಚ್ಚಿಸುವ ಪ್ರಯತ್ನ ಮಾಡಬೇಕು. ಸರ್ಕಾರವು ಒಂದು ನಿರ್ದಿಷ್ಟ ಕಾಲಮಿತಿಯನ್ನು ಹಾಕಿಕೊಂಡು ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಬೇಕು.

**ಅಭಿನಂದನೆ**

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಕೊಡುವ ೨೦೧೩-೧೪ನೇ ಸಾಲಿನ ಡಾ॥ ಹಾ ಮಾ ನಾಯಕ ದತ್ತಿ ಪ್ರಶಸ್ತಿಯು 'ಹೊಸತು' ಸಹ ಸಂಪಾದಕರಾದ ಶ್ರೀ ರಾಮಲಿಂಗಪ್ಪ ಟಿ. ಬೇಗೂರು ಅವರು ರಚಿಸಿ ನವಕರ್ನಾಟಕ ಪ್ರಕಟಿಸಿದ 'ಪರಕಾಯ' ಕೃತಿಗೆ ಲಭಿಸಿದೆ. ಲೇಖಕರಿಗೆ 'ಹೊಸತು' ಮತ್ತು 'ನವಕರ್ನಾಟಕ' ಬಳಗದಿಂದ ಅಭಿನಂದನೆಗಳು.

### ೩. ಜಾತಿಪದ್ಧತಿ ಅಥವಾ ಜಾತಿವಾದ

ಜಾತಿ ಆಧಾರಿತ ಅಸಮಾನತೆ ಅಥವಾ ಜಾತಿವಾದವು ಬಹಳ ಹಿಂದಿನ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಜಾತಿವಾದವು ಭಾರತದ ಪ್ರಜಾಪ್ರಭುತ್ವಕ್ಕೆ ಬಹುದೊಡ್ಡ ಸವಾಲಾಗಿ ಪರಿಣಮಿಸಿದೆ. ಜಾತಿ ಪದ್ಧತಿಯು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ವಿರೂಪಗೊಳಿಸುತ್ತಿದೆ. ಭಾರತದಲ್ಲಿ ಸುಮಾರು ಐದು ಸಾವಿರಕ್ಕೂ ಹೆಚ್ಚು ಜಾತಿಗಳು ಮತ್ತು ಉಪಜಾತಿಗಳು ಅಸ್ತಿತ್ವದಲ್ಲಿವೆ. ಇಂದಿಗೂ, ಜನರು ಜಾತಿಯ ಹೆಸರಿನಲ್ಲಿ ಗುರುತಿಸಿಕೊಳ್ಳುವುದು ಸಾಮಾನ್ಯ ಸಂಗತಿ. ವಿವಿಧ ಜಾತಿಗಳ ನಡುವಿನ ಘರ್ಷಣೆಗಳು ಸಾಮಾಜಿಕ ಸಾಮರಸ್ಯವನ್ನು ಹಾಳುಗೆಡುವುತ್ತಿವೆ. ಭಾರತದಲ್ಲಿ ಜಾತಿಯ ಪ್ರಭಾವವು ಒಂದು ಅನಿಷ್ಟ ಪದ್ಧತಿಯಾಗಿ ಮುಂದುವರಿಯುತ್ತ ನಮ್ಮ ರಾಜಕೀಯ ವ್ಯವಸ್ಥೆ ಮತ್ತು ರಾಜಕಾರಣದ ಮೇಲೆ ನೇತ್ಯಾತ್ಮಕ ಪ್ರಭಾವವನ್ನು ಬೀರುತ್ತಿದೆ. ಮತದಾರರು ಜಾತಿಯಿಂದ ಪ್ರಭಾವಿತರಾಗಿ, ತಮ್ಮ ಜಾತಿಯ ಅಭ್ಯರ್ಥಿಗಳ ಪರವಾಗಿಯೇ ಮತ ಚಲಾಯಿಸುತ್ತಾರೆ. ಚುನಾವಣೆಗಳಲ್ಲಿ ರಾಜಕೀಯ ಪಕ್ಷಗಳು ಕೂಡ ಜಾತಿ ಆಧಾರದ ಮೇಲೆ ಅಭ್ಯರ್ಥಿಗಳಿಗೆ ಟಿಕೇಟನ್ನು ಕೊಡುವ ಪರಿಪಾಠವನ್ನು ಬೆಳೆಸಿಕೊಂಡಿವೆ. ಅಲ್ಲದೆ, ಕೆಲವು ರಾಜಕೀಯ ಪಕ್ಷಗಳೂ ಜಾತಿ ಆಧಾರದ ಮೇಲೆ ಅಸ್ತಿತ್ವಕ್ಕೆ ಬಂದಿವೆ. ಸರ್ಕಾರಿ ನೇಮಕಾತಿಯಲ್ಲಿ ಪ್ರತ್ಯೇಕ ಜಾತಿಯ ಅಭ್ಯರ್ಥಿಗಳಿಗೆ ಆದ್ಯತೆಯನ್ನು ನೀಡುವುದು ಕಂಡುಬಂದಿದೆ. ಮೇಲಾಗಿ ಭಾರತದ ಕೆಲವು ರಾಜ್ಯಗಳಲ್ಲಿ ಎರಡು ಪ್ರಮುಖ ಜಾತಿಗಳ ನಡುವಿನ ರಾಜಕೀಯ ಸಂಘರ್ಷವನ್ನು ಕಾಣಬಹುದು. ಆದುದರಿಂದಲೇ, ನಮ್ಮ ರಾಜಕೀಯದಲ್ಲಿ ಜಾತಿ ತುಂಬ ಪ್ರಮುಖ ಸ್ಥಾನ ಪಡೆದಿದೆ ಎಂಬ ರಜನಿ ಕೋಠಾರಿಯವರ ಅಭಿಪ್ರಾಯ ಸೂಕ್ತವಾಗಿದೆ. ಆದುದರಿಂದ ಸರ್ಕಾರವು ಎಲ್ಲರ ಮನಸ್ಸಿನಲ್ಲಿ ಜಾತ್ಯತೀತ ಮನೋಭಾವವನ್ನು ಬೆಳೆಸಲು ಕ್ರಮ ಕೈಗೊಳ್ಳಬೇಕು. ರಾಜಕಾರಣಿಗಳು ತಮ್ಮ ಸಂಕುಚಿತ ಜಾತಿ ಮನೋಭಾವವನ್ನು ಬದಿಗೊತ್ತಿ ಎಲ್ಲ ಜಾತಿಯ ಜನರ ನಡುವೆ ಸಾಮರಸ್ಯ ಮೂಡಿಸುವ ಕೆಲಸ ಮಾಡಬೇಕು, ಇದು ಪ್ರಜಾಪ್ರಭುತ್ವದ ಬಲವರ್ಧನೆಗೆ ಸಹಾಯಕಾರಿಯಾಗುತ್ತದೆ.

### ೪. ಕೋಮುವಾದ

ಪ್ರಜಾಪ್ರಭುತ್ವದ ಮುಂದಿರುವ ಮತ್ತೊಂದು ಸವಾಲೆಂದರೆ ಕೋಮುವಾದ. ಕೋಮುವಾದವು ಪ್ರಜಾಪ್ರಭುತ್ವದ ವೈರಿ ಎಂದರೆ ಉತ್ಪ್ರೇಕ್ಷೆಯಾಗಲಾರದು. ವಿವಿಧ ಮತಧರ್ಮಗಳಲ್ಲಿರುವ ಒಡಕು ಅಥವಾ ಘರ್ಷಣೆಗಳನ್ನು ಕೋಮುವಾದ ಎನ್ನಬಹುದು. ಅಂದರೆ ಸರ್ಕಾರಗಳ ರಚನೆಯಲ್ಲಿ ಮತಧರ್ಮವು ಪ್ರಮುಖ ಪಾತ್ರ ವಹಿಸುತ್ತಿದೆ. ರಾಷ್ಟ್ರದ ರಾಜಕೀಯದಲ್ಲಿ ಧರ್ಮದ ಪಾತ್ರ ಅಥವಾ ಹಸ್ತಕ್ಷೇಪವು, ಪ್ರಜಾಪ್ರಭುತ್ವದ ಯಶಸ್ವಿ ಕಾರ್ಯಾಚರಣೆಗೆ ಅಪಾಯಕಾರಿಯಾದ ಬೆಳವಣಿಗೆ. ಕೋಮುಭಾವನೆಯು ಪ್ರಜಾಪ್ರಭುತ್ವದ ಅಸ್ತಿತ್ವಕ್ಕೆ ಅಪಾಯಕಾರಿಯಾಗುವುದಲ್ಲದೆ ರಾಷ್ಟ್ರೀಯ ಐಕ್ಯತೆಗೆ ಧಕ್ಕೆ ಉಂಟುಮಾಡುತ್ತದೆ. ವಿವಿಧ ಮತಧರ್ಮಗಳು ಅಸ್ತಿತ್ವದಲ್ಲಿರುವ ಭಾರತದಲ್ಲಿ ದಿನದಿಂದ ದಿನಕ್ಕೆ ಕೋಮುವಾದವು ಬೃಹದಾಕಾರವಾಗಿ ಬೆಳೆಯುತ್ತಲಿದೆ. ರಾಜಕೀಯ ಲಾಭಕ್ಕಾಗಿ ಧರ್ಮವನ್ನು ಬಳಸಿಕೊಳ್ಳಲಾಗುತ್ತಿದೆ. ಭಾರತದ ಪ್ರಜಾಪ್ರಭುತ್ವದಲ್ಲಿ ಜಾತಿ ಮತ್ತು ಮತಧರ್ಮ ನಿರ್ಣಾಯಕ ಅಂಶಗಳಾಗಿವೆ ಎಂಬುದು ಎಲ್ಲರಿಗೂ ಗೊತ್ತಿರುವಂತಹ ವಿಚಾರ. ೧೯೪೭ರಲ್ಲಿ ಭಾರತದ ವಿಭಜನೆಗೆ ಪ್ರಬಲ ಕಾರಣ ಹಿಂದೂ ಮತ್ತು ಮುಸ್ಲಿಮರ ನಡುವೆ ಇದ್ದ ಕೋಮು ವೈಮನಸ್ಯ. ಮಹಮದ್ ಆಲಿ ಜಿನ್ನಾರವರ 'ಎರಡು ರಾಷ್ಟ್ರ

ಕಾವ್ಯಲೋಕ



## ಎದ್ದುಬಿಡು ಮತ್ತೊಮ್ಮೆ

ಸಿಡಿದು ಎದ್ದುಬಿಡು ಮತ್ತೊಮ್ಮೆ  
ಉಸಿರುಗಟ್ಟಿ ಸಾಯುವ ಮುನ್ನ;  
ಇನ್ನೂ ಎಷ್ಟೊಂದು ದಿನ  
ಹೀಗೆ ನರಳಿ ನರಳಿ ಬದುಕುವೆ ?

ಬೆವರಿಗೆ, ತಕ್ಕ ಬೆಲೆ ಸಿಗದೆ  
ಹಸಿವಿನಲ್ಲಿ ಕುಗ್ಗಿದರೂ  
ಶ್ರಮದ ಸಂಸ್ಕೃತಿಗೆ ನಿಷ್ಠೆ ಇಟ್ಟು  
ನಿನ್ನ ಶಕ್ತಿಯನ್ನೇ ಧಾರೆಯೆರೆಯುತ್ತಿರುವೆ

ಅರಮನೆ ಕೇಳದೆ  
ನೆರೆಮನೆ ಕೆಡಿಸದೆ  
ಗುಡಿಸಲಲ್ಲಿದ್ದ, ಚಿಮಣಿ ದೀಪದ  
ಬೆಳಕಲ್ಲೇ ನಿನ್ನ ಬಾಳ ಸವಿಸುತ್ತಿರುವೆ

ಜಾಗತೀಕರಣದ ಜಾಲದಲಿ  
ಉದಾರೀಕರಣದ ಉಸುಕಿನಲಿ  
ಖಾಸಗೀಕರಣದ ಕೆಸರಿನಲಿ  
ನೀನು 'ಸಿಕ್ಕು' ವಿಲ ವಿಲ ಒದ್ದಾಡುತ್ತಿರುವೆ !

ಎದ್ದೇಳು ಶ್ರಮಿಕ,  
ನಿನ್ನ ಹಕ್ಕು ಪಡೆದುಕೊಳ್ಳಲು  
ನಿನ್ನ ತನವ, ಉಳಿಸಿಕೊಳ್ಳಲು  
ಮತ್ತೊಮ್ಮೆ ಸಿಡಿದು ಎದ್ದುಬಿಡು  
ಈ ಜಗತ್ತು ಹೌಹಾರಿ ನೋಡುವಂತೆ  
ಅಮೆರಿಕಾದ ಶಿಕಾಗೋ ಹೋರಾಟ ನೆನಪಿಸುವಂತೆ !!

**ಎಚ್. ಕೆ. ಕೊಟ್ರಪ್ಪ**  
'ಕೊಟಗಿ ನಿಲಯ', ೧೬, ಕೆ.ಹೆಚ್.ಬಿ. ಕಾಲೋನಿ  
ಹೈಸ್ಕೂಲ್ ಬಡಾವಣೆ, ಹರಿಹರ, ದಾವಣಗೆರೆ ಜಿಲ್ಲೆ – ೫೭೭ ೬೦೧

ಸಿದ್ಧಾಂತ' ಉಪಖಂಡದ ವಿಭಜನೆಗೆ ಕಾರಣವಾಯಿತು. ಡಿಸೆಂಬರ್ ೬, ೧೯೯೨ರಂದು ಹಿಂದೂ ಮೂಲಭೂತವಾದಿಗಳಿಂದ ಅಯೋಧ್ಯೆಯಲ್ಲಿ ಬಾಬರಿ ಮಸೀದಿ ಧ್ವಂಸ ಪ್ರಕರಣ ಹಾಗೂ ಹಿಂದೂ ಮತ್ತು ಮುಸ್ಲಿಂ ಧರ್ಮದವರಿಂದ ಸ್ಥಾಪಿಸಲ್ಪಟ್ಟ ಕೋಮುವಾದಿ ಸಂಘಟನೆಗಳು, ಪ್ರಜಾಪ್ರಭುತ್ವದ ಯಶಸ್ವಿ ಕಾರ್ಯಾಚರಣೆಗೆ ಅಪಾಯಕಾರಿಯಾಗಿವೆ. ಅಲ್ಲದೆ, ದೇಶದ ವಿವಿಧ ಭಾಗಗಳಲ್ಲಿ ಆಗಾಗ್ಗೆ ಉಂಟಾಗುವ ಕೋಮು ಗಲಭೆಗಳು ಪ್ರಜಾಪ್ರಭುತ್ವದ ಮೂಲತತ್ವಗಳಿಗೆ ಧಕ್ಕೆಯುಂಟುಮಾಡುವಂಥವು. ಉದಾಹರಣೆಗೆ, ಹಿಂದೂ ಮತಾಂಧರಿಂದ ೨೦೦೨ರಲ್ಲಿ ನಡೆದ ಗುಜರಾತಿನ ಗೋಧ್ರಾ ಹತ್ಯಾಕಾಂಡ, ೨೦೦೩ರಲ್ಲಿ ಮುಂಬೈನಲ್ಲಿ ನಡೆದ ಬಾಂಬ್ ದಾಳಿ, ೨೦೦೮ರಲ್ಲಿ ಮುಂಬೈನ ತಾಜ್ ಹೋಟೆಲ್ ಮೇಲೆ ಪಾಕಿಸ್ತಾನದ ಭಯೋತ್ಪಾದಕರು ನಡೆಸಿದ ಬಾಂಬ್ ದಾಳಿ ಇನ್ನೂ ಮುಂತಾದವು. ಭಾರತದ ಐಕ್ಯತೆ ಮತ್ತು ಸಮಗ್ರತೆಯನ್ನು ಬಲಹೀನಗೊಳಿಸಲು ಕೆಲವು ವಿದೇಶಿ ಶಕ್ತಿಗಳು ಭಾರತದಲ್ಲಿ ಕೋಮುವಾದವನ್ನು ಬೆಂಬಲಿಸುತ್ತಿವೆ. ಆದುದರಿಂದ ಜಾತ್ಯತೀತ ಸಮಾಜದ ಸ್ಥಾಪನೆಗೋಸ್ಕರ, ನಮ್ಮ ಕೇಂದ್ರ ಸರ್ಕಾರವು ಜಾತ್ಯತೀತ ತತ್ವವನ್ನು ಜಾರಿಗೆ ತರುವುದು ತುಂಬ ಅಗತ್ಯ. ಅಲ್ಲದೆ ರಾಜಕಾರಣಿಗಳು, ತಮ್ಮ ಸಂಕುಚಿತ ಜಾತಿ ಮನೋಭಾವನೆಯನ್ನು ಬದಿಗೊತ್ತಿ ಎಲ್ಲ ಜನರ ಸುಖಕ್ಕಾಗಿ ಕೆಲಸ ಮಾಡಬೇಕಾಗಿದೆ. ಭಾರತದ ಯುವಕರ ಮನಸ್ಸನ್ನು ಜಾತ್ಯತೀತ ತತ್ವದ ದಿಕ್ಕಿನೆಡೆಗೆ ಕರೆದೊಯ್ಯುವಂತಹ ಶಿಕ್ಷಣ ಇಂದು ಬಹು ಅತ್ಯಗತ್ಯ.

### ೫. ಭ್ರಷ್ಟಾಚಾರ

ಪ್ರಪಂಚದ ಕೆಲವು ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ರಾಜಕೀಯ ಭ್ರಷ್ಟಾಚಾರವು ಪ್ರಜಾಪ್ರಭುತ್ವದ ಕಾರ್ಯ ನಿರ್ವಹಣೆಗೆ ಬಹುದೊಡ್ಡ ಸವಾಲಾಗಿ ಪರಿಣಮಿಸಿದೆ. ಇತ್ತೀಚಿನ ದಿನಗಳಲ್ಲಿ ಅಭಿವೃದ್ಧಿ ಹೊಂದಿದ ಪ್ರಜಾಪ್ರಭುತ್ವ ರಾಷ್ಟ್ರವಾದ ಅಮೆರಿಕಾದಲ್ಲೂ ಚುನಾವಣೆಗಳಲ್ಲಿ ಭ್ರಷ್ಟಾಚಾರ ಸರ್ವೇಸಾಮಾನ್ಯವಾಗಿದೆ. ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಾದ ಇಂಗ್ಲೆಂಡ್, ಜಪಾನ್ ಮತ್ತು ಜರ್ಮನಿ ಕೂಡ ರಾಜಕೀಯ ಹಗರಣಗಳಿಂದ ಮುಕ್ತವಾಗಿಲ್ಲ. ಉದಾಹರಣೆಗೆ ೧೯೮೯ರಲ್ಲಿ ಕೇವಲ ಆರು ತಿಂಗಳ ಅವಧಿಯಲ್ಲಿ ಜಪಾನಿನ ಮೂವರು ಪ್ರಧಾನ ಮಂತ್ರಿಗಳು ಭ್ರಷ್ಟಾಚಾರ ಹಗರಣಕ್ಕೆ ಸಂಬಂಧಿಸಿದಂತೆ ರಾಜೀನಾಮೆ ನೀಡಿದ್ದು, ಪ್ರಜಾಪ್ರಭುತ್ವದ ಘನತೆಗೆ ಶೋಭೆ ತರುವಂತಹುದಲ್ಲ. ಭಾರತದಲ್ಲೂ ಚುನಾವಣೆಗಳಲ್ಲಿ ವ್ಯಾಪಕ ಭ್ರಷ್ಟಾಚಾರ ನಡೆಯುತ್ತಿದೆ. ಇದುವರೆಗೂ ಬಹಿರಂಗಗೊಂಡಿರುವ ಹಲವಾರು ಭ್ರಷ್ಟಾಚಾರ ಹಗರಣಗಳು ನಮ್ಮ ಅನುಭವಕ್ಕೆ ಬಂದಿವೆ. ಭಾರತದಲ್ಲಿ ಬಹಿರಂಗಗೊಂಡ ಪ್ರಮುಖ ಭ್ರಷ್ಟ ಹಗರಣಗಳೆಂದರೆ, ೧೯೮೭ರ ೬೪ ಕೋಟಿ ಬೋಫೋರ್ಸ್ ಹಗರಣ, ೧೯೯೦ರ ೯೦೦ ಕೋಟಿ ಮೇವು ಹಗರಣ, ೨೦೦೧ರ ೩೦ ಸಾವಿರ ಕೋಟಿ ಛಾಪಾ ಕಾಗದ ಹಗರಣ, ೨೦೧೦ರ ೧.೭೬ ಲಕ್ಷ ಕೋಟಿ ೨ ಜಿ ತರಂಗಾಂತರ ಹಗರಣ ಮುಂತಾದವು. ಹೀಗೆ ರಾಜಕೀಯದಲ್ಲಿ ಭ್ರಷ್ಟಾಚಾರ ಅಧಿಕವಾದಾಗ ಕೇವಲ ಶ್ರೀಮಂತರು ಮಾತ್ರ ರಾಜಕೀಯದಲ್ಲಿ ಪ್ರಬಲರಾಗುತ್ತಾರೆ. ಹಾಗಾಗಿ ಪ್ರಜಾಪ್ರಭುತ್ವ ಯಶಸ್ವಿಯಾಗಿ ಕಾರ್ಯ ನಿರ್ವಹಿಸಲಾಗುವುದಿಲ್ಲ. ಆದುದರಿಂದ ಈ ರೀತಿಯ ರಾಜಕೀಯ ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಲು ಭ್ರಷ್ಟಾಚಾರ ನಿಗ್ರಹ ಸಂಸ್ಥೆಗಳನ್ನು ಮತ್ತು ಭ್ರಷ್ಟಾಚಾರ ವಿರೋಧಿ ಕಾನೂನುಗಳನ್ನು ಬಲಗೊಳಿಸಲೇಬೇಕಾದ ಅಗತ್ಯವಿದೆ. ಭ್ರಷ್ಟಾಚಾರದಲ್ಲಿ ಭಾಗಿಯಾದವರನ್ನು ಕಠಿಣ ಶಿಕ್ಷೆಗೆ ಒಳಪಡಿಸಬೇಕು. ಆಗ ಮಾತ್ರ ಭ್ರಷ್ಟಾಚಾರವನ್ನು ನಿಯಂತ್ರಿಸಿ ಜನರಿಗೆ ಒಳ್ಳೆಯ ಆಡಳಿತ ನೀಡಲು ಸಾಧ್ಯ. ಅಲ್ಲದೆ ರಾಜಕೀಯ ಶಿಕ್ಷಣ ಮತ್ತು ರಾಜಕೀಯ ಅರಿವನ್ನು ಜನರಲ್ಲಿ ಮೂಡಿಸುವುದು ತುರ್ತಿನ ಜವಾಬ್ದಾರಿಯುತ ಕೆಲಸ. ಚುನಾವಣಾ ವೆಚ್ಚವನ್ನು ಸರ್ಕಾರವೇ ಭರಿಸುವುದು ಸೂಕ್ತವಾಗಿದೆ.

### ೬. ಲಿಂಗ ತಾರತಮ್ಯ

ಪ್ರಜಾಪ್ರಭುತ್ವವು ಸಮಾನತೆ ತತ್ವದಲ್ಲಿ ನಂಬಿಕೆ ಇಟ್ಟಿದೆ. ಈ ಸರ್ಕಾರ ಪದ್ಧತಿಯಲ್ಲಿ ಯಾವುದೇ ರೀತಿಯ ತಾರತಮ್ಯಕ್ಕೆ ಅವಕಾಶವಿಲ್ಲ. ಸಮಾನತೆಯು ಪ್ರಜಾಪ್ರಭುತ್ವದ ಆಧಾರಸ್ತಂಭ. ಯಾವುದೇ ರೀತಿಯ ಅಸಮಾನತೆಗೆ ಅವಕಾಶ ಕಲ್ಪಿಸಿಕೊಡದಿರುವುದೇ ಪ್ರಜಾಪ್ರಭುತ್ವದ ಮೂಲ ಉದ್ದೇಶ. ಸಮಾನತೆ ಇಲ್ಲದೆ ಪ್ರಜಾಪ್ರಭುತ್ವ ಯಶಸ್ವಿಯಾಗಲು ಸಾಧ್ಯವಿಲ್ಲ. ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಮಹಿಳೆಯರು ಮತ್ತು ಪುರುಷರ ನಡುವೆ ಅಸಮಾನತೆ ಸರ್ವೇಸಾಮಾನ್ಯವಾಗಿದೆ. ಈ ರೀತಿಯ ಅಸಮಾನತೆಯು ಪ್ರಜಾಪ್ರಭುತ್ವದ ಮೂಲ ತತ್ವಕ್ಕೆ ವಿರುದ್ಧವಾದುದು. ಯಾವುದೇ ಪ್ರಜಾಪ್ರಭುತ್ವ ಸರ್ಕಾರ ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಮಹಿಳೆಯರು ಮತ್ತು ಪುರುಷರು ಸಮಾನವಾಗಿ ಸರ್ಕಾರದ ದಿನನಿತ್ಯದ ಆಡಳಿತದಲ್ಲಿ ಭಾಗವಹಿಸಬೇಕು. ಆದರೆ ನಮ್ಮ ಸಮಾಜದಲ್ಲಿರುವ ಸಂಪ್ರದಾಯ ವ್ಯವಸ್ಥೆ, ಸಾಮಾಜಿಕ ಮತ್ತು ಕೌಟುಂಬಿಕ ವ್ಯವಸ್ಥೆ, ಮಹಿಳೆಯರಲ್ಲಿನ ಶಿಕ್ಷಣದ ಕೊರತೆ, ಮುಂತಾದುವು ಮಹಿಳೆಯರು ಮತ್ತು ಪುರುಷರ ನಡುವಿನ ಅಸಮಾನತೆಗೆ ಅಥವಾ ಲಿಂಗತಾರತಮ್ಯಕ್ಕೆ ಪ್ರಮುಖ ಕಾರಣವಾಗಿವೆ. ಭಾರತದಲ್ಲಿ ಮಹಿಳೆಯರು ಕೌಟುಂಬಿಕ ಅಸಮಾನತೆ, ಆರ್ಥಿಕ ಅಸಮಾನತೆ, ಶೈಕ್ಷಣಿಕ ಅಸಮಾನತೆ ಮತ್ತು ರಾಜಕೀಯ ಅಸಮಾನತೆಗೆ ಒಳಗಾಗಿ, ವಿವಿಧ ರೀತಿಯ ಶೋಷಣೆಗೆ ಒಳಗಾಗಿದ್ದಾರೆ. ಈ ದಿಶೆಯಲ್ಲಿ ಮಹಿಳೆಯರ ರಕ್ಷಣೆಗಾಗಿ ಭಾರತ ಮತ್ತು ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಮಹಿಳಾ ಹೋರಾಟ – ಚಳುವಳಿಗಳು ಜರುಗುತ್ತಿವೆ. ಭಾರತದಲ್ಲಿ ರಾಷ್ಟ್ರೀಯ ಮಹಿಳಾ ಆಯೋಗ ಮತ್ತು ರಾಜ್ಯಮಟ್ಟದಲ್ಲಿನ ಮಹಿಳಾ ಆಯೋಗಗಳು ಮಹಿಳೆಯರ ಹಕ್ಕುಗಳನ್ನು ರಕ್ಷಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡುತ್ತಿವೆ.

### ೭. ಕಾನೂನು ಮತ್ತು ಸುವ್ಯವಸ್ಥೆಯನ್ನು ರಕ್ಷಿಸಿ ಕಾಪಾಡುವುದು

ರಾಷ್ಟ್ರದಲ್ಲಿ ಕಾನೂನು ಸುವ್ಯವಸ್ಥೆಯನ್ನು ರಕ್ಷಿಸಿ ಕಾಪಾಡುವುದು ಪ್ರಜಾಪ್ರಭುತ್ವದ ಯಶಸ್ಸಿಗೆ ಬಹಳ ಸಹಾಯಕಾರಿಯಾಗುತ್ತಿದೆ. ಕಾನೂನು ಮತ್ತು ಸುವ್ಯವಸ್ಥೆ ಇಲ್ಲದಿದ್ದಾಗ ನಿರಂಕುಶ ಪ್ರಭುತ್ವ ಅಸ್ತಿತ್ವಕ್ಕೆ ಬರುವ ಸಾಧ್ಯತೆಯುಂಟು. ಜನರು ಕಾನೂನಿಗೆ ಅಗೌರವ ತೋರಿಸುವುದು, ಕಾನೂನನ್ನು ಕಡೆಗಣಿಸುವುದು ಸರ್ವೇಸಾಮಾನ್ಯವಾಗಿದೆ. ಇಂತಹ ಧೋರಣೆ ಪ್ರಜಾಪ್ರಭುತ್ವದ ಯಶಸ್ಸಿಗೆ ಮಾರಕವಾಗಲಿದೆ. ಕಾನೂನನ್ನು ಕಡೆಗಣಿಸುವ ಜನರ ಈ ರೀತಿಯ ಪ್ರವೃತ್ತಿಯನ್ನು ತಡೆದು, ಸೂಕ್ತ ಕಾನೂನನ್ನು ಜಾರಿಗೆ ತರುವುದು ಪ್ರಜಾಪ್ರಭುತ್ವದ ಬಲವರ್ಧನೆಗೆ ಸಹಾಯಕಾರಿಯಾಗುತ್ತದೆ. ಅಲ್ಲದೆ, ಸೂಕ್ತ ಕಾನೂನನ್ನು ಗೌರವಿಸುವಂತಹ ಮನೋಭಾವವನ್ನು ಜನರಲ್ಲಿ ಮೂಡಿಸುವ ಕೆಲಸವನ್ನು ಸರ್ಕಾರವೇ ಮಾಡಬೇಕಾದ ಅನಿವಾರ್ಯತೆಯಿದೆ. ಏಕೆಂದರೆ ಕೇವಲ ಶಿಕ್ಷೆ ವಿಧಿಸುವ ಮೂಲಕ ಕಾನೂನನ್ನು ಜಾರಿಗೊಳಿಸಲಾಗುವುದಿಲ್ಲ.

### ೮. ರಾಷ್ಟ್ರೀಯ ಸಮಗ್ರತೆಯನ್ನು ರಕ್ಷಿಸಿ ಕಾಪಾಡುವುದು

ಇಂದಿಗೂ ನಮ್ಮಲ್ಲಿ ಧಾರ್ಮಿಕ ಸಮಸ್ಯೆ ಒಂದು ದೊಡ್ಡ ಪಿಡುಗಾಗಿಯೇ ಮುಂದುವರಿಯುತ್ತಿದೆ. ನಮ್ಮ ಸಂವಿಧಾನದಲ್ಲಿ ಅಲ್ಪಸಂಖ್ಯಾತ ಧರ್ಮದವರ ಹಕ್ಕುಗಳನ್ನು ರಕ್ಷಿಸಿ, ಕಾಪಾಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದ್ದರೂ, ಜಮ್ಮು ಮತ್ತು ಕಾಶ್ಮೀರ, ನಾಗಾಲ್ಯಾಂಡ್‌ನಂತಹ ಇನ್ನೂ ಕೆಲವು ರಾಜ್ಯಗಳಲ್ಲಿ ಪ್ರತ್ಯೇಕವಾದಿ ಚಳುವಳಿಗಳು ನಡೆಯುತ್ತಿವೆ. ಮೇಲಾಗಿ ಅತಿಯಾದ ಪ್ರಾದೇಶಿಕತೆಯೂ ಭಾರತದ ಈಶಾನ್ಯ ರಾಜ್ಯಗಳಲ್ಲಿ ಪ್ರತ್ಯೇಕವಾದಿ ಚಳುವಳಿಗಳನ್ನು ಪ್ರೋತ್ಸಾಹಿಸುತ್ತಿದೆ. ಅದೇ ವೇಳೆ ಉಗ್ರಗಾಮಿ ಗುಂಪುಗಳಾದ ಜೆ.ಕೆ.ಎಲ್.ಎಫ್., ಯು.ಎಲ್.ಎಫ್.ಎ., (ನಾಗಾಲ್ಯಾಂಡಿನ ನಾಗಾ ರಾಷ್ಟ್ರೀಯ ಮಂಡಳಿ) ಎ.ಟಿ.ಟಿ.ಎಫ್... ಮುಂತಾದ ಚಳುವಳಿಗಳು ಪ್ರಾದೇಶಿಕತೆಯ ಹೆಸರಿನಲ್ಲಿ ರಾಷ್ಟ್ರವಿರೋಧಿ ಚಟುವಟಿಕೆಗಳಲ್ಲಿ ತೊಡಗಿವೆ. ಆದುದರಿಂದ ೧೯೭೬ರಲ್ಲಿ ಇಂದಿರಾ ಗಾಂಧಿಯವರ ಸರ್ಕಾರ ಸಂವಿಧಾನದ ಪ್ರಸ್ತಾವನೆಯಲ್ಲಿ 'ಸಮಗ್ರತೆ' ಎಂಬ ಪದವನ್ನು ಸೇರಿಸಿ, ರಾಷ್ಟ್ರದಲ್ಲಿ ಸಮಗ್ರತೆಯನ್ನು ಕಾಪಾಡುವ ಪ್ರಾಮಾಣಿಕ ಪ್ರಯತ್ನ ಮಾಡಿತು. ಅಲ್ಲದೆ ಸಂವಿಧಾನದ ೫೧ 'ಎ' ವಿಧಿಯಲ್ಲಿರುವ ಮೂಲಭೂತ ಕರ್ತವ್ಯಗಳು ಕೂಡ ರಾಷ್ಟ್ರೀಯ ಸಮಗ್ರತೆಯ ಪ್ರಾಮುಖ್ಯತೆ ಅಥವಾ ಮಹತ್ವವನ್ನು ತಿಳಿಸುತ್ತವೆ. ಸರ್ಕಾರ ಮತ್ತು ಜನರು ಭಾರತದ ಐಕ್ಯತೆಯನ್ನು ಬಲಪಡಿಸುವ ದಿಶೆಯಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಬೇಕಾಗಿದೆ. ವಿವಿಧತೆಯಲ್ಲಿ ಐಕ್ಯತೆಯು ಭಾರತದ ಸಮಗ್ರತೆ ಮತ್ತು ಐಕ್ಯತೆಯನ್ನು ಕಾಪಾಡುವಲ್ಲಿ ಸಹಾಯಕವಾಗಿದೆ. ಭಾರತದಲ್ಲಿರುವ ಅಲ್ಪಸಂಖ್ಯಾತ ಧರ್ಮದವರು ಭಾರತದ ಸಂವಿಧಾನದಲ್ಲಿರುವ ಜಾತ್ಯತೀತ ತತ್ವವನ್ನು ಗೌರವಿಸಿ ರಾಷ್ಟ್ರದ ಐಕ್ಯತೆಗೆ ಸರ್ಕಾರದ ಜೊತೆ ಕೈ ಜೋಡಿಸುವ ಅಗತ್ಯವಿದೆ.

ಡಾ॥ ಸಣ್ಣಸ್ವಾಮಿ
'ಮಹದೇಶ್ವರ ನಿಲಯ', ೬ನೇ ಅಡ್ಡರಸ್ತೆ, ಅಶೋಕನಗರ
ತುಮಕೂರು – ೫೭೨ ೧೦೨



# ಕಾಡಿನಲ್ಲೊಂದು ಗ್ರಂಥಾಲಯ

ಆ ದಟ್ಟ ಕಾಡಿನ ನಡುವೆ, ಮಣ್ಣಿನ ಗುಡಿಸಲಿನಂತೆ ಕಾಣುವ ಪುಟ್ಟ ಮನೆಯೇ ಚಿಕ್ಕದೊಂದು ಚಹಾದ ಅಂಗಡಿಯಾಗಿತ್ತು. ಅಲ್ಲೇ ಕುಳಿತು ಕಣ್ಣು ಹೊರಹಾಯಿಸಿದಾಗ, ಮಧ್ಯಮಗಾತ್ರದ ಖಾಲಿ ಹಾಳೆಯ ಮೇಲೆ ಕೈಬರಹದಲ್ಲಿ ಬರೆದ ಒಂದು ಫಲಕ ಕಾಣಿಸಿತು :

**ಅಕ್ಷರ ಕಲಾ ಮತ್ತು ಕ್ರೀಡಾ ಗ್ರಂಥಾಲಯ**

ಇರುಪ್ಪು ಕಲ್ಲಕುಡಿ, ಎಡಮಾಲಕುಡಿ

ಇಡುಕ್ಕಿ ಜಿಲ್ಲೆಯ ಈ ದಟ್ಟ ಕಾಡಿನೊಳಗೊಂದು ಗ್ರಂಥಾಲಯವೇ ? ನಮಗೆ ಅಚ್ಚರಿಯಾಯ್ತು. ಕೇರಳ ಭಾರತದಲ್ಲೇ ಅತಿ ಹೆಚ್ಚು ಅಕ್ಷರಸ್ಥರನ್ನು ಹೊಂದಿರುವ ರಾಜ್ಯವಾದರೂ ಈ ಪ್ರದೇಶದಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚೇನಿಲ್ಲ. ಇದು ರಾಜ್ಯದ ಪ್ರಥಮ ಚುನಾಯಿತ ಆದಿವಾಸಿ ಗ್ರಾಮಸಭೆ. ಇಲ್ಲಿರುವುದು ಕೇವಲ ೨೫ ಕುಟುಂಬಗಳು. ಯಾರಾದರು ಗ್ರಂಥಾಲಯದಲ್ಲಿ ಪುಸ್ತಕವನ್ನು ಪಡೆಯುವ ಮನಸ್ಸು ಮಾಡಿದರೂ, ಅಂಥವರು ಅಲ್ಲಿನ ದುರ್ಗಮ ಕಾಡಿನಲ್ಲಿ ಮೈಲಿಗಟ್ಟಲೆ ನಡೆದು ಬರಬೇಕು. ಹಾಗೆ ಯಾರಾದರು ಬಂದಾರೆ ?

ಹೌದೆನ್ನುತ್ತಾರೆ ೭೩ ವರ್ಷ ವಯಸ್ಸಿನ, ಚಹಾದಂಗಡಿಯ ಒಡೆಯ, ಕ್ರೀಡಾ ಸಂಚಾಲಕ ಮತ್ತು ಗ್ರಂಥಪಾಲಕ ಪಿ. ವಿ. ಚಿನ್ನತಂಬಿ. ಅವರ ಅಂಗಡಿ ಇರುವುದು ಎಡಮಾಲಕುಡಿಯ ಬೆಟ್ಟದ ದಾರಿಯ ನಡುವೆ. ಅಂಗಡಿಯೊಳಗೆ ಚಹಾ, ಚೂಡಾ, ಬಿಸ್ಕಿಟು, ಬೆಂಕಿಪೊಟ್ಟಣ ಮತ್ತು ಒಂದಷ್ಟು ದಿನಸಿ ಸಾಮಾನುಗಳು ನಿಮಗೆ ಕಾಣಸಿಗುತ್ತವೆ. ಕಾಡಿನೊಳಗಿನ, ಕೇರಳದ ಈ ಅತಿ ಚಿಕ್ಕ ಪಂಚಾಯತಿಯಲ್ಲಿರುವುದು ಒಂದೇ ಆದಿವಾಸಿ ಗುಂಪು – ಅದು ಮುತವನರದ್ದು. ಅಲ್ಲಿ ತಲುಪಲು ಮುನ್ನಾರ್ ಬಳಿಯ ಪೆಟ್ಟಿಮುಡಿಯಿಂದ ೧೮ ಕಿಲೋಮೀಟರ್‌ಗಳಷ್ಟು ನಡೆದುಕೊಂಡೇ ಹೋಗಬೇಕು. ಮುತವನ ಗುಂಪಿಗೆ ಸೇರಿದ್ದ ಚಿನ್ನತಂಬಿಯ ಚಹಾದಂಗಡಿ–ಗ್ರಂಥಾಲಯ ತಲುಪಲು ಇನ್ನಷ್ಟು ನಡೆಯಬೇಕು. ನಾವು ಕಾಲೆಳೆದುಕೊಂಡು ಅಲ್ಲಿ ಸೇರುವಾಗ ಚಿನ್ನತಂಬಿಯ ಮಡದಿ ಕೆಲಸಕ್ಕೆ ಹೋಗಿಯಾಗಿತ್ತು. ನಾನು ಚಹಾ ಕುಡಿದಾಯ್ತು, ದಿನಸಿಗಳನ್ನು ಪರಿಶೀಲಿಸಿಯಾಯ್ತು. ಈ ಹಾಳಾದ ಗ್ರಂಥಾಲಯ ಇನ್ನಾದರೂ ಕಣ್ಣಿಗೆ ಬೀಳಬೇಡವೆ ? ಗೊಂದಲಗೊಂಡು ಚಿನ್ನತಂಬಿಯನ್ನೇ ಕೇಳಿದೆ. ಆತ ದೊಡ್ಡದಾಗಿ ನಗುತ್ತಾ ನಮ್ಮನ್ನೆಲ್ಲಾ ಒಳಗೆ ಕರೆದ. ಮನೆಯ ಕತ್ತಲೆ ಮೂಲೆಯಲ್ಲೆರಡು ದೊಡ್ಡ ಗೋಣಿಚೀಲಗಳಿದ್ದವು. ಒಂದಿಪ್ಪತ್ತೈದು ಕಿಲೋಗಿಂತಲೂ ಜಾಸ್ತಿಯೇ ಅಕ್ಕಿ ತುಂಬಬಹುದು – ಅಂಥಾ ಭಾರೀ ಚೀಲಗಳು. ಇದರೊಳಗೆ ಆತನ ೧೬೦ ಪುಸ್ತಕಗಳ ಗ್ರಂಥ ಭಂಡಾರ ನೆಲೆಸಿತ್ತು. ಗ್ರಂಥಾಲಯ ಕಾರ್ಯ ನಿರ್ವಹಿಸುವಾಗ ತೆರೆದಿಡುವಂತೆ, ಆತ ಒಂದೊಂದೇ ಪುಸ್ತಕವನ್ನು ನಮ್ಮೆದುರು ತೆರೆದಿಡಲಾರಂಭಿಸಿದ. ನಮ್ಮ ಎಂಟು ಜನರ ತಂಡ ಅಚ್ಚರಿಯಿಂದ ಆ ಪುಸ್ತಕಗಳ ಮೇಲೆ ಕೈಯಾಡಿಸಿದೆವು. ಪ್ರತಿಯೊಂದು ಪುಸ್ತಕವೂ ಕ್ಲಾಸಿಕ್, ಸಾಹಿತ್ಯಕ, ಸೈದ್ಧಾಂತಿಕ ಮತ್ತು ರಾಜಕೀಯ ವರ್ಗಕ್ಕೆ ಸೇರಿದಂಥವು. ರೋಚಕ ಸಾಹಿತ್ಯ, ಬೆಸ್ಟ್ ಸೆಲ್ಲರ್‌ಗಳು ಮತ್ತು 'ಚಿಕ್ ಲಿಟ್' ಸಾಹಿತ್ಯಗಳಿಗೆ ಇಲ್ಲಿ ಜಾಗವಿರಲಿಲ್ಲ. ತಮಿಳು ಮಹಾಕಾವ್ಯ 'ಶಿಲಪ್ಪದಿಕಾರಂ'ನ ಮಲಯಾಳಂ ಅನುವಾದ ಅಲ್ಲಿತ್ತು. ವೈಕೊಂ, ಎಂ. ಟಿ. ವಾಸುದೇವನ್ ನಾಯರ್, ಕಮಲಾದಾಸ್, ಎಂ. ಮುಕುಂದನ್, ಲಲಿತಾಂಬಿಕ ಮುಂತಾದವರ ಕೃತಿಗಳೆಲ್ಲಾ ಅಲ್ಲಿದ್ದವು. ಗಾಂಧೀಜಿಯ ಕೃತಿಗಳ ಪಕ್ಕದಲ್ಲೇ ತೀವ್ರಗಾಮಿಯಾಗಿದ್ದ ಥೊಪ್ಪಿಲ್ ಬಸಿಯವರ 'ಯೂ ಮೇಡ್ ಮಿ ಎ ಕಮ್ಯೂನಿಸ್ಟ್' ಕೂಡ ಇತ್ತು.

ಉಳಿದ ಭಾರತೀಯರಿಗಿಂತ ಆದಿವಾಸಿಗಳಲ್ಲಿ ಬಡತನ ಹೇಗೆ ಹೆಚ್ಚೋ ಹಾಗೆಯೇ ಶಿಕ್ಷಣವನ್ನು ಅರ್ಧದಲ್ಲಿಯೇ ಬಿಟ್ಟು ಹೋಗುವವರ ಸಂಖ್ಯೆಯೂ ಹೆಚ್ಚೇ. ಮನೆಯೊಳಗಿನಿಂದ ಹೊರ ಬಂದ ಮೇಲೆ "ನಿಜಕ್ಕೂ, ಜನ ಇಲ್ಲಿ ಇಂಥದ್ದನ್ನೆಲ್ಲಾ ಓದುತ್ತಾರೆಯೇ ?" ಎಂದು ಚಿನ್ನತಂಬಿಯನ್ನು ಕೇಳಿದೆವು. ಮುತವನರಲ್ಲಿ ಎಲ್ಲ ಆದಿವಾಸಿಗಳಂತೆ ಅಕ್ಷರಸ್ಥರ ಸಂಖ್ಯೆ ಕಡಿಮೆ, ಬಡತನ–ಹಸಿವು ಹೆಚ್ಚು. ನಮ್ಮ ಪ್ರಶ್ನೆಗೆ ಉತ್ತರವೆಂಬಂತೆ ಆತ ತನ್ನ ಗ್ರಂಥಾಲಯದ ಕಡತ ಹೊರತೆಗೆದ. ಅದರಲ್ಲಿ ಅಲ್ಲಿನ ಜನ ಬಂದು ಪುಸ್ತಕ ಪಡೆದು ಮರಳಿಸಿದ್ದ ದಾಖಲೆಗಳು ಚೂರೂ ತಪ್ಪದಂತಿದ್ದವು. ಆ ಹಳ್ಳಿಯಲ್ಲಿ ಇದ್ದದ್ದು ಕೇವಲ ೨೫ ಕುಟುಂಬಗಳು. ಆದರೆ ಕೇವಲ ೨೦೧೩ರಲ್ಲೇ ಜನ ೩೭ ಪುಸ್ತಕಗಳನ್ನು ಪಡೆದು ಓದಿದ್ದರು. ಅಂದರೆ ಇಡೀ ಗ್ರಂಥಾಲಯದ ಸರಿಸುಮಾರು ಕಾಲುಭಾಗ. ಇದು ಮೆಚ್ಚಬೇಕಾದದ್ದೇ. ಈ ಗ್ರಂಥಾಲಯಕ್ಕೆ ಆಜೀವ ಸದಸ್ಯರಾಗಬೇಕಾದರೆ ೨೫ ರೂಪಾಯಿಗಳನ್ನು ಕಟ್ಟಬೇಕು. ಇಲ್ಲವಾದರೆ ಪ್ರತಿ ತಿಂಗಳೂ ಎರಡು ರೂಪಾಯಿಗಳನ್ನು ಪಾವತಿಸಿದರಾಯ್ತು. ಅಂಗಡಿಯಲ್ಲಿ ಹಾಲು, ಸಕ್ಕರೆಯಿಲ್ಲದ ಕಪ್ಪು ಚಹಾ ಉಚಿತವಾಗಿ ಸಿಗುತ್ತದೆ. ತಿನ್ನಲೇನಾದರು ಬೇಕಿದ್ದರೆ ದುಡ್ಡು ಕೊಟ್ಟು ಕೊಂಡರಾಯ್ತು. ಕೆಲವೊಮ್ಮೆ ಇಲ್ಲಿ ಊಟ ಕೂಡ ಉಚಿತವಾಗಿ ಸಿಗುತ್ತದೆ. ನಾವು ಪೇಟೆಯವರ ದಯನೀಯ ಓದಿನ ಹವ್ಯಾಸದ ಬಗ್ಗೆ ಯೋಚಿಸುತ್ತಾ ಗ್ರಂಥಾಲಯದ ಕಡತದ ಪುಟ ತಿರುವುತ್ತಿದ್ದೆವು. 'ಶಿಲಪ್ಪದಿಕಾರಂ' ಅನ್ನು ಒಂದಕ್ಕಿಂತ ಹೆಚ್ಚು ಬಾರಿ ಪಡೆದುಕೊಳ್ಳಲಾಗಿದೆ. ಈ ವರ್ಷ ಈಗಾಗಲೇ ಹಲವಾರು ಪುಸ್ತಕಗಳನ್ನು ಪಡೆದು ಓದಲಾಗಿದೆ. ಇಲ್ಲೆಲ್ಲೋ ಹೆಸರಿರದ ಕಾಡಿನ ಮೂಲೆಯಲ್ಲಿ ಬಡ ಆದಿವಾಸಿ ಗುಂಪೊಂದು ತಣ್ಣಗೆ ಉತ್ಕೃಷ್ಟ ಸಾಹಿತ್ಯವನ್ನು ಆಸ್ವಾದಿಸುತ್ತಿತ್ತು. ನಮ್ಮ ತಂಡದಲ್ಲಿದ್ದ ಹಲವರು ಜೀವನ ನಡೆಸಲು ಬರೆಯುವುದನ್ನೇ ಉದ್ಯೋಗ ಮಾಡಿಕೊಂಡವರು. ಅಂತಹ ನಮ್ಮ 'ಅಹಂ'ಗಳಿಗೆ ಏಟು ನೀಡಲು ಮತ್ತೊಂದು ವಿಷಯ ಕಾದಿತ್ತು. ನಮ್ಮ ಗುಂಪಿನಲ್ಲಿದ್ದ ಕೇರಳ ಪ್ರೆಸ್ ಅಕಾಡೆಮಿಯ ಮೂವರು ಪತ್ರಿಕೋದ್ಯಮದ ವಿದ್ಯಾರ್ಥಿಗಳಲ್ಲಿ ಒಬ್ಬನಾದ ಎಸ್. ವಿಷ್ಣು, ಕೊಂಚ ವಿಭಿನ್ನವಾದ 'ಪುಸ್ತಕ'ವೊಂದನ್ನು ಪತ್ತೆ ಮಾಡಿದ. ಅದು ಗೆರೆ ಹಾಕಿದ್ದ ಪುಟ್ಟ ನೋಟ್ ಬುಕ್ಕು. ಅದರಲ್ಲಿ ಹಲವಾರು ಹಾಳೆಗಳು ಕೈಬರಹದಿಂದ ತುಂಬಿದ್ದವು. ಇನ್ನೂ ಹೆಸರಿಡದ ಅದು ಚಿನ್ನತಂಬಿಯ ಆತ್ಮಕಥೆ. "ಇನ್ನೂ ಹೆಚ್ಚು ಬರೆಯಲಾಗಿಲ್ಲ" ಎಂದು ಚಿನ್ನತಂಬಿ ನಾಚಿಕೆಯಿಂದ ನುಡಿದರು. ಅದರಿಂದ ಒಂದಿಷ್ಟನ್ನು ಓದುವಂತೆ ಚಿನ್ನತಂಬಿಯನ್ನು ನಾವು ಪುಸಲಾಯಿಸಿದೆವು. ಇದ್ದದ್ದನ್ನು ಇದ್ದಂತೆಯೇ, ಚುಟುಕಾಗಿ ಹೇಳಿದ್ದ ಬರಹವದು. ಆತನ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಮೂಡಿದ ಮೊದಲ ದಿನಗಳು ಅಲ್ಲಿ ದಾಖಲಾಗಿವೆ. ಗಾಂಧೀಜಿಯ ಹತ್ಯೆಯಾದ ವರ್ಷ (ಆತನಿಗಾಗ ಒಂಭತ್ತು ವರ್ಷ ವಯಸ್ಸು) ಮತ್ತು ಆ ಘಟನೆಯಿಂದ ಆತನ ಮೇಲಾದ ಪ್ರಭಾವದಿಂದ ಕತೆ ಶುರುವಾಗುತ್ತದೆ.

ಚಿನ್ನತಂಬಿಗೆ ಎಡಮಾಲಕುಡಿಗೆ ಮರಳಿ, ಗ್ರಂಥಾಲಯ ನಡೆಸಲು ಸ್ಫೂರ್ತಿಯಾದದ್ದು ಮುರಳಿ ಮಾಸ್ತರರು. ಮುರಳಿ ಮಾಸ್ತರರೆಂದರೆ ಈ ಭಾಗಗಳಲ್ಲಿ ದಂತಕತೆಯಿದ್ದಂತೆ. ಇಲ್ಲಿನ ಪಂಚಾಯಿತಿಯಿಂದಾಚೆಗಿರುವ ಮಾಂಕುಲಂಗೆ ಸೇರಿದ ಇನ್ನೊಂದು ಆದಿವಾಸಿ ಗುಂಪಿನ ಮುರಳಿ ಮಾಸ್ತರರು ತಮ್ಮ ಜೀವನವನ್ನು ಮುತವನರಿಗಾಗಿ ಕೆಲಸ ಮಾಡಲು ಮುಡಿಪಾಗಿಟ್ಟರು. ಮುರಳಿ ಮಾಸ್ತರರು ದೆಸೆಯಿಂದ ಈ ದಾರಿ ಹಿಡಿದ ಚಿನ್ನತಂಬಿ ತಾನು ಮಾಡುತ್ತಿರುವುದೇನು ಬಹಳ ದೊಡ್ಡ ಕೆಲಸವಲ್ಲ ಎಂದು ವಿನಯದಿಂದ ಹೇಳುತ್ತಾರೆ.

ಎಡಮಾಲಕುಡಿಯ ೨೮ ಗ್ರಾಮಗಳಲ್ಲಿ ಒಂದಾದ ಇದರಲ್ಲಿ ಒಟ್ಟು ಜನಸಂಖ್ಯೆ ೨೫೦೦ ಇರಬಹುದು. ಇಡೀ ಜಗತ್ತಿನಲ್ಲಿರುವ ಮುತವನರ ಸಂಖ್ಯೆ ಇಷ್ಟೇ. ಇರುಪ್ಪು ಕಲ್ಲಕುಡಿಯಲ್ಲಿ ಒಂದು ನೂರು ಜನರಿರಬಹುದು. ನೂರು ಚದರ ಕಿ. ಮೀ. ಅರಣ್ಯ ಪ್ರದೇಶವನ್ನು ವ್ಯಾಪಿಸಿಕೊಂಡಿರುವ ಎಡಮಾಲಕುಡಿಯಿಂದ ಸಿಗುವುದು ೧೫೦೦ ವೋಟುಗಳಷ್ಟೆ. ನಾವು ಇಲ್ಲಿಂದ ಹೊರ ಹೋಗಲು ಬಳಸಬೇಕಿದ್ದ ರಸ್ತೆಯನ್ನು ತಮಿಳುನಾಡಿನ ವಾಲಪರೈಗೆ ಹೋಗುತ್ತಿದ್ದ ಕಾಡಾನೆಗಳು ಆಕ್ರಮಿಸಿಕೊಂಡ ಕಾರಣ ನಾವು ಬಳಸುದಾರಿಯ ಮೊರೆ ಹೋಗಬೇಕಾಯ್ತು. ಆದರೂ, ಈ ದುರ್ಗಮ ಕಾಡಿನಲ್ಲಿ, ಬಡ ಓದುಗರಿಗೆ ಪುಸ್ತಕ ಮತ್ತು ಚಹಾ–ಚೂಡಾಗಳನ್ನು ನೀಡುತ್ತಾ ಚಿನ್ನತಂಬಿ ಒಂಟಿ ಗ್ರಂಥಾಲಯವೊಂದನ್ನು ನಡೆಸುತ್ತಿದ್ದಾರೆ. ಸದಾ ಮಾತಾಳಿಗಳಿಂದ ತುಂಬಿದ್ದ ನಮ್ಮ ಗುಂಪು ಅಂದು ಮಾತ್ರ ಸದ್ದಿಲ್ಲದೆ, ಚಿನ್ನತಂಬಿಯನ್ನು ನೆನೆಯುತ್ತಾ, ಕಾಡಿನ ಕಡಿದಾದ ದಾರಿಯಲ್ಲಿ ಸಾಗಿತ್ತು.

*(ಪಿ. ಸಾಯಿನಾಥ್‌ರ 'The Wilderness Library'ಯ ಅನುವಾದ)*

**ಮೂಲ : ಪಿ. ಸಾಯಿನಾಥ್, ಕನ್ನಡಕ್ಕೆ : ಸಾಕ್ಷಿ**

ಕೇರಾಫ್ : ಕೆ. ಅರವಿಂದ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ

ಬೆಂಗಳೂರು ಪ್ರಧಾನ ಕಚೇರಿ, ಅವಿನ್ಯೂ ರಸ್ತೆ, ಬೆಂಗಳೂರು – ೫೬೦ ೦೦೨

# ಕನ್ನಡ ಮತ್ತು ತೆಲುಗು ಗಾದೆಗಳು : ಒಂದು ಅವಲೋಕನ

**ಜಾ**ನಪದ ಸಾಹಿತ್ಯ ಪ್ರಕಾರಗಳಲ್ಲಿ ಅತ್ಯಂತ ಜನಪ್ರಿಯವಾದ ಪ್ರಕಾರವೆಂದರೆ ಗಾದೆ. ಇದಕ್ಕೆ ಯಾವುದೇ ಜನಾಂಗ, ಅಂತಸ್ತು, ಪ್ರಾದೇಶಿಕ ಭೇದಗಳಿಲ್ಲ. ಅವುಗಳನ್ನು ಸಮಾಜದ ಸರ್ವ ಸದಸ್ಯರೂ ಬಳಸುತ್ತಾರೆ. 'ಗಾದೆ ವೇದಕ್ಕೆ ಸಮಾನ' ಎಂಬ ಬಹುಜನ ಸಮ್ಮತವಾದ ಗಾದೆಯೂ ನಮ್ಮಲ್ಲುಂಟು. ಈ ಮಾತು ಬೈಬಲ್ ಮತ್ತು ಕುರಾನ್‌ಗಳಿಗೂ ಅನ್ವಯವಾಗುತ್ತದೆ. ಈ ಗ್ರಂಥಗಳು ತಮ್ಮದೇ ಧರ್ಮದ ನೀತಿಯೊಂದನ್ನು ಸಾರುತ್ತವೆ. ಅಂತೆಯೇ ಗಾದೆಗಳೂ ತಮ್ಮದೇ ಆದ ನೀತಿಯನ್ನು ಸಾರುತ್ತವೆ. ಗಾದೆ ಮತ್ತು ವೇದಕ್ಕಿರುವ ಒಂದು ವ್ಯತ್ಯಾಸವೆಂದರೆ, ವೇದ ಕೇವಲ ಕೆಲವರ ಸ್ವತ್ತು. ಗಾದೆ ಸರ್ವರ ಸ್ವತ್ತು. ಅಷ್ಟೇ ಅಲ್ಲದೆ, 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಮಾತಿದೆ. ಈ ಮಾತು ಗಾದೆಗಳ ಮಹತ್ವವನ್ನು ಹೇಳುತ್ತದೆ.

ಮನುಷ್ಯ ತನ್ನ ಪ್ರತಿನಿತ್ಯದ ಬದುಕಿನಲ್ಲಿ ವೈವಿಧ್ಯಮಯ ಅನುಭವಗಳನ್ನು ಪಡೆಯುತ್ತಿರುತ್ತಾನೆ. ಸುತ್ತಲಿನ ಪರಿಸರ, ಜೀವನದ ಸ್ಥಿತಿಗತಿಗಳು, ರೀತಿ ನೀತಿಗಳು ಅವನ ಬದುಕಿನ ಮೇಲೆ ನಿರಂತರವಾಗಿ ಪ್ರಭಾವ ಬೀರುತ್ತಲೇ ಇರುತ್ತವೆ. ಆಗ ಹಲವರ ಅನುಭವಗಳು ಯಾರದೋ ಬಾಯಲ್ಲಿ ಮಾತಾಗಿ ಹೊರಬೀಳುತ್ತವೆ. ಈ ಮಾತನ್ನು ಒಂದು ಸಮುದಾಯದ ಹಲವು ವ್ಯಕ್ತಿಗಳು ಸ್ವೀಕರಿಸಿ ಬಳಸುತ್ತಾರೆ. ಇಂಥ ಅನುಭವ ಆಧಾರಿತ ಮಾತುಗಳು ಮಹತ್ವದ ಅರ್ಥವನ್ನು ಒಳಗೊಂಡಿರುತ್ತವೆ. ಹಾಗಾಗಿ ಗಾದೆ ಎಂದರೆ, ಒಂದು ಅನುಭವದ ಜೊತೆ ಮತ್ತೊಂದು ಅನುಭವವನ್ನು ಹೋಲಿಸಿ ನೋಡುವುದು ಎಂದು ಅರ್ಥೈಸಬಹುದು.

ಭೂತಕಾಲದ ಅನುಭವಗಳು ಭವಿಷ್ಯತ್ ಕಾಲದಲ್ಲಿ ಗಾದೆಗಳಾಗಿ ಪರಿಣಮಿಸುತ್ತವೆ. ಅಂದರೆ, ಅನುಭವದಿಂದ ಜ್ಞಾನ ಲಭಿಸುತ್ತದೆ. ಆ ಜ್ಞಾನ ಮತ್ತೊಂದು ಅನುಭವವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ.

ಮನುಷ್ಯನ ಜೀವನಕ್ಕೂ ಗಾದೆಗಳಿಗೂ ಒಂದು ಮಧುರವಾದ ಸಂಬಂಧವಿದೆ. ಯಾವುದೇ ಗಾದೆ ಸಮಯಕ್ಕೆ ಸರಿಯಾಗಿ ತೋಚದೆ ಹೋದರೆ 'ಅದಾವುದೋ ಗಾದೆ ಹೇಳಿದಂತೆ ನಿನ್ನ ಕತೆ' ಎನ್ನುತ್ತೇವೆ. ಅಂದರೆ ಆ ಸಮಯಕ್ಕೆ ಹಾಗೆ ಹೇಳುವುದೇ ಒಂದು ಗಾದೆಯಾಗಿ ಪರಿಣಮಿಸಿದೆ.

ಕನ್ನಡದಲ್ಲಿ ಗಾದೆ, ತೆಲುಗಿನಲ್ಲಿ ಸಾಮೆತ, ತಮಿಳಿನಲ್ಲಿ ಪಳಮೊಳಿ, ಮಲೆಯಾಳಂನಲ್ಲಿ ಪಳಿಂಚೊಳ್, ಸಂಸ್ಕೃತದಲ್ಲಿ ಆಭಾಣಕಂ, ಹಿಂದಿಯಲ್ಲಿ ಕಹೋವತ್, ಇಂಗ್ಲಿಷ್‌ನಲ್ಲಿ ಪ್ರಾವರ್ಬ್ – ಹೀಗೆ ಗಾದೆ ವಿವಿಧ ಭಾಷೆಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಕಾಣುತ್ತದೆ.

ದ್ರಾವಿಡ ಭಾಷೆಗಳಲ್ಲಿಯೇ ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಅತ್ಯಂತ ಹತ್ತಿರದ ಬಾಂಧವ್ಯವನ್ನು ಹೊಂದಿರುವ ಕನ್ನಡ ಮತ್ತು ತೆಲುಗು ಭಾಷೆಗಳ

ಮನುಷ್ಯನ ಜೀವನಕ್ಕೂ ಗಾದೆಗಳಿಗೂ ಒಂದು ಮಧುರವಾದ ಸಂಬಂಧವಿದೆ. ಯಾವುದೇ ಗಾದೆ ಸಮಯಕ್ಕೆ ಸರಿಯಾಗಿ ತೋಚದೆ ಹೋದರೆ 'ಅದಾವುದೋ ಗಾದೆ ಹೇಳಿದಂತೆ ನಿನ್ನ ಕತೆ' ಎನ್ನುತ್ತೇವೆ. ಅಂದರೆ ಆ ಸಮಯಕ್ಕೆ ಹಾಗೆ ಹೇಳುವುದೇ ಒಂದು ಗಾದೆಯಾಗಿ ಪರಿಣಮಿಸಿದೆ.

ದ್ರಾವಿಡ ಭಾಷೆಗಳಲ್ಲಿಯೇ ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಅತ್ಯಂತ ಹತ್ತಿರದ ಬಾಂಧವ್ಯವನ್ನು ಹೊಂದಿರುವ ಕನ್ನಡ ಮತ್ತು ತೆಲುಗು ಭಾಷೆಗಳ ಗಾದೆಗಳಲ್ಲಿರುವ ಸಮಾನ ಅರ್ಥಗಳುಳ್ಳ ಗಾದೆಗಳನ್ನು ವ್ಯಾಖ್ಯಾನಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ವೀರೇಶ್ ಕೆ. ಎಂ.**

ಗಾದೆಗಳಲ್ಲಿರುವ ಸಮಾನ ಅರ್ಥಗಳುಳ್ಳ ಗಾದೆಗಳನ್ನು ವ್ಯಾಖ್ಯಾನಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಸಾಮಾನ್ಯವಾಗಿ ಕನ್ನಡ ಮತ್ತು ತೆಲುಗು ಗಾದೆಗಳನ್ನು ಪುರಾಣಕ್ಕೆ, ವ್ಯಕ್ತಿಗಳಿಗೆ, ಹಾಸ್ಯಕ್ಕೆ, ನಂಬಿಕೆ – ವಿಶ್ವಾಸಗಳಿಗೆ, ಪ್ರಕೃತಿಗೆ, ವ್ಯವಸಾಯಕ್ಕೆ, ಬಂಧುತ್ವಕ್ಕೆ, ಮನೋವಿಶ್ಲೇಷಣೆಗೆ, ಕೌಟುಂಬಿಕ, ನೀತಿ ಪ್ರಧಾನ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಗಾದೆಗಳಲ್ಲಿ ಸಾಮ್ಯತೆಯನ್ನು ಕಾಣುತ್ತೇವೆ.

ಭಾರತ ದೇಶ ಹೆಜ್ಜೆ ಹೆಜ್ಜೆಗೂ ದೇವಸ್ಥಾನಗಳಿರುವ ಪೌರಾಣಿಕ ಪ್ರಪಂಚ. ಈ ದೇಶದಲ್ಲಿ ಪ್ರಚಲಿತದಲ್ಲಿರುವ ಮಹಾಭಾರತ, ರಾಮಾಯಣ ಎಂಬ ಕಾವ್ಯಗಳಲ್ಲಿ ಪೌರಾಣಿಕ ಅಂಶಗಳಿವೆ. ಇವುಗಳಿಗೆ ಸಂಬಂಧಿಸಿದಂತೆ ಗಾದೆಗಳು ಹುಟ್ಟಿಕೊಂಡಿವೆ. 'ಕಾರ್ಯವಾಸಿ ಕತ್ತೆ ಕಾಲಾದರೂ ಹಿಡಿ' ಎಂಬ ಗಾದೆ ಕನ್ನಡದಲ್ಲಿ ಪ್ರಚಲಿತದಲ್ಲಿದೆ. ಇದಕ್ಕೆ ಸಂವಾದಿಯಾಗಿ ತೆಲುಗಿನಲ್ಲಿ 'ವಸುದೇವುಡು ಗಾಡಿದ ಕಾಳ್ಳನು ಪಟ್ಟುಕುನ್ನಾಡು' ಎಂಬ ಗಾದೆ ಇದೆ. ಅಂದರೆ, ಕಷ್ಟ ಕಾಲದಲ್ಲಿ ದುಷ್ಟರನ್ನೂ ಗೌರವಿಸಬೇಕು. ಹಾಗೆಯೇ ವಸುದೇವ ಗೌರವಾನ್ವಿತ ವ್ಯಕ್ತಿಯಾದರೂ ಕತ್ತೆಯ ಕಾಲನ್ನು ಹಿಡಿದನು. ಅಂದರೆ ಇಲ್ಲಿಯೂ ಒಂದು ಅಗತ್ಯವಾದ ಕಾರ್ಯವನ್ನು ಸಾಧಿಸಿಕೊಳ್ಳುವ ತಂತ್ರವಿದೆ.

'ರಾತ್ರಿಯೆಲ್ಲಾ ರಾಮಾಯಣ ಕೇಳಿ ಬೆಳಿಗ್ಗೆ, ರಾಮ ಸೀತೆಗೆ ಏನಾಗಬೇಕೆಂದು ಕೇಳಿದರಂತೆ' – ಇದು ರಾಮಾಯಣ ಆಧಾರಿತ ಗಾದೆ. ತೆಲುಗಿನಲ್ಲೂ 'ರಾತ್ರಂತ ರಾಮಾಯಣಂ ವಿನಿ, ರಾಮುನಿಕಿ ಸೀತ ಏಮಿ ಕಾವಾಲನಿ ಅಡಿಗಾಡಂಟ' ಎಂಬ ಗಾದೆ ಇದೆ.

ಸಮಾಜದಲ್ಲಿರುವ ವ್ಯಕ್ತಿಗಳು ತಮ್ಮ ಜ್ಞಾನ, ವೀರ ಪರಾಕ್ರಮ, ಮೂರ್ಖತನಗಳಿಂದಲೂ ಪ್ರಸಿದ್ಧ ರಾಗಿರುತ್ತಾರೆ. ಇವರ ಈ ಆದರ್ಶಗಳು ಗಾದೆಗಳಾಗಿ ಸೃಷ್ಟಿಯಾಗಿರುತ್ತವೆ. ಇಂತಹ ಗಾದೆಗಳು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪ್ರಚಲಿತದಲ್ಲಿವೆ. ಉದಾಹರಣೆಗೆ, 'ಇಬ್ಬರ ಜಗಳ ಮೂರನೆಯವನಿಗೆ ಲಾಭ'. ಅಂದರೆ ಯಾವುದೇ ಇಬ್ಬರು ವ್ಯಕ್ತಿಗಳ ನಡುವಿನ ವೈಷಮ್ಯ ಸಾಮಾನ್ಯವಾಗಿ ಮೂರನೇ ವ್ಯಕ್ತಿಗೆ ಲಾಭವನ್ನುಂಟುಮಾಡುತ್ತದೆ. ಇದಕ್ಕೆ ಸಂವಾದಿಯಾಗಿ ತೆಲುಗಿನಲ್ಲಿ 'ಇದ್ದರು ಕೊಟ್ಲಾಡಿತೆ ಮೂಡೇವಾಡಿಕಿ ಲಾಭಂ' ಎಂಬ ಗಾದೆ ಪ್ರಚಲಿತದಲ್ಲಿದೆ. ಇದೇ ರೀತಿಯಾಗಿ 'ಮಂಗನ ಕೈಯಲ್ಲಿ ಮಾಣಿಕ್ಯ' ಎಂಬುದು ವ್ಯಕ್ತಿಯ ಅಜ್ಞಾನವನ್ನು ಸೂಚಿಸುತ್ತದೆ. ತೆಲುಗಿನಲ್ಲಿ ಇದೇ ಅರ್ಥವನ್ನು ಸ್ಫುರಿಸುವ 'ಕೋತಿ ಚೇತಿ ಪೂಲ ದಂಡ' ಎಂಬ ಗಾದೆಯಿದೆ.

'ಮನೆ ಕಟ್ಟಿ ನೋಡು ಮದುವೆ ಮಾಡಿನೋಡು' : ಇಲ್ಲಿ ಮನೆ ಕಟ್ಟಲು ಯಜಮಾನ ಪಡುವ ಕಷ್ಟ ಮತ್ತು ಮಗಳ ಮದುವೆ ಮಾಡಲು ಅಸಮರ್ಥನಾದ ತಂದೆಯ ಸ್ಥಿತಿಯನ್ನು ಈ ಗಾದೆ ತಿಳಿಸುತ್ತದೆ. ಮನೆ ಕಟ್ಟುವುದು, ಮದುವೆ ಮಾಡುವುದು ಎರಡೂ ಒಂದೇ ಎನ್ನುವ ಅರ್ಥ ಇಲ್ಲಿ ಸ್ಫುರಿಸುತ್ತದೆ. ಇದೇ ರೀತಿಯಾಗಿ ತೆಲುಗಿನಲ್ಲಿ 'ಇಲ್ಲು ಕಟ್ಟಿ ಚೂಡು ಪೆಳ್ಳಿ ಚೇಸಿ ಚೂಡು' ಎಂಬ ಗಾದೆಯಿದೆ.

'ಅಕ್ಕನ ಚಿನ್ನವಾದರೂ ಅಕ್ಕಸಾಲೆ ತೊನೆಯದೇ ಬಿಡಲಾರ' ಎಂಬ ಮಾತು ಕನ್ನಡದಲ್ಲಿದೆ. ಒಡವೆಗಳನ್ನು ಮಾಡಲು ಅಕ್ಕಸಾಲಿಗನಿಗೆ ಹೇಳಿದರೆ ಅವನು ಸ್ವಲ್ಪವಾದರೂ ಕದಿಯದೆ ಇರಲಾರ. ತನ್ನ ಸೋದರಿಯೇ ಒಡವೆ ಮಾಡಲು ಹೇಳಿದರೂ ಅವನು ಕದಿಯದೆ ಇರಲಾರ. ಹಾಗಾಗಿ ಈ ಗಾದೆ ಹುಟ್ಟಿಕೊಂಡಿದೆ. ತೆಲುಗಿನಲ್ಲಿ 'ತಲ್ಲಿ ಬಂಗಾರಂ ಅಯಿನಾ ಕಂಸಾಲಿವಾಡು ದೊಂಗಲಕಮಾನಡು' ಎಂಬ ಗಾದೆಯಿದೆ.

ಬಂಧುತ್ವವನ್ನು ಆಧಾರವಾಗುಳ್ಳ ಗಾದೆಗಳು ಈ ಎರಡೂ ಭಾಷೆಗಳಲ್ಲಿವೆ. 'ಅಕ್ಕ ನಮ್ಮವಳಾದರೆ ಭಾವ ನಮ್ಮವನಾ'; ಹೆಣ್ಣಿಗೆ ತವರುಮನೆಯೆಂದರೆ ತುಂಬ ಪ್ರೀತಿ, ಅವಳು ತನ್ನ ತವರಿನವರಿಗೆ ಋಣಿಯಾಗಿರಲು ಇಚ್ಛಿಸುತ್ತಾಳೆ. ಅವಳ ಈ ಮನೋಭಾವವನ್ನು ಆಕೆಯ ಪತಿ ಸಹಿಸಲಾರ. ಹಾಗಾಗಿ ಈ ಗಾದೆ

ಸೃಷ್ಟಿಯಾಗಿದೆ. ತೆಲುಗಿನಲ್ಲಿ 'ಅಕ್ಕ ಮನದಿ, ಅಯಿತೆ ಭಾವ ಮನವಾಡಾ ?' ಎಂದಿದೆ.

ಮನುಷ್ಯನಿಗೆ ಆಸೆ ಇರಬೇಕು. ಆಸೆ ಇಲ್ಲದಿದ್ದರೆ ಜೀವನದಲ್ಲಿ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಆದರೆ, ಅತಿಯಾದ ಆಸೆ ಇರಬಾರದು. ಅದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವಂತೆ ಮಾಡುತ್ತದೆ. ಈ ಹಿನ್ನೆಲೆಯಲ್ಲಿ 'ಅತಿಯಾಸೆ ಗತಿ ಕೇಡು' ಎಂಬ ಮಾತಿದೆ. ತೆಲುಗಿನಲ್ಲಿಯೂ 'ಅತ್ಯಾಶ ಅನರ್ಥಕಂ' ಎಂಬ ಮಾತಿದೆ.

ಮನುಷ್ಯನ ಸಾಂಘಿಕ ಜೀವನದಲ್ಲಿ ಸಹಕಾರ ಅಥವಾ ಸಹಾಯ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಸಹಾಯ ಮಾಡಿದ ವ್ಯಕ್ತಿಗೆ ದ್ರೋಹ ಮಾಡಬಾರದೆಂದು ಹೇಳುವ 'ಅನ್ನ ಹಾಕಿದ ಮನೆಗೆ ಕನ್ನ ಹಾಕಬೇಡ' ಎಂಬ ಗಾದೆಯಿದೆ. ಇದಕ್ಕೆ ಸಂವಾದಿಯಾಗಿ ತೆಲುಗಿನಲ್ಲಿ 'ಅನ್ನಮು ಪೆಟ್ಟಿನವಾರಿಲ್ಲುಕಿ ಕನ್ನಮು ಪೆಟ್ಟುವಚ್ಚುನಾ ?' ಎಂಬ ಗಾದೆಯಿದೆ.

ಆತುರಾತುರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವ ವ್ಯಕ್ತಿಗಳನ್ನು ಕುರಿತು 'ಆತುರಗಾರನಿಗೆ ಬುದ್ಧಿ ಮಟ್ಟ' ಎಂಬ ನಾಣ್ಣುಡಿ ಇದೆ. ಅಂದರೆ, ಕೂಲಂಕಷವಾಗಿ ಯೋಚಿಸಿ ನಿರ್ಧಾರಗಳನ್ನು ತೆಗೆದುಕೊಳ್ಳದೆ, ಯಾವುದೋ ಗಡಿಬಿಡಿಯಲ್ಲಿ ನಿರ್ಧಾರಗಳನ್ನು ತೆಗೆದುಕೊಂಡು, ಅದರಿಂದ ತೊಂದರೆಗೆ ಒಳಗಾಗುವ ವ್ಯಕ್ತಿಗಳನ್ನು ಈ ಗಾದೆಯು ಪ್ರತಿನಿಧಿಸುತ್ತದೆ. ತೆಲುಗಿನಲ್ಲಿಯೂ ಇದಕ್ಕೆ ಸಂವಾದಿಯಾಗಿ 'ಆತುರಗಾನಿಕಿ ತೆಲಿವಿ ಮಟ್ಟು' ಎಂಬ ಮಾತಿದೆ.

ಯಾವುದೇ ವಸ್ತು ಅಥವಾ ಪ್ರಾಣಿಗಳಿಗೆ ತಮ್ಮದೇ ಆದ ಬೆಲೆಯಿರುತ್ತದೆ. ಈ ನಿಟ್ಟಿನಲ್ಲಿ 'ಆನೆ ಇದ್ದರೂ ಸಾವಿರ ಸತ್ತರೂ ಸಾವಿರ' ಎಂಬ ಮಾತಿಗೆ ಸಂವಾದಿಯಾಗಿ ತೆಲುಗಿನಲ್ಲಿ 'ಏನುಗು ಚಚ್ಚಿನ ಬ್ರತಿಕಿನ ವೆಯಿ' ಎಂಬ ಗಾದೆಯಿದೆ.

'ತಾನು ಮಾಡಿದ್ದು ಉತ್ತಮ, ಮಗ ಮಾಡಿದ್ದು ಮಧ್ಯಮ, ಆಳು ಮಾಡಿದ್ದು ಹಾಳು'. ಅಂದರೆ, ಅವರವರ ಕೆಲಸಗಳನ್ನು ಅವರವರೇ ಮಾಡಿಕೊಂಡರೆ ಒಳ್ಳೆಯದು. ಒಂದು ಕೆಲಸವನ್ನು ಬೇರೆಯವರು ಮಾಡಿದರೆ ಅದರಲ್ಲಿ ನ್ಯೂನತೆಗಳು ಹೆಚ್ಚಾಗಿ ಕಾಣಿಸುತ್ತವೆ. ಏಕೆಂದರೆ, ಆ ಕೆಲಸದ ಬಗ್ಗೆ ಸಂಪೂರ್ಣ ಪರಿಜ್ಞಾನ ಆ ವ್ಯಕ್ತಿಗೆ ಇಲ್ಲದಿರುವುದೇ ಅದಕ್ಕೆ ಕಾರಣ. ಹಾಗಾಗಿ ಅವರವರ ಕೆಲಸಗಳನ್ನು ಅವರವರೇ ಮಾಡಿಕೊಳ್ಳುವುದು ಉತ್ತಮ. ಅದೇ ಅಂತರಾರ್ಥವನ್ನು ಸ್ಫುರಿಸುವ ಗಾದೆ ತೆಲುಗಿನಲ್ಲಿ ಹೀಗಿದೆ : 'ಎವರಿ ಪನಿ ವಾರೇ ಚೇಸಿಕೋವಾಲಿ'.

ತಪ್ಪು ಮಾಡಿದವನು ತನ್ನ ಜೀವನದಲ್ಲಿ ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಲೇಬೇಕು. ಈ ಅರ್ಥದಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಗಾದೆ ಮಾತುಗಳು ಸೃಷ್ಟಿಯಾಗಿವೆ. 'ಉಪ್ಪು ತಿಂದವನು ನೀರು ಕುಡಿಯಲೇಬೇಕು', 'ಉಪ್ಪು ತಿನ್ನವಾಡು ನೀಳ್ಳು ತಾಗುತಾಡು'.

ಪ್ರಪಂಚದಲ್ಲಿ ಎಲ್ಲ ಶಾಸ್ತ್ರಗಳನ್ನು ಬಲ್ಲವರಿಲ್ಲ, ಏನನ್ನೂ ತಿಳಿಯದವರಿಲ್ಲ. ಅನೇಕರು ತಮಗೆ ಆಸಕ್ತಿಯಿರುವ ಯಾವುದಾದರೊಂದು ವಿಷಯದಲ್ಲಿ ಪರಿಣತಿಯನ್ನು ಹೊಂದಿರುತ್ತಾರೆ. ಹಾಗಾಗಿ 'ಎಲ್ಲ ಬಲ್ಲವನಿಲ್ಲ, ಏನೂ ತಿಳಿಯದವನಿಲ್ಲ' ಎಂಬ ಮಾತು ಪ್ರಚಲಿತದಲ್ಲಿದೆ. ಇದೇ ಅರ್ಥವನ್ನು ಹೇಳುವ 'ಅನ್ನಿ ತೆಲಿಸಿನವಾಡು ಲೇಡು, ಏಮಿ ತೆಲಿಯನಿವಾಡೂ ಲೇಡು' ಎಂಬ ಮಾತಿದೆ.

ತಾರತಮ್ಯ ಮಾಡುವವರನ್ನು ಕುರಿತು 'ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದು ಕಣ್ಣಿಗೆ ಸುಣ್ಣ' ಎಂಬ ಗಾದೆ ಬಳಕೆಯಲ್ಲಿದೆ. ಅದರ ಅರ್ಥ ಪ್ರತಿಯೊಬ್ಬರನ್ನು ಸಮಾನ ದೃಷ್ಟಿಯಿಂದ ನೋಡಬೇಕು ಎಂದು. ತೆಲುಗಿನಲ್ಲಿ 'ಒಕ ಕಂಟ್ಲು ವೆಣ್ಣ, ಮರೋಕ ಕಂಟ್ಲು ಸುನ್ನಮು' ಎಂಬ ಗಾದೆಯಿದೆ.

ಸತ್ಯವನ್ನು ಹೇಳಬೇಕು ಸುಳ್ಳನ್ನು ಹೇಳಬಾರದು. ಸುಳ್ಳನ್ನು ಹೇಳಿದರೆ ಅದನ್ನು ಮುಚ್ಚಿಹಾಕಲು ಮತ್ತೊಂದು ಸುಳ್ಳನ್ನು ಹೇಳಬೇಕಾಗುತ್ತದೆ. ಹಾಗಾಗಿ ಕನ್ನಡದಲ್ಲಿ 'ಒಂದು ಸುಳ್ಳನ್ನು ಮುಚ್ಚಲು ಒಂಬತ್ತು ಸುಳ್ಳು' ಎಂದಿದ್ದರೆ ತೆಲುಗಿನಲ್ಲಿ 'ಒಕ ಅಪದ್ಧಮು ಕಮ್ಮಡಾನಕು ವೇಯಿ ಅಪದ್ಧಮುಲು' ಎಂಬ ಗಾದೆಗಳು ಎರಡೂ ಭಾಷೆಗಳಲ್ಲಿ ಪ್ರಚಲಿತದಲ್ಲಿವೆ.

'ಕತ್ತೆ ಬಲ್ಲುದೆ ಕಸ್ತೂರಿ ಪರಿಮಳ'. ಈ ಮಾತು ಅಜ್ಞಾನಿಗಳನ್ನು ಕುರಿತು ಹೇಳುವಂಥದ್ದು. ಇದೇ ಅರ್ಥವನ್ನು 'ಗಾಡದಕೇಮಿ ತೆಲುಸು ಗಂಧಮು ಸೊಂಪು' ಎಂಬ ಗಾದೆ ತೆಲುಗಿನಲ್ಲಿ ರೂಢಿಯಲ್ಲಿದೆ.

ದುಡಿಯದೆ ಸಂಪತ್ತನ್ನು ಹಾಳುಮಾಡುವವರನ್ನು ಕುರಿತು 'ಕೂತು ತಿಂದರೆ ಕುಡಿಕೆ ಹೊನ್ನು ಸಾಲದು' ಎಂಬ ಗಾದೆ ಮಾತು ಕನ್ನಡದಲ್ಲಿದೆ. ತೆಲುಗಿನಲ್ಲಿ 'ಕೂರ್ಚುಂಡಿ ತಿಂಟೂಂಟೆ ಕೊಂಡ ಕೂಡಾ ಸಮಿಸಿಪೋತುಂದಿ' ಎಂಬ ಮಾತು ಬಳಕೆಯಲ್ಲಿದೆ.

ಸಂಸ್ಕಾರವನ್ನು ಕುರಿತಾದ ಗಾದೆಗಳೂ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿವೆ. 'ತಾಯಿಯಂತೆ ಮಗಳು, ನೂಲಿನಂತೆ ಸೀರೆ'. ಅಂತೆಯೇ ತೆಲುಗಿನಲ್ಲಿ 'ತಲ್ಲಿನಿ ಪೋರಿನ ಬಿಡ್ಡ ನೂಲನು ಪೋಲಿನ ಗುಡ್ಡ' ಎಂದರೆ ತಾಯಿಯ ಗುಣವೇ ಮಗಳಲ್ಲಿ ಇರುತ್ತದೆ ಎಂಬ ನಂಬಿಕೆ ನಮ್ಮಲ್ಲಿದೆ. ಅಂತೆಯೇ ಸದೃಢವಾದ ನೂಲಿನಿಂದ ಸೀರೆಯನ್ನು ನೇಯ್ದರೆ, ಸೀರೆ ಉತ್ತಮ ಗುಣಮಟ್ಟವನ್ನು ಹೊಂದಿರುತ್ತದೆ. ತಾಯಿಯ ಗುಣ ಸರಿಯಿಲ್ಲದಿದ್ದರೆ ಮಗಳ ಗುಣವೂ ಸರಿಯಾಗಿರುವುದಿಲ್ಲ ಎಂಬ ಸ್ಥೂಲ ಅರ್ಥವನ್ನು ಈ ಗಾದೆ ಸೂಚಿಸುತ್ತದೆ.

ಈ ರೀತಿಯಾಗಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿರುವ ಗಾದೆಗಳಲ್ಲಿ ಸಾಮ್ಯತೆಯನ್ನು ಕಾಣುತ್ತೇವೆ. ಈ ಗಾದೆಗಳು ಯಾವಾಗ ಹುಟ್ಟಿದವು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ಆದರೆ, ಅವುಗಳನ್ನು ಅವಲೋಕಿಸಿ ಊಹಿಸಲು ಸಾಧ್ಯವಿದೆ. ಉದಾಹರಣೆಗೆ, 'ತುಪಾಕಿ ಹೊಟ್ಟೆಯಲ್ಲಿ ಫಿರಂಗಿ ಹುಟ್ಟಿದ ಹಾಗೆ', ತೆಲುಗಿನಲ್ಲಿ 'ತುಪಾಕಿ ಕಡುಪುನ ಫಿರಂಗಿ ಪುಟ್ಟಿನಟ್ಲು' – ಅಂದರೆ ತುಪಾಕಿ ಭಾರತಕ್ಕೆ ಬಂದು ಕನ್ನಡ ಮತ್ತು ತೆಲುಗರಿಗೆ ಪರಿಚಯವಾದ ನಂತರ ಈ ಗಾದೆ ಹುಟ್ಟಿಕೊಂಡಿರಬೇಕು.

ಗಾದೆಗಳನ್ನು ಹರಿಯುವ ನದಿಗೆ ಹೋಲಿಸಬಹುದು. ಅವು ತಲೆಮಾರಿನಿಂದ ತಲೆಮಾರಿಗೆ ಹರಿಯುತ್ತಲೇ ಬಂದಿವೆ. ಅವುಗಳನ್ನು ನಿತ್ಯ ಪ್ರವಾಹವೆಂದರೂ ತಪ್ಪಾಗಲಾರದು.

**ವೀರೇಶ್ ಕೆ. ಎಂ.**
ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಮದರಾಸು ವಿಶ್ವವಿದ್ಯಾಲಯ
ಮರೀನಾ ಆವರಣ, ಚೆನ್ನೈ – ೬೦೦ ೦೦೫

ಕಾವ್ಯಲೋಕ

# ಗಝಲ್



ನೀ ಬರುವಾಗ ಹುಣ್ಣಿಮೆಯ ಬೆಳದಿಂಗಳು ಹರಡುತ್ತಿತ್ತು
ಸುಮಧುರ ಭಾವಗೀತೆ ಸಪ್ತಸ್ವರ ಸೂಸಿದಂತೆ ॥

ನೀ ಬರುವಾಗ ಹಗಲೆ ಹಾಲಾಗಿ ಹರಿಯುತ್ತಿತ್ತು
ಹದ ಬಲಿತ ಹಣ್ಣೊಂದು ಜೇನಿನಲಿ ಬೆರೆತಂತೆ ॥

ನೀ ಬರುವಾಗ ಕಿರು ತೊರೆಯೊಂದು ಮೆರೆಯುತ್ತಿತ್ತು
ಒಲುಮೆಯಾಳವೆಲ್ಲವನು ನೆನೆದು ತೆರೆಯುವಂತೆ ॥

ನೀ ಬರುವಾಗ ಮೊಗ್ಗೆಲ್ಲಾ ಹೂವಾಗಿ ತಲೆಯೆತ್ತುತ್ತಿತ್ತು
ಕಣ್ಣಿನಂಗಳದಲ್ಲಿ ನೂರು ಬಗೆಯ ಚಿತ್ತಾರ ಬಿಡಿಸಿದಂತೆ ॥

ನೀ ಬರುವಾಗ ಹೊಂಗನಸಿನ ಹೂ–ಬಳ್ಳಿ ಬೆಳೆಯುತ್ತಿತ್ತು
ಹೃದಯಂಗಳದಲ್ಲಿ ಉಸಿರೆ ಹಸಿರಾಗಿ ಚಿಗುರಿದಂತೆ ॥

ನೀ ಬರುವಾಗ ಭೂಮಿ ವರ್ಷಧಾರೆಗಾಗಿ ಕಾಯುತ್ತಿತ್ತು
ಪ್ರೀತಿ–ಪ್ರೇಮದಂಗಳದಲ್ಲಿ ಮನಸು ಮಧುವಾದಂತೆ ॥

ನೀ ಬರುವಾಗ ಋತುಮಾನವೇ ಸಂತಸದಿ ನಲಿಯುತ್ತಿತ್ತು
ಬರಿದಾದ ನನ್ನೆದೆಯಲ್ಲಿ ಮಂದಾರ ಹೂವೊಂದು ಅರಳಿದಂತೆ ॥

ನೀ ಬರುವಾಗ ಮೌನದಲಿ ಬರೆದ ಕವನ ಮಾತಿನಲಿ ಮಿಡಿಯುತ್ತಿತ್ತು
ಮಳೆಬಿಲ್ಲಿನ ಅಂಚಿನಲಿ ಸೀಳಿ ಬರುವ ಗುಡುಗು–ಮಿಂಚಿನಂತೆ ॥

**ಭೀಮರಾಯ ಚಿಂಚನಕರ**

ಚ. ಲಿಂಗರಾಜ ಸೊಟ್ಟಪ್ಪನವರ



# ಮನೆ ಬೇಕಾಗಿದೆ

ತಿಂಗಳ ಕಥೆ

**ವಿ**ದ್ಯಾ ನಗರ, ರಾಜೇಂದ್ರ ನಗರ, ಅಶ್ವಿನಿ ನಗರ ಎಲ್ಲವನ್ನೂ ಸುತ್ತಿ ಆಗಿದೆ. ನಮಗೆ ಮನೆ ಸಿಗುವ ಲಕ್ಷಣಗಳು ಕಾಣಲಿಲ್ಲ. ಒಂದು ತಿಂಗಳಿಂದ ಅಲೆಯುತ್ತಿದ್ದೇವೆ. 'ಮನೆ ಖಾಲಿ ಇದೆ' ಎಂಬ ಬೋರ್ಡ್ ಇದ್ದರೂ ಚೌಕಾಸಿ ಮಾಡಿ ವಿಚಾರಿಸಿದರೆ "ನೋಡೋಣಾ" ಎಂದು ಹೇಳಿ ಸಾಗಹಾಕುವ ಜನರ ಮನಃಸ್ಥಿತಿ ವಿಚಿತ್ರವೆನಿಸಿತು.

ಮನೆತನದ ಹೆಸರು ಕೇಳುವಲ್ಲಿನ ಉದ್ದೇಶ ನಿಧಾನವಾಗಿ ಅರ್ಥವಾಯಿತು. ಕೆಲವರಿಂದ ಮುಖಲಕ್ಷಣ, ಬಟ್ಟೆ, ಮಾತಿನ ಶೈಲಿ, ನೋಡಿ ಅಳೆದು ತೂಗಿ ಆದ ನಂತರ ಒಳಗೆ ಕರೆದು ಮತ್ತೊಂದಿಷ್ಟು ವಿಚಾರಿಸಿ "...ನೋಡೋಣ, ಇನ್ನೊಬ್ಬರು ನೋಡಿ ಹೋಗಿದ್ದಾರೆ. ಅವರು ಬರದಿದ್ದರೆ..." ಎನ್ನುವ ಸಬೂಬು. ಅವರ ಮಾತು ಮುಗಿಯುವ ಮುನ್ನವೆ ನಮಗೆ ಈ ಮನೆ ಸಿಗುವದಿಲ್ಲ... ಅಂತ ಗೊತ್ತಾಗುವಷ್ಟು ಈ ವಿಷಯದಲ್ಲಿ ನಿಷ್ಣಾತರಾಗಿಹೋಗಿದ್ದೆವು. ನಮಗಿದ್ದ ಎಲ್ಲ ವಿಶೇಷಣಗಳನ್ನು ಈ ಸರ್‌ನೇಮ್ ಅಳಿಸಿ ಹಾಕುತ್ತಿತ್ತು. ಆದರೆ ನಾವು ಈ ಊರಲ್ಲಿ ಇರಲೇಬೇಕಿತ್ತು.

'ಮನೆ ಖಾಲಿ ಇದೆ' ಎಂಬ ಬೋರ್ಡ್ ಇರುವ ಮನೆಗಳು ನಮಗಲ್ಲದೆ ಇನ್ನಾರಿಗಾಗಿ ? ಪ್ರಶ್ನೆ ಕಾಡಿತು. ಇಂಥದೆ ಬೋರ್ಡಿನ ಮತ್ತೊಂದು ಮನೆಯ ಮುಂದೆ ನಾವು ನಿಂತೆವು. ಮನೆ ಬಹಳ ದಿನಗಳಿಂದ ಖಾಲಿ ಇರುವುದು ಗಮನಕ್ಕೆ ಬಂದಿತ್ತು. ಭರವಸೆ ಇರಲಿಲ್ಲವಾದರೂ ನಮ್ಮನ್ನು ಒಳಗೊಳ್ಳುವಂತವರ ಮನೆ ಸಿಗಬಹುದು ಎಂಬ ವಿಶ್ವಾಸ ಇತ್ತು. ನಮ್ಮನ್ನು ನೋಡಿದ

"...ಮೇಡಮ್ಮರ, ಸರ್ರಗೆ ಗೊತ್ತಾಗಂಗಿಲ್ರೀ. ಅವ್ರ ಮನ್ಯಾಗ ಈರಭದ್ರ ದೇವ್ರ ಐತ್ರೀ, ಕಪ್ಪು ಕಡಿ ಆ ದೇವ್ರಿಗೆ ನಡೆಂಗಿಲ್ರೀ... ಈರ್‌ಭದ್ರ ದೇವ್ರ ಇರಾ ಮನ್ಯಾಗ ಇರದಂದ್ರ ಬೆಂಕೀನಾ ಉಡೇದಾಗ ಕಟ್ಕೆಂಡಂಗರೀ... ಬರೇ ತತ್ತಿ ಆಮ್ಲೆಟ್ ಹಾಕಿ ನೋಡ್ರಿ. ನೀವು ಹಾವು ಚೋಳು ಬರ್ಲಿಕ್ಕಂದ್ರ ಅವಾಗ ಹೇಳ್ರೀ..." ಈ ಪುಣ್ಯಾತ್ಮ ಏನು ಹೇಳ್ತದಾನೋ ಅಂತ ಪಿಳಿ ಪಿಳಿ ಕಣ್ಣು ಬಿಡತೊಡಗಿದೆವು.

# ಈ ರಾತ್ರಿಗಳೇ ಹೀಗೆ

(೧)

**ಈ** ರಾತ್ರಿಗಳೇ ಹೀಗೆ
ಧುತ್ತನೆರಗಿ ಕಡಲಿನಂತೆ, ಮನವೆಂಬ ಮರಳು ದಂಡೆಯ ಮೇಲೆ
ಅಡ್ಡಾದಿಡ್ಡಿಯಾಗಿ ಬಿದ್ದವುಗಳನೆಲ್ಲ ಓರಣಗೊಳಿಸಿ
ಅಥವಾ
ಮತ್ತೊಂದಷ್ಟನ್ನು ತಂದೆಸೆದು
ಮಜಾ ನೋಡುತ್ತವೆ;
ನಿದ್ದೆಗೆಟ್ಟ ಈ ಬಡಪಾಯಿ
ಖಾಲಿ ಹಾಳೆಗಳನ್ನೇ ದಿಟ್ಟಿಸುತ್ತಾ
ರಾತ್ರಿ ಕಳೆಯುತ್ತಾನೆ;
ಆಗದ ಕ್ರಿಯೆಗೆ ಮರುಗಿ
ಅಥವಾ ಕರಗಿ ಒಂದಷ್ಟು.

(೨)

ಎಲ್ಲೆ ರಾತ್ರಿಗಳೇ !
ಇನ್ನಾದರೂ ಕರಗಿರಿ
ಅವನ ಪ್ರೇಯಸಿಯ ಹಾಗೆ
ಕಿವಿಗೊಟ್ಟು ಕೇಳಿ
ಅವನೆದೆಗೆ ಒರಗಿ ಪಿಸುಮಾತು
ಅಲ್ಲೂ ಅರಳಿದ್ದಾವು ಸಂಪಿಗೆ, ಕೇದಗೆ,
ಅವಳ ತುರುಬಿಗಾಗುವಷ್ಟಾದರೂ ಸೂಜಿಮಲ್ಲಿಗೆ.

ಬಟ್ಟಲ ತುಂಬ ವಿರಹದ ಶರಾಬು
ಸುರಿದು ಕೊಡಿ
ಕವಿತೆಗಟ್ಟಲಿ ಅವನೂ.

**ನವೀನ್ ಕುಮಾರ್ ಎ.**
ಸಹ ಶಿಕ್ಷಕ. ಸರ್ಕಾರಿ ಪ್ರೌಢಶಾಲೆ, ಸಿದ್ಧರಮಠ, ಕೊಪ್ಪ ತಾಲೂಕು
ಚಿಕ್ಕಮಗಳೂರು ಜಿಲ್ಲೆ

ಮಾಲೀಕರು ಒಳಗೆ ಕರೆದರು. ಮತ್ತೆ ಅಂಥದೆ ವಿಚಾರಣೆ. ಪೊಲೀಸರಂತೆ ಕಂಡ ಮಾಲೀಕರು, "ಬೇಕಿದ್ದರೆ ಮನೆ ನೋಡಬಹುದು" ಎಂದರು. ಮನೆ ಸಿಕ್ಕಷ್ಟೆ ಸಂತಸವಾಯಿತು. ಮೊಟ್ಟಮೊದಲ ಬಾರಿ ಅವರು ನಮ್ಮವರು ಅಂತನ್ನಿಸಿತು.

ಬಾಗಿಲು ತೆರೆದಾಗ ದೊಡ್ಡದಾಗಿ ಕಿರ್‌ಗುಟ್ಟಿತು. ಒಳಗೆ ಬಾವಲಿಯೊಂದು ಅಡ್ಡಾದಿಡ್ಡಿ ಹಾರಾಡತೊಡಗಿತು. ಹಾಲ್‌ನಲ್ಲಿ ಯಾರೋ ಸ್ವಾಮಿಯೊಬ್ಬರ ಫೋಟೊ. ಕೆಳಗೆ ಹೆಸರು ಬರೆದಿದೆ. ಅಲ್ಲಲ್ಲಿ ಜೇಡ. ಧೂಳು... ಕಮಟು ವಾಸನೆ ಮೂಗಿಗಡರಿದವು. ಇಷ್ಟಾದರೂ ಈ ಎಲ್ಲವನ್ನೂ ಸ್ಥಾನಪಲ್ಲಟಗೊಳಿಸಿ ನಾವಿರಬೇಕು ಎನ್ನಿಸಿತು. ಓಕೇ... ಎಂದಿತು ಹೈರಾಣಾಗಿದ್ದ ಮನಸ್ಸು. ಮಾಲೀಕರ ಮುಖದಲ್ಲಿ ಮಂದಹಾಸ. ಬಾಡಿಗೆ, ಅಡ್ವಾನ್ಸು, ಕರೆಂಟ್ ಬಿಲ್ಲು... ಸುಣ್ಣ ಬಣ್ಣ... ವರ್ಷಕ್ಕೆ ಇಂತಿಷ್ಟು ಶೇಕಡ ಬಾಡಿಗೆ ಹೆಚ್ಚಳ... ಅಂತೆಲ್ಲಾ ಒಪ್ಪಿ ಮುಂಗಡವಾಗಿ ಸಾವಿರದ ಎರಡು ನೋಟುಗಳನ್ನು ಕೈಗಿಟ್ಟೆ. "ಯಾವಾಗಿಂದ ಬರ್ತೀರಿ... ಕ್ಲೀನು ಮಾಡಿಸ್ಬೇಕು" ಎಂದು ಮಾಲೀಕರು ಕೇಳಿದರು. ನಮಗೂ ಇದೇ ಬೇಕಿತ್ತು.

"ತಡೀರಿ... ಒಂದ ಕಪ್ಪ ಚಾ ಕುಡೆಣಂತ..." ಎನ್ನುತ್ತ ತಮ್ಮ ಹೆಂಡತಿಯನ್ನು ಕರೆದರು. ಅದು ಶಿಷ್ಟಾಚಾರಕ್ಕೆ ಎಂಬುದು ಗೊತ್ತಾಗಿ "ಬೇಡ ಬಿಡ್ರೀ" – ಎನ್ನುತ್ತ ಮೇಲೆದ್ದೆವು.

ಅಂತೂ ಮನೆ ಸಿಕ್ಕ ಖುಷಿಯಲ್ಲಿ ಹೊರಟಿದ್ದ ನಮ್ಮನ್ನು ಯಾರೋ ಕೂಗಿ ಕರೆದ ಹಾಗಾಗಿ ತಿರುಗಿ ನೋಡಿದರೆ ಶಿವಬಸಪ್ಪ ನಮ್ಮತ್ತ ಬರುತ್ತಿದ್ದ. ಇತ್ತಿತ್ತಲಾಗಿ ಪರಿಚಯವಾದವ. ಇದೇ ಏರಿಯಾದ ಮನುಷ್ಯ.

"...ಸರ್ರಾ, ಆ ಮನ್ಯಾಗ ಇರಾಕ್ಕ ಹೋಗಬ್ಯಾಡ್ರೀ... ನಿಮಗ ಚೋಲೊ ಆಗಂಗಿಲ್ಲ." ಅಂದ ಶಿವಬಸಪ್ಪ ಹೊಸ ಕತೆಯೊಂದನ್ನು ಶುರು ಮಾಡಿದ.

"...ಮೇಡಮ್ಮರ, ಸರ್ರಗೆ ಗೊತ್ತಾಗಂಗಿಲ್ರೀ. ಅವ್ರ ಮನ್ಯಾಗ ಈರಭದ್ರ ದೇವ್ರ ಐತ್ರೀ, ಕಪ್ಪು ಕಡಿ ಆ ದೇವ್ರಿಗೆ ನಡೆಂಗಿಲ್ರೀ... ಈರ್‌ಭದ್ರ ದೇವ್ರ ಇರಾ ಮನ್ಯಾಗ ಇರದಂದ್ರ ಬೆಂಕೀನಾ ಉಡೇದಾಗ ಕಟ್ಕೆಂಡಂಗರೀ... ಬರೇ ತತ್ತಿ ಆಮ್ಲೆಟ್ ಹಾಕಿ ನೋಡ್ರೀ. ನೀವು ಹಾವು ಚೋಳು ಬರ್ಲಿಕ್ಕಂದ್ರ ಅವಾಗ ಹೇಳ್ರೀ..." ಈ ಪುಣ್ಯಾತ್ಮ ಏನು ಹೇಳ್ತಿದಾನೋ ಅಂತ ಪಿಳಿ ಪಿಳಿ ಕಣ್ಣು ಬಿಡತೊಡಗಿದೆವು.

"ಜನಾ ಹೀಂಗರೀ ಸರ್ರಾ. ಯಾರ್‍ಗೆರ ಏನಾರ ಆಗ್‌ವಲ್ದ್ಯೇಕಾ ತಮಗ ಬಾಡಿಗಿ ಬಂದ್ರ ಸಾಕ್ ಅಂತಾರ..." ಎಂದ. ಮಾಂಸಾಹಾರಿಗಳಿಗೂ ಕೆಲ ದೇವರುಗಳಿಗೂ ಆಗಿಬರುವದಿಲ್ಲ ಎಂಬುದು ಗೊತ್ತಿರುವ ಸಂಗತಿಯೇ ಆಗಿತ್ತು. ಆದರೆ ಅಂತಹ ದೇವರುಗಳು ನಮ್ಮಂತವರ ವಿರುದ್ಧ ಹಾವು ಚೇಳುಗಳನ್ನು ಎತ್ತಿ ಕಟ್ಟುತ್ತಾರೆ ಎಂಬಂತೆ ಶಿವಬಸಪ್ಪ ಪ್ರತಿಪಾದಿಸುತ್ತಲಿದ್ದ. ನಮಗೆ ಇಂತಹ ವಿಷಯಗಳಲ್ಲಿ ನಂಬಿಕೆ ಇರಲಿಲ್ಲವಾದ್ದರಿಂದ, "ಶಿವಬಸಪ್ಪಣ್ಣರಾ, ಈ ಮನ್ಯಾಗ ಇರೊ ತಂಕ ಕಪ್ಪಕಡಿ ಬಿಟ್ರಾತೆಲ್ರೀ..." ಎನ್ನುತ್ತ ನನ್ನಾಕೆ ಪರಿಹಾರ ಸೂತ್ರ ಮುಂದಿಟ್ಟಳು. ಶಿವಬಸಪ್ಪನಿಗೆ ಸಮಾಧಾನವಾಗಲಿಲ್ಲ ಎಂದು ನಮಗೆ ಗೊತ್ತಾಯಿತು.

"ಹಂಗಲ್ರೀ ಮೇಡಮ್ಮರ, ನೀವ್ ನಮಗ ಬೇಕಾದ ಮಂದಿ ಅದೀರಿ... ನೀವು ನಂಬಾಕಿಲ್ಲ ಅಂತ ಸುಳ್ಳ ಬಿಟ್ಟೆ. ಖರೆ ಏನಂದ್ರ ಆ ಮನ್ಯಾಗ ಗಾಳೀ ಶಕಾ ಐತಿ. ಯಾರೂ ಬಾಡ್ಗೀ ಬರ್ದ ಏಟ ದಿವ್ಸ ಆತು ಗೊತ್ತೈತೇನ್ರಿ? ಎಂಬ ಪ್ರಶ್ನೆಯನ್ನು ಮುಂದಿಟ್ಟ. ಶಿವಬಸಪ್ಪನಿಗಿರುವದು ನಮ್ಮ ಬಗೆಗಿನ ಕಾಳಜಿಯೋ ಅಥವಾ ತನ್ನ ಜಾತಿ ಕುರಿತ ನಿಷ್ಠೆಯೋ, ತಿಳಿಯದಾಯಿತು. ಜೊತೆಗೆ, ಅವನು ಹೇಳುವದರಲ್ಲಿ ಸತ್ಯ ಇದ್ದಂತೆ ಕಂಡಿತು. ಏನು ಮಾಡುವದೆಂದು ತೋಚದೆ ಶಿವಬಸಪ್ಪನ ಮುಖ ನೋಡಿದೆವು.

"ಸರ್ರಾ, ನಾ ಹೇಳಬೇಕಂದ್ರ ಮದ್ಲೇಕಾ ಒಬ್ರು ಆ ಮನ್ಯಾಗ ಬಾಡಿಗಿ ಇದ್ದರ್ರಿ...

## ಕವಿತೆ

ತುಂಬು ಆಗಸದಿ
ಸಾವಿರ ತಾರೆಗಳ
ಹೊಳಪಿನಲಿ
ಹುಡುಕುತ್ತಿದ್ದೇನೆ

ನನ್ನೊಳಗಿನ
ಧ್ರುವತಾರೆ
ಕವಿತೆಯ !

ಶೋಭಾ ಪ್ರಮೋದ್
ರಾಯ್‌ಭಡ



ಉಡಪಿ ಕಡೆ ಮಂದಿ. ಬೇಕರಿ ಅಂಗಡಿ ಇಟ್ಕಂಡ ಇದ್ರರೀ. ಇರ್ತಾ ಇರತಾ ಏನಾತಂದ್ರ... ಗಂಡಾ ಅಂಗಡ್ಯಾಗ್ರೀ... ಹ್ಯಾಂತೀ ಮನ್ಯಾಗ. ನಮ್ಮ ಮಂದಿ ಸುದ್ದ ಇಲ್ರೀ... ಅಕೀ ಬಲು ಚೊಲೊ ಹೆಣಮಗಳ್ರೀ. ನೋಡಾಕ್ ಬೆಳ್ಳಗ ಚೆಂದ ಇದ್ಲು. ಓನರ್ ಮಗನಾ ಕೈ ಹಾಕ್ದಾ. ವಯಸ್ಸ್ಯಾಗ ಎಂಟತ್ತ ವರ್ಸಾ ಸಣ್ಣಾಂವ್ರೀ ಬೇಬರ್ಸೀ... ಏನಾತ ಏನ ಕತೀಯೊ ಗಂಡ ದಿನಾ ರಾತ್ರಿ ಹೊಡೆಂವಂದ್ರ ಹೊಡ್ಯಾಂವ... ಒಂದೀನಾ ಆಕಿ ಉರ್ಲ ಹಾಕ್ಯಂಡ ಸತ್ಲು... ಅಕೀನ ಗಾಳಿ ಆಗ್ಯಾಳ ಅಂತಾರ. ಆ ಓನರ್ ಮಗನೂ ಇತ್ತಿತ್ಲಾಗ ಹುಚ್ಚರಂತೆ ಮಾಡಕ್ಕತ್ತೇತಿ. ಅವರು ಇವತ್ತಿಗೂ ಉಜಳಣಿ ಆಗವಲ್ರು ನೋಡ್ರಿ..." ಮಾತು ಮುಗಿಸಿದ ಶಿವಬಸಪ್ಪ ಮುಖ ನೋಡಿದ.

ನನ್ನ ಹೆಂಡತಿಗೆ ಆಗಲೆ ಭಯ ಶುರುವಾಗಿತ್ತು. ಶಿವಬಸಪ್ಪ ಹೇಳಿದ್ದರಲ್ಲಿ ನಿಜವೆಷ್ಟು ಅಂತ ಮನಸ್ಸು ಲೆಕ್ಕ ಹಾಕತೊಡಗಿತು. ಅಶಕ್ತ ಮನಸ್ಸಿನ ಹೊಯ್ದಾಟದ ನಡುವೆಯೆ ಮನೆಗೆ ಮರಳಿದೆವು. ಈಗಿರುವ ಮನೆಯವರಿಗೆ ಜಾತಿ ಗೊತ್ತಾಗಿ ಮನೆ ಬಿಡಿಸುತ್ತಿದ್ದಾರೆ. ಏನೊಂದೂ ವಿಚಾರಿಸದೆ ಮನೆ ಕೊಟ್ಟ ಬಗ್ಗೆ ಅವರಲ್ಲಿರುವ ಪಶ್ಚಾತ್ತಾಪ ಅಷ್ಟಿಷ್ಟಲ್ಲ. ನಮ್ಮ ಕುರಿತು ಮೊದಲಿದ್ದ ಭಾವನೆಗಳು ಪಟಪಟನೆ ಬದಲಾಗಿವೆ. ಅವರ ನಿತ್ಯದ ಕಿರಿಕಿರಿ ಸಾಕಾಗಿಹೋಗಿದೆ. ಈ ಊರಲ್ಲಿ ಒಂದು ಸೈಟು ಹಿಡಿಯಲು ಜೀವನವಿಡೀ ಗಳಿಸಿದ್ದರಲ್ಲಿ ಅರ್ಧ ಸುರಿಯಬೇಕು. ಮನೆ ಕಟ್ಟಲು ಇನ್ನರ್ಧ. ಇಷ್ಟಕ್ಕೆ ಜೀವನ ಸಾರ್ಥಕ. ಕೃಷಿ ಮಾಡಲಾಗದ ಜಮೀನ್ದಾರರೆಲ್ಲ ತಮ್ಮ ಹೊಲಗಳನ್ನು ಸೈಟ್ ಮಾಡಿ ಮಾರುತ್ತಿದ್ದಾರೆ... ಗುಂಟೆ ಜಾಗಕ್ಕೆ ನನ್ನ ನೌಕರಿಯ ಕಿಮ್ಮತ್ತು ಸಮ ! ಆ ಜಮೀನುಗಳಲ್ಲಿ ರಕ್ತ, ಬೆವರು ಸುರಿಸಿ ದುಡಿದು ಮಣ್ಣಾಗಿಹೋದ ಅವೆಷ್ಟು ಸಂತತಿಗಳ ಕೂಸು ನಾನು. 'ಯಾವ ಪಹಣಿಯಲ್ಲೂ ನನ್ನ ಹೆಸರಿಲ್ಲ. ಅನಂತ ಆಗಸದಡಿ ಒಂದು ಸೂರಿಲ್ಲದ ನಾನು ಅನಾಥ...' ಎಂದೆಲ್ಲಾ ಎನಿಸತೊಡಗಿತು.

ನನ್ನ ಕಳವಳವನ್ನು ಗುರುತಿಸಿದ ಹೆಂಡತಿ ಸುಲಭವಾಗಿ ಮನೆ ದೊರೆಯ ಬಹುದಾದ ಸಲಹೆ ನೀಡಿದಳು. ...ಅವಳ ಜಾತಿ ಹೇಳಿ ಮನೆ ಗಿಟ್ಟಿಸಿಕೊಳ್ಳುವದು. ನನಗೆ ನನ್ನ ಅಸ್ತಿತ್ವವನ್ನೆ ಒತ್ತೆ ಇಡುತಿದ್ದೇನೆಯೆ... ಎನಿಸಿ ಅಲ್ಲಗಳೆದೆ. ಆದರೆ ನಮಗೊಂದು ಮನೆ ಬೇಕಿತ್ತು. ಅದು ದೆವ್ವವಿರುವ... ದೇವರು ಇಲ್ಲದಿರುವ... ಯಾವುದಾದರೂ ಆದೀತು. ಅದೇ ಮನೆಗೆ ಹೋಗುವದೆಂದು ನಿರ್ಧರಿಸಿದೆ.

✴ ✴ ✴

ತಿಂಗಳುಗಳು ಕಳೆದವು. ನೆಮ್ಮದಿಗೆ ಭಂಗ ಬರುವಂತಹ, ಭಯ ಬೀಳುವಂತಹ ಯಾವ ಘಟನೆಗಳೂ ಜರುಗಲಿಲ್ಲ. ಆದರೆ ಯಾವ ಸಮಯದಲ್ಲಾದರೂ ಭೂತ ಚೇಷ್ಟೆ ಶುರುವಾಗಬಹುದೆಂಬ ಆತಂಕ ಹೆಂಡತಿಗೆ ಇದ್ದೇ ಇತ್ತು. ಈ ನಡುವೆಯೆ ಅವಳಿಗೆ ಹೆರಿಗೆಯೂ ಆಯಿತು. ಮನೆ ತುಂಬ ಮಗುವಿನ ನಗು. ಮನೆ ಮಾಲೀಕರು ಆಗಾಗ ಮನೆ ಕಡೆ ಸುಳಿದಾಡುವದು... ವಿಚಿತ್ರವಾದ ಕುತೂಹಲದಿಂದ ಗಮನಿಸುವದು ಅಚ್ಚರಿ ತರಿಸತೊಡಗಿತು. ಮೊಟ್ಟೆ ಒಡೆದ ವಾಸನೆ ಮೂಗಿಗಡರಿತೆ ? ಇದು ಮತ್ತೊಂದು ಜಾತಿಯ ಪೀಕಲಾಟ ಅಂದುಕೊಂಡೆವಾದರೂ, ಅದು ಅಲ್ಲ ಎಂಬುದು ಕೆಲ ದಿನಗಳ ನಂತರ ಗೊತ್ತಾಯಿತು. ಆದರೆ ವಯೋವೃದ್ಧ ಮಾಲೀಕರ ಈ ಪರಿ ಕುತೂಹಲದ ವರ್ತನೆ ವಿಚಿತ್ರವೆನಿಸತೊಡಗಿತು. ಮನೆಯಲ್ಲಿರುವ ಮಗನ ಹುಚ್ಚು ಇವರಿಗೂ ಅಂಟಿಕೊಂಡಿರಬಹುದೆ ? ತುಸು ಗಾಬರಿಯಾಯಿತು.

ಮಾಲೀಕರು ಆಗಾಗ ಮನೆ ಕಡೆಗೆ ಬಂದು ಕುಶಲೋಪರಿ ವಿಚಾರಿಸುವದು ನಡೆದೇ ಇತ್ತು. ಹೊರಗಡೆಯೆ ನಿಲ್ಲುತ್ತಿದ್ದ ಅವರು ...ಒಳಗೆ ಕರೆಯುತ್ತಾರೋ ಏನೋ... ಅಂತ ನಿರೀಕ್ಷಿಸುತ್ತಿರುವಂತೆ ಇತ್ತು. ಆ ಗೋಜಿಗೆ ಹೋಗದೆ ಅವರ ವರ್ತನೆಯನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ.

ಅದೊಂದು ದಿನ ನಾನೂ ಮನೆಯಲ್ಲೆ ಇದ್ದೆ. ಇದ್ದಕ್ಕಿದ್ದಂತೆ ಮಾಲೀಕರು ಇಣುಕಿದಂತಾಯಿತು. ಹೊರಬಂದು ನೋಡಿದೆ. ಬಾಗಿಲ ಬಳಿಯೆ ಹಲ್ಲು ಕಿರಿದು




**ಮೊದಲು ಅವರನ್ನು ಪೋಟೋ ತೆಗೆಯಿರಿ, ನಂತರ ನಮ್ಮನ್ನು ತೆಗೆಯುವಿರಂತೆ!**

ನಿಂತಿದ್ದಾರೆ. ...ಒಳಗೆ ಬರ್ಬಹುದಾ ? ಕೇಳಿದರವರು. ಒಬ್ಬ ಅಸ್ಪೃಶ್ಯನ ಮನೆ ಮುಂದೆ ಇನ್ನೊಬ್ಬ ಅಸ್ಪೃಶ್ಯನು ನಿಂತ ಹಾಗೆ ಕಂಡಿತು. "ಬರ್ರೀ, ಇದು ನಿಮ್ಮದೆ ಮನೆ..." ಅನ್ನುತ್ತ ಮನಸ್ಸಿಲ್ಲದೆ ಒಳಗೆ ಕರೆದು ಕೂಡಿಸಿದೆ. ನನ್ನ ಯಾವ ಮಾತಿಗೂ ಕಾಯದ ಅವರು ತಮ್ಮಷ್ಟಕ್ಕೆ ಮನೆಯನ್ನು ಸುತ್ತಲೂ ಅವಲೋಕಿಸತೊಡಗಿದರು. ಅವರ ಪರೀಕ್ಷಾ ದೃಷ್ಟಿ ನನಗರ್ಥವಾಯಿತು. ಮತ್ತೇನೊ ಹೊಸ ಆತಂಕ ಶುರುವಾಗುವ ಲಕ್ಷಣವಿದ್ದಂತಿತ್ತು. ಚಹಾ ಕುಡಿತೀರಾ... ಅಂತ ಕೇಳಲೂ ಹಿಂಜರಿಕೆಯಾಯಿತು.

ಗೋಡೆ ಮೇಲಿನ ಫೋಟೊ ನೋಡಿ ...ಇದು ಯಾವ ದೇವ್ರು ? ಕೇಳಿದರು.

"ನಮ್ಮ ಮನೀ ದೇವ್ರು. ಗಾಳೆಮ್ಮ ಮರಿಯಮ್ಮ ಅಂತಾ" ಉತ್ತರಿಸುತ್ತಲೆ ತಲೆಗೆ ಹೊಳೆಯಿತು, ಹೇಗೆ ಮನೆತನದ ಹೆಸರಿನಿಂದ ಜಾತಿಯನ್ನು ಸಂಶೋಧಿಸ ಲಾಗುತ್ತದೊ ಹಾಗೆ ಈ ಮನೆ ದೇವರುಗಳ ಆಧಾರದಲ್ಲೂ... ಎಂಬ ಕಾಮನ್ ನಾನ್‌ಸೆನ್ಸ್ ತಕ್ಷಣಕ್ಕೆ ಅರಿವಿಗೆ ಬಂದಿತು. ಆ ಮನುಷ್ಯ ಮುಖದ ಮೇಲೆ ದೊಡ್ಡ ಮುಗುಳ್ನಗೆ ಹೊತ್ತು ಎದ್ದು ನಿಂತರು. "ಅಂಕಲ್ ಚಾ... ಮಾಡಾಕ್ ಇಟ್ಟೀನ್ರೀ..." ಅನ್ನುತ್ತ ನನ್ನ ಹೆಂಡತಿ ಒಳಗಿನಿಂದ ಮುಂಬಾಗಿಲಿಗೆ ಬಂದಳು. ಅವರಾಗಲೆ ಹೊರಟು ನಿಂತಿದ್ದರು. "ಇಲ್ಲಮ್ಮ, ಬೀಪಿ ಶುಗರ್ರು," ...ಅರ್ಧ ಮಾತಿನ ಗೆರೆ ಎಳೆದರು. ಮತ್ತೆ ನನ್ನ ಕಡೆಗೆ ನೋಡಿ "ಮತ್ತೇನ್ ಎಲ್ಲಾ ಅರಾಮಲ್ಲಾ...?" ಕೇಳಿದರು. ನಾನು ಹ್ಞೂಂ... ಎಂದೆ. ಮಗುವಿನ ಗಲ್ಲ ಮುಟ್ಟಿ "ಮುದ್ದ ಅದಾನ, ಅಂದ್ಹಂಗ ಏನ್ ಹೆಸರಿಟ್ಟೀರಿ ?" ಅವರ ಪ್ರಶ್ನೆಗೆ ನನ್ನ ಹೆಂಡತಿಯೆ ಉತ್ತರಿಸಿದಳು. ಅವರಲ್ಲಿ ಇನ್ನೂ ಏನೋ ಕೇಳುವದಿದ್ದಂತಿತ್ತು.

"ಈ ದೇವ್ರು ಪಾವರ್‌ಫುಲ್ಲಾ... ಅಂದ್ರ ಮಾಟಾ, ಮರಡಿ, ದೆವ್ವ, ಭೂತಾ ಇಂಥವಕ್ಕೇನಾದ್ರೂ" ಎನ್ನುತ್ತ ತಾವು ಇಟ್ಟುಕೊಂಡು ಬಂದಿದ್ದ ನಿಜ ವಿಚಾರವನ್ನು ಹೊರಹಾಕಿದರು. "ನಮ್ಮನ್ಯಾಗ ಒಂಚೂರು ಕಾಡಾಟ ಐತೀ... ನಮ್ ಹುಡುಗನೂ ಒಂಥರಾ ಮಾಡ್ತಾನ, ಅದಕ್ಕ..." ಮಾಲೀಕರು ಮುಖ ನೋಡಿದರು. "ಏನೊ ಗೊತ್ತಿಲ್ರಿ... ಮನೀ ದೇವ್ರು ಅಂತ ಹಾಕ್ಕೇವಿ ಅಷ್ಟ" ಎಂದೆ. ನನ್ನ ಮಾತಿಗೆ ಮುಗುಳ್ನಗುತ್ತ ಅಲ್ಲಿಂದ ಹೊರಟರು.

✴ ✴ ✴

ಸಂಜೆ ಗಾಳಿ ಸೇವನೆಗೆ ಮಹಡಿ ಮೆಟ್ಟಿಲೇರುತ್ತಿದ್ದ ನನ್ನನ್ನು ಯಾರೊ ಕರೆದಂತಾಗಿ ಹೊರಳಿ ನೋಡಿದೆ. ಮತ್ತೆ ಮನೆ ಮಾಲೀಕರು. "ಬರ್ರೀ, ಚಾ ಕುಡಿವಂತ್ರೀ" ಕರೆದರು. ಆಶ್ಚರ್ಯ ! ಇಷ್ಟು ದಿನಗಳ ನಂತರ ಮೊದಲ ಬಾರಿಗೆ ಆಹ್ವಾನ ! ಆತ್ಮೀಯತೆಯಿಂದ ಬರಮಾಡಿಕೊಂಡು ಚಹ ಕಪ್ಪು ಕೈಗಿಟ್ಟರು. ಇವರ ಮನೆಯಲ್ಲಿ ನಾನು ಚಹ ಕುಡಿಯಬಹುದು, ನಮ್ಮ ಮನೆಯಲ್ಲಿ ಇವರು ಕುಡಿಯಲಾರರು... ಇದರಲ್ಲಿ ಏನು ತೊಂದರೆ ಇರಬಹುದು ಎಂದು ಯೋಚಿಸುತ್ತ ಸುತ್ತಲೂ ಕಣ್ಣಾಡಿಸಿದೆ. ಗೋಡೆಯ ಮೇಲೆ ಗಾಳೆಮ್ಮ ಮರಿಯಮ್ಮ ನಗುತ್ತ ಕುಳಿತ್ತಿದ್ದಾರೆ.





ವಿಜಯನಗರದ ಶ್ರೀ ಕೃಷ್ಣದೇವರಾಯನು ಚಿಕ್ಕವನಿರುವಾಗ, ಅವನ ಚಿಕ್ಕಪ್ಪ ತನ್ನ ಮಕ್ಕಳಿಗೆ ಅಧಿಕಾರ ಸಿಗುವಂತೆ ಮಾಡಲು ಮಂತ್ರಿ ತಿಮ್ಮರಸನಿಗೆ ಶ್ರೀಕೃಷ್ಣದೇವರಾಯನನ್ನು ಕೊಂದು ಅವನ ಕಣ್ಣುಗಳನ್ನು ತಂದು ತೋರಿಸುವಂತೆ ಆದೇಶಿಸುತ್ತಾನೆ. ಆದರೆ ತಿಮ್ಮರಸನು ಕೊಲ್ಲದೆ ಅವನನ್ನು ಬಚ್ಚಿಟ್ಟು ಮೇಕೆಯ ಕಣ್ಣುಗಳನ್ನು ತಂದು ತೋರಿಸಿದನು. ಇದು ದೇಶಭಕ್ತಿ, ರಾಜಭಕ್ತಿಗೆ ಒಂದು ಉದಾಹರಣೆ.

# ಭಾರತದಲ್ಲಿ ಭ್ರಷ್ಟಾಚಾರ

## –ಒಂದು ಐತಿಹಾಸಿಕ ಅವಲೋಕನ

ಡಾ|| ಪಿ. ನಾಗಭೂಷಣಗೌಡ
ಡಾ|| ಎನ್. ಜಿ. ಸಂತೋಷ್

ಕೌಟಿಲ್ಯ ತನ್ನ ಅರ್ಥಶಾಸ್ತ್ರವೆಂಬ ಗ್ರಂಥದಲ್ಲಿ ರಾಜನಾದವನು ತನ್ನ ಅಧಿಕಾರಿಗಳ ಬಗ್ಗೆ ಎಚ್ಚರಿಕೆ ವಹಿಸಬೇಕು. ಕೆಲವು ಅಧಿಕಾರಿಗಳು, ಭ್ರಷ್ಟಾಚಾರಿಗಳು, ಮೋಸಗಾರರು, ಸುಳ್ಳುಗಾರರಾಗುವ ಸಾಧ್ಯತೆಯಿದ್ದು ಅವರ ಮೇಲೆ ಸದಾ ಗುಪ್ತ ಮೇಲ್ವಿಚಾರಣೆಯನ್ನು ನಡೆಸುತ್ತಿರಬೇಕು. ಇವರುಗಳು ಲೆಕ್ಕಪತ್ರದಲ್ಲಿ ವ್ಯತ್ಯಾಸ ಮಾಡುವುದು, ಲಂಚಗುಳಿತನ, ಅಂಕಿಗಳ ಮುಂದೆ ಸೊನ್ನೆ ಸೇರಿಸುವುದು ಮುಂತಾದ ಕೃತ್ಯಗಳನ್ನು ಮಾಡುತ್ತಿರುತ್ತಾರೆ. ಇಂತಹ ಅಧಿಕಾರಿಗಳನ್ನು ಸರಿದಾರಿಗೆ ತರಬೇಕು, ಇಲ್ಲವೆ ಅಪರಾಧಗಳನ್ನು ಕಂಡುಹಿಡಿದು ತಕ್ಕ ಶಿಕ್ಷೆಯನ್ನು ವಿಧಿಸಬೇಕು ಎಂದಿದ್ದಾನೆ. ಇದರಿಂದ ಪ್ರಾಚೀನ ಕಾಲದಲ್ಲಿಯೇ ಭ್ರಷ್ಟಾಚಾರವಿತ್ತು ಎಂದು ತಿಳಿಯಬಹುದು.

ಮೌರ್ಯರ ಆಸ್ಥಾನದಲ್ಲಿ ವೀರಾಚಾರಿ ಎಂಬಾತನು ಅಧರ್ಮತೆಯ ಸನ್ಯಾಸಿಯಾಗಿದ್ದನು. ಇವನು ಅರಮನೆಯಿಂದ ಪೂಜೆ – ಪುನಸ್ಕಾರ, ಯಜ್ಞದ ಹೆಸರಿನಲ್ಲಿ ಅರಿಷಿಣ, ಕುಂಕುಮ, ಹಣ್ಣು, ಧಾನ್ಯಗಳನ್ನು ಪಡೆದು ಗುಪ್ತವಾಗಿ ಮನೆಗೆ ಸರಬರಾಜು ಮಾಡುತ್ತಿದ್ದನು. ಇದನ್ನು ಪ್ರಧಾನ ಮಂತ್ರಿಯಾದ ಚಾಣಕ್ಯನು ನಿಲ್ಲಿಸಿದನು. ಇಂಥ ಕಪಟ ಸನ್ಯಾಸಿಗಳನ್ನು ಅರಮನೆಯಿಂದ ಹೊರಹಾಕಿದ್ದರಿಂದ ಬೊಕ್ಕಸಕ್ಕಾಗಿದ್ದ ನಷ್ಟ ಕಡಿಮೆಯಾಗಿ, ಆರ್ಥಿಕ ಸ್ಥಿತಿ ಉತ್ತಮಗೊಂಡಿತು. ಚಾಣಕ್ಯನು ತನ್ನ ಮನೆಯಲ್ಲಿ ಅರಮನೆಯ ಕೆಲಸವನ್ನು ನಿರ್ವಹಿಸುವಾಗ ಅರಮನೆಯ ದೀಪವನ್ನು ಉಪಯೋಗಿಸುತ್ತಿದ್ದನು. ತನ್ನ ಸ್ವಂತ ಕೆಲಸದ ಸಮಯದಲ್ಲಿ ತನ್ನ ಮನೆಯ ದೀಪವನ್ನು ಉಪಯೋಗಿಸುತ್ತಿದ್ದನು. ಇದು ಚಾಣಕ್ಯನ ಪ್ರಾಮಾಣಿಕತೆಯನ್ನು ತಿಳಿಸುತ್ತದೆ.

ಭಾರತದ ಮೊದಲ ಐತಿಹಾಸಿಕ ಗ್ರಂಥವಾದ ಕಲ್ಹಣನ 'ರಾಜತರಂಗಿಣಿ' ಗ್ರಂಥದಲ್ಲಿ ಆನಂದ ಎಂಬುವನು ಅಧಿಕಾರಿಗಳಿಗೆ ಹಣ ನೀಡಿ ಹುದ್ದೆಯನ್ನು ಕೊಂಡುಕೊಂಡನೆಂದು ತಿಳಿಸುತ್ತಾನೆ. ಇದಲ್ಲದೆ, ಬಿಜ್ಜ ಎಂಬ ಅಧಿಕಾರಿಯು ಅನೈತಿಕವಾಗಿ ಲಂಚ ಪಡೆದು ರಾಜನಷ್ಟೇ ಶ್ರೀಮಂತಿಕೆಯನ್ನು ಹೊಂದಿದ್ದನೆಂದು ಉಲ್ಲೇಖಿಸಿದ್ದಾನೆ. ಭ್ರಷ್ಟಾಚಾರದಲ್ಲಿ ತೊಡಗಿದಂತಹ ಅಧಿಕಾರಿಗಳನ್ನು ರಾಜ್ಯದಿಂದ ಗಡೀಪಾರು ಮಾಡಬೇಕು ಎಂದು ತಿಳಿಸುತ್ತಾನೆ.

ಕ್ರಿ. ಶ. ೭೧೨ರಲ್ಲಿ ಸಿಂದ್‌ನ ದಾಹಿರ್‌ನ ರಾಜ್ಯದ ಮೇಲೆ ಅರಬರು ಆಕ್ರಮಣ ನಡೆಸಿದರು. ಅರಬ್ ಸೇನಾನಿ ಮಹಮದ್ ಬಿನ್ ಖಾಸಿಂ ಸಿಂದ್‌ನ ಸೈನಿಕರಿಗೆ ಹಣವನ್ನು ನೀಡಿ ತನ್ನೆಡೆಗೆ ಸೆಳೆದುಕೊಂಡನು. ಇದರಿಂದಾಗಿ ಸಿಂದ್‌ನ ದಾಹಿರನು ಸೋಲಬೇಕಾಯಿತು.

ಗುಪ್ತವಂಶದ ಅರಸರ ಕೊನೆಯ ಅವಧಿಯಲ್ಲಿ ಪ್ರಾಂತ್ಯಾಧಿಕಾರಿಗಳು ಪ್ರಬಲರಾದರು. ಇವರು ಸಂಗ್ರಹಿಸಿದ ತೆರಿಗೆ ಹಣವನ್ನು ಸಂದಾಯ ಮಾಡದೆ ಸ್ವೇಚ್ಛೆಯಾಗಿ ಉಪಯೋಗಿಸ ತೊಡಗಿದರು. ಇದರಿಂದಾಗಿ ಆರ್ಥಿಕ ಮುಗ್ಗಟ್ಟು ತಲೆದೋರಿ ಗುಪ್ತರ ಅವನತಿಗೂ ಕಾರಣವಾಯಿತು.

ಕ್ರಿ. ಶ. ೧೧೭೬ರಲ್ಲಿ ಘೋರಿ ಮಹಮ್ಮದ್ ರಜಪೂತರು ಆಳುತ್ತಿದ್ದ ಸಿಂದ್ ಪ್ರಾಂತ್ಯದ ಉಚ್ ಪ್ರದೇಶದ ಮೇಲೆ ದಾಳಿ ಮಾಡಿ ವಿಫಲನಾದನು. ಅನಂತರ ಅಲ್ಲಿಯ ರಾಣಿಯೊಂದಿಗೆ ಗುಪ್ತ ಒಪ್ಪಂದ ಮಾಡಿಕೊಂಡು, ರಾಣಿಯಿಂದಲೇ ರಾಜನನ್ನು ಕೊಲ್ಲಿಸಿ, ಸುಲಭವಾಗಿ ಉಚ್ ಪ್ರದೇಶವನ್ನು ವಶಪಡಿಸಿಕೊಂಡನು.

ಅಲ್ಲಾ ಉದ್ದೀನ್ ಖಿಲ್ಜಿಯು ಸೈನ್ಯಕ್ಕೆ ಬೇಕಾದ ಉತ್ತಮ ತಳಿಯ ಕುದುರೆಗಳನ್ನು ಅರೇಬಿಯಾ ಮತ್ತು ಪರ್ಶಿಯಾದಿಂದ ಆಮದು ಮಾಡಿಕೊಳ್ಳುತ್ತಿದ್ದನು. ಆದರೆ ಖಿಲ್ಜಿಯ ಸೈನಿಕರು ಉತ್ತಮ ತಳಿಯ ಕುದುರೆಗಳನ್ನು ಬೇರೆಯವರಿಗೆ ಮಾರಾಟ ಮಾಡಿ ಬೇರೆ ಕುದುರೆಗಳನ್ನು ಹೆಸರಿಗೆ ಮಾತ್ರ ತೋರಿಸುತ್ತಿದ್ದರು. ಅಲ್ಲದೆ, ಕುದುರೆಗಳ ಸಂಖ್ಯೆಯನ್ನು ಹೆಚ್ಚು ತೋರಿಸುತ್ತಿದ್ದರು. ವಾರ್ಷಿಕ ಕುದುರೆ ಪರೇಡ್‌ನಲ್ಲಿ ಇದ್ದ ಕುದುರೆಗಳನ್ನೇ ಪದೇ ಪದೇ ಸುತ್ತಿಸುತ್ತಿದ್ದರು. ಈ ಮೋಸವನ್ನು ತಡೆಗಟ್ಟಲು ಖಿಲ್ಜಿಯು ಕುದುರೆಗಳಿಗೆ ದಾಗ್ ಅಥವಾ ಬರೆ ಹಾಕುವ ಪದ್ಧತಿಯನ್ನು ಜಾರಿಗೆ ತಂದನು. ಇದಲ್ಲದೆ ಸೈನಿಕ ಇಲಾಖೆಯಲ್ಲಿ ದಾಖಲಾತಿಯನ್ನು ಇಡುವ ಪದ್ಧತಿಯನ್ನು ಜಾರಿಗೊಳಿಸಿದನು. ಮಾರುಕಟ್ಟೆಯಲ್ಲಿ ಮೋಸವನ್ನು ತಡೆಗಟ್ಟಲು ಷಹನಾಯಿ ಮಂಡಿ ಎಂಬ ಅಧಿಕಾರಿಯನ್ನು ನೇಮಿಸಿದನು.

ವಿಜಯನಗರದ ಶ್ರೀ ಕೃಷ್ಣದೇವರಾಯನು ಚಿಕ್ಕವನಿರುವಾಗ, ಅವನ ಚಿಕ್ಕಪ್ಪ ತನ್ನ ಮಕ್ಕಳಿಗೆ ಅಧಿಕಾರ ಸಿಗುವಂತೆ ಮಾಡಲು ಮಂತ್ರಿ ತಿಮ್ಮರಸನಿಗೆ ಶ್ರೀಕೃಷ್ಣದೇವರಾಯನನ್ನು ಕೊಂದು ಅವನ ಕಣ್ಣುಗಳನ್ನು ತಂದು ತೋರಿಸುವಂತೆ ಆದೇಶಿಸುತ್ತಾನೆ. ಆದರೆ ತಿಮ್ಮರಸನು ಕೊಲ್ಲದೆ ಅವನನ್ನು ಬಚ್ಚಿಟ್ಟು ಮೇಕೆಯ ಕಣ್ಣುಗಳನ್ನು ತಂದು ತೋರಿಸಿದನು. ಇದು ದೇಶಭಕ್ತಿ, ರಾಜಭಕ್ತಿಗೆ ಒಂದು ಉದಾಹರಣೆ.




ಮಹಮದ್ - ಬಿನ್ - ತುಘಲಕನ ಅಧಿಕಾರಿಗಳು ಆಡಳಿತದಲ್ಲಿ ಕಂದಾಯ ವಸೂಲಿಯಲ್ಲಿ ಭ್ರಷ್ಟಾಚಾರ ವೆಸಗುತ್ತಿದ್ದರು. ಇದರಿಂದ ತುಘಲಕನು ಭೂ ಕಂದಾಯದ ಎಲ್ಲಾ ವಿವರಗಳನ್ನು ನೀಡುವಂತೆ ಆದೇಶಿಸುತ್ತಾನೆ. ಇದಲ್ಲದೆ ಮುಲ್ತಾನಿನಲ್ಲಿ ಬರಗಾಲವಾಗಿ ಜನರು ತೀವ್ರ ಸಂಕಷ್ಟಕ್ಕೆ ಒಳಗಾದಾಗ ಅವರಿಗಾಗಿ ಗಂಜಿ ಕೇಂದ್ರಗಳನ್ನು ತೆರೆದನು. ಕೃಷಿಯ ಅಭಿವೃದ್ಧಿಗಾಗಿ ಜನರಿಗೆ ಸಾಲ ಸೌಲಭ್ಯ ನೀಡಿದನು. ಬಾವಿಗಳನ್ನು ತೆಗೆಯಲು ಧನಸಹಾಯ ಮಾಡಿದನು. ಆದರೆ ಆ ಸೌಲಭ್ಯಗಳನ್ನು ಅಧಿಕಾರಿಗಳು ಜನರಿಗೆ ಮುಟ್ಟಿಸದೆ, ಹಣವನ್ನು ದುರುಪಯೋಗಪಡಿಸಿಕೊಂಡರು.

ಇವನ ಕಾಲದಲ್ಲಿಯೇ ಹಣದ ಕೊರತೆ ಉಂಟಾಗಿದ್ದರಿಂದ ಖಾಸಗಿಯವರಿಗೆ ಚರ್ಮದ ನಾಣ್ಯಗಳನ್ನು ಟಂಕಿಸಲು ಅನುಮತಿ ನೀಡಿದನು. ಅನಂತರ ಜನರೆಲ್ಲರೂ ಗುಪ್ತವಾಗಿ ತಮ್ಮ ತಮ್ಮ ಮನೆಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿಕೊಂಡು ನಾಣ್ಯಗಳನ್ನು ಟಂಕಿಸತೊಡಗಿದರು.

ಮ್ಯಾಥೋಡ್ ಎಂಬ ಪ್ರವಾಸಿಗನು ತನ್ನ ಪ್ರವಾಸಕಥನದಲ್ಲಿ ರಾಜ್ಯದ ಭೂಮಿಯು ರಾಜನಿಗೆ ಸೇರಿದ್ದು, ಅವನು ರಾಜ್ಯವನ್ನು ಚಿಕ್ಕ ಚಿಕ್ಕ ಜಿಲ್ಲೆಗಳನ್ನಾಗಿ ವಿಂಗಡಿಸಿ, ಗುತ್ತಿಗೆಗೆ ಕೊಡುತ್ತಾನೆ. ಆಗ ಗುತ್ತಿಗೆದಾರರು ರಾಜ್ಯಕ್ಕೆ ತಿಳಿಸದೆ ಹೆಚ್ಚಿನ ಹಣಕ್ಕೆ ಒಳ ಗುತ್ತಿಗೆ ನೀಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುತ್ತಾರೆ ಎಂದು ತಿಳಿಸುತ್ತಾನೆ.

ಅಕ್ಬರನು ದಿವಾನಿ - ಖಾಸದಲ್ಲಿ ಚರ್ಚೆ ಮಾಡುತ್ತ ಜನರ ಅಭಿವೃದ್ಧಿಗಾಗಿ, "ಎಷ್ಟೊಂದು ಹಣ ಖರ್ಚು ಮಾಡಿದರೂ ಅಭಿವೃದ್ಧಿ ಆಗುತ್ತಿಲ್ಲವಲ್ಲ" ಎಂದು ಬೀರಬಲ್ಲನಿಗೆ ತಿಳಿಸುತ್ತಾನೆ. ಆಗ ಬೀರಬಲ್ಲನು ದೊಡ್ಡ ಗಾತ್ರದ ಮಂಜುಗಡ್ಡೆಯನ್ನು ತರಿಸಿ, ಅಕ್ಬರನ ಕೈಯಿಂದ ಆಸ್ಥಾನದ ಎಲ್ಲ ಅಧಿಕಾರಿಗಳ ಕೈಗೆ ವರ್ಗಾಯಿಸಿ ಕೊನೆಗೆ ಅಕ್ಬರನ ಕೈ ಸೇರುವಂತೆ ಮಾಡಿದನು. ಕೊನೆಯಲ್ಲಿ ಆ ಮಂಜುಗಡ್ಡೆಯು ಚಿಕ್ಕದಾಗಿ ಉಳಿದಿತ್ತು. ಆಗ ಬೀರಬಲ್ಲನು, "ನೀವು ನೀಡಿದ ಹಣ ಅಧಿಕಾರಿಗಳ ಕೈಯಿಂದ ವರ್ಗಾವಣೆ ಆಗುವಾಗಲೆಲ್ಲಾ ಪೋಲಾಗುತ್ತಿದೆ" ಎಂದು ತಿಳಿಸುತ್ತಾನೆ.

ಷಹಜಹಾನನು ಅಧಿಕಾರದ ಆಸೆಗಾಗಿ ತನ್ನ ತಂದೆ ಜಹಾಂಗೀರನನ್ನು, ಜೈಲಿನಲ್ಲಿ ಸೆರೆ ಇಡಿಸಿದ ಉದಾಹರಣೆಯನ್ನು ನಾವು ನೋಡಬಹುದು. ಇದಲ್ಲದೆ ಔರಂಗಜೇಬನು ಸಹ ತನ್ನ ಅಪ್ಪನಾದ ಷಹಜಹಾನನನ್ನು ಸೆರೆಯಲ್ಲಿಟ್ಟು ಅಧಿಕಾರವನ್ನು ಪಡೆದುಕೊಂಡನು. ಸಾರ್ವಜನಿಕರಿಂದ ಸಂಗ್ರಹಿಸಿದ ತೆರಿಗೆ ಹಣವನ್ನು ತನ್ನ ಹೆಂಡತಿಯ ನೆನಪಿಗಾಗಿ




*ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಹಾಗೂ ನವಕರ್ನಾಟಕ ಪ್ರಕಾಶನದ ಸಂಯುಕ್ತ ಆಶ್ರಯದಲ್ಲಿ 'ವಿಶ್ವ ಆರೋಗ್ಯ ದಿನ'ದ ಅಂಗವಾಗಿ ಆರೋಗ್ಯ ವಿಜ್ಞಾನ ಪುಸ್ತಕಗಳ ಮೇಳಗಳನ್ನು ನಗರದ ನಾಲ್ಕು ಪ್ರಮುಖ ಆಸ್ಪತ್ರೆಗಳಲ್ಲಿ ಒಂದೊಂದು ವಾರದ ಕಾಲ ಹಮ್ಮಿಕೊಳ್ಳಲಾಗಿದೆ.*

*ದಿನಾಂಕ ೦೭-೦೪-೨೦೧೪ರಂದು ಜಯದೇವ ಹೃದ್ರೋಗ ಆಸ್ಪತ್ರೆಯಲ್ಲಿ ಪ್ರಾರಂಭವಾದ ಮೊದಲ ಪುಸ್ತಕ ಮೇಳವನ್ನು ಆಸ್ಪತ್ರೆಯ ನಿರ್ದೇಶಕರಾದ ಡಾ॥ ಸಿ. ಎನ್. ಮಂಜುನಾಥ್ ಅವರು ಉದ್ಘಾಟಿಸಿದರು. ಸಮಾರಂಭದಲ್ಲಿ ರಾಜೀವ್ ಗಾಂಧಿ ವಿಶ್ವವಿದ್ಯಾಲಯ ಉಪಕುಲಪತಿಗಳಾದ ಡಾ॥ ಕೆ. ಎಸ್. ರವೀಂದ್ರನಾಥ್, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಡಾ॥ ವಸುಂಧರಾ ಭೂಪತಿ ಹಾಗೂ ಹಿರಿಯ ವೈದ್ಯ ಸಾಹಿತಿ ಡಾ॥ ಸಿ. ಆರ್. ಚಂದ್ರಶೇಖರ್ ಅವರು ಉಪಸ್ಥಿತರಿದ್ದರು.*

*ನಂತರದ ವಾರಗಳಲ್ಲಿ ಪುಸ್ತಕಮೇಳಗಳನ್ನು, ನಗರದ ವಿಕ್ಟೋರಿಯಾ ಆಸ್ಪತ್ರೆ, ಕೆಂಪೇಗೌಡ ಆಸ್ಪತ್ರೆ (ಕಿಮ್ಸ್) ಹಾಗೂ ಕೆ. ಸಿ. ಜನರಲ್ ಆಸ್ಪತ್ರೆಯಲ್ಲಿ ಏರ್ಪಡಿಸಲಾಯಿತು.*

ಕೋಟಿ ಕೋಟಿ ವೆಚ್ಚದಲ್ಲಿ ತಾಜ್‌ಮಹಲನ್ನು ನಿರ್ಮಿಸಿದುದು ಭ್ರಷ್ಟಾಚಾರವೇ ಆಗಿದೆ ಎಂಬುದು ಔರಂಗಜೇಬನ ವಾದವಾಗಿತ್ತು.

ಬಂಗಾಳದ ನವಾಬ ಸಿರಾಜ್ – ಉದ್ – ದೌಲ್, ಮೀರ್ ಜಾಫರ್ ಇವನ ಸೇನಾ ದಂಡನಾಯಕ ಆಗಿದ್ದನು. ಮೀರ್ ಜಾಫರನು ಇಂಗ್ಲಿಷರಿಗೆ ತನ್ನನ್ನು ಬಂಗಾಳದ ನವಾಬನನ್ನಾಗಿ ಮಾಡಿದ್ದಾದರೆ ಬ್ರಿಟಿಷರಿಗೆ ೧ ಕೋಟಿ ರೂಪಾಯಿಗಳನ್ನು, ಕಲ್ಕತ್ತದಲ್ಲಿದ್ದ ಇತರ ಯುರೋಪಿಯನ್ನರಿಗೆ ೫೦ ಲಕ್ಷ ರೂಪಾಯಿ ಗಳನ್ನು, ಹಿಂದು ವರ್ತಕರಿಗೆ ೨೦ ಲಕ್ಷ ರೂಪಾಯಿಗಳನ್ನು ನೀಡುವುದಾಗಿ ಗುಪ್ತ ಒಪ್ಪಂದ ಮಾಡಿಕೊಂಡನು. ಇದರಿಂದಾಗಿ ಬ್ರಿಟಿಷರು ಸಿರಾಜ್ ಉದ್ದೀನ್‌ನ ಮೇಲೆ ಯುದ್ಧ ಕೈಗೊಂಡು ಸೋಲಿಸಿದರು. ಅನಂತರ ಮೀರ್‌ಜಾಫರ್‌ನನ್ನು ಕ್ರಿ. ಶ. ೧೭೫೭ರಲ್ಲಿ ಬಂಗಾಳದ ನವಾಬನನ್ನಾಗಿ ನೇಮಿಸಿದರು.

ಇದರಿಂದ ಪ್ರೇರಣೆಗೊಂಡ ಮೀರ್ ಜಾಫರ್‌ನ ಸೇನಾಧಿಪತಿ ಮೀರ್ ಖಾಸಿಂ ಅಧಿಕಾರದ ಆಸೆಯಿಂದಾಗಿ ತನ್ನನ್ನು ಬಂಗಾಳದ ನವಾಬನನ್ನಾಗಿ ಮಾಡುವಂತೆ ಬ್ರಿಟಿಷರೊಂದಿಗೆ ಗುಪ್ತ ಒಪ್ಪಂದ ಮಾಡಿಕೊಂಡನು. ಇವನು ಕಂಪನಿಗೆ ೫೦ ಲಕ್ಷ ರೂಪಾಯಿಗಳನ್ನು ವಾನ್ಸಿಟಾರ್ಟನಿಗೆ ೫೦ ಸಾವಿರ ಪೌಂಡ್‌ಗಳನ್ನು, ಹೋಲ್‌ವೆಲ್‌ನಿಗೆ ೨೭ ಸಾವಿರ ಪೌಂಡ್‌ಗಳನ್ನು, ಕೌನ್ಸಿಲ್‌ನ ಇಬ್ಬರು ಸದಸ್ಯರಿಗೆ ೨೫ ಸಾವಿರ ಪೌಂಡುಗಳನ್ನು ಕೊಡುವುದಾಗಿ ಒಪ್ಪಂದ ಮಾಡಿಕೊಂಡನು. ಇದರಿಂದಾಗಿ ಮೀರ್ ಜಾಫರನನ್ನು ತೆಗೆದುಹಾಕಿ ಮೀರ್ ಖಾಸಿಂನನ್ನು ಬಂಗಾಳದ ನವಾಬನನ್ನಾಗಿ ನೇಮಿಸಿದರು.

ಬ್ರಿಟಿಷ್ ಅಧಿಕಾರಿಗಳು ಕೂಡ ಲಂಚಗುಳಿತನದಿಂದ ಹೊರಗಿರಲಿಲ್ಲ. ಅವರು ಹಣವನ್ನು ಕಾಣಿಕೆ ರೂಪದಲ್ಲಿ ಪಡೆಯುತ್ತಿದ್ದರು. ಬ್ರಿಟಿಷ್ ಪಾರ್ಲಿಮೆಂಟ್ ಮತ್ತು ಈಸ್ಟ್ ಇಂಡಿಯ ಕಂಪನಿಯ ಅಧಿಕಾರಿಗಳು ಯಾರಿಂದಲೂ ಕಾಣಿಕೆಗಳನ್ನು ಸ್ವೀಕರಿಸುವಂತಿಲ್ಲ ಎಂಬ ಕಾನೂನನ್ನು ಕ್ರಿ. ಶ. ೧೭೭೩ರ ರೆಗ್ಯುಲೇಟಿಂಗ್ ಕಾಯಿದೆಯಲ್ಲಿ ಜಾರಿಗೆ ತರಲಾಯಿತು.

ಕಂಪನಿಯ ಗವರ್ನರ್ ಜನರಲ್ ಆಗಿದ್ದ ವಾರನ್ ಹೇಸ್ಟಿಂಗ್ಸನು ಮೀರ್ ಜಾಫರನ ಹೆಂಡತಿಯಿಂದ ೩.೫ ಲಕ್ಷ ರೂಪಾಯಿಗಳನ್ನು, ಮುರ್ಷಿದಾಬಾದಿನ ಬೇಗಂಳಿಂದ ೧.೫ ಲಕ್ಷ ರೂಪಾಯಿಗಳನ್ನು ಲಂಚವಾಗಿ ಪಡೆದಿದ್ದಾನೆಂದು ಬ್ರಾಹ್ಮಣ ನಂದಕುಮಾರನು ಆಪಾದಿಸುತ್ತಾನೆ. ಇಂತಹ ಆಪಾದನೆಗಳು ಹೆಚ್ಚಾಗಿದ್ದರಿಂದ ಕ್ರಿ. ಶ. ೧೭೮೫ರಲ್ಲಿ ಬ್ರಿಟನ್‌ನ ಪಾರ್ಲಿಮೆಂಟ್ ಇವನನ್ನು ವಾಪಸ್ ಇಂಗ್ಲೆಂಡಿಗೆ ಕರೆಸಿಕೊಂಡಿತು.




ಹೈದರಾಲಿಯು ಚಿತ್ರದುರ್ಗದ ಮೇಲೆ ಆಕ್ರಮಣ ಮಾಡಿದಾಗ, ಇಲ್ಲಿನ ಕೋಟೆಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇದರಿಂದಾಗಿ ಹೈದರಾಲಿಯು ಚಿತ್ರದುರ್ಗದ ಸೈನಿಕರಿಗೆ ಆಮಿಷಗಳನ್ನು ನೀಡಿ ಕೋಟೆಯ ಗುಪ್ತ ಮಾರ್ಗವನ್ನು ತಿಳಿದುಕೊಂಡು ಕ್ರಿ. ಶ. ೧೭೭೯ರಲ್ಲಿ ೫ನೇ ಮದಕರಿ ನಾಯಕನನ್ನು ಸೋಲಿಸಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. ಚಿತ್ರದುರ್ಗದ ನಾಯಕನಾದ ಮದಕರಿನಾಯಕನು ಒಮ್ಮೆ ಜೈಲಿಗೆ ಭೇಟಿ ನೀಡಿದನು. ಜೈಲಿನಲ್ಲಿ ಮದಕರಿನಾಯಕ ದಂಡಕದ ಕರ್ತೃ ಚಂದ್ರಭೀಮ ಕವಿಯ ಇಂಪಾದ ಹಾಡಿನ ಧ್ವನಿಯನ್ನು ಕೇಳಿದನು. ಅನಂತರ ನಾಯಕನು ಹಾಡುತ್ತಿದ್ದ ವ್ಯಕ್ತಿಯ ಬಳಿಗೆ ಹೋಗಿ, "ಯಾವ ತಪ್ಪಿಗಾಗಿ ಶಿಕ್ಷೆಯನ್ನು ಅನುಭವಿಸುತ್ತಿದ್ದೀಯ ?" ಎಂದು ಕೇಳಿದಾಗ, "ಒಮ್ಮೆ ಬರಗಾಲವಾಗಿದ್ದಿತು. ಆಗ ಅರಸರ ಅನುಮತಿ ಇಲ್ಲದೆ ಕಂದಾಯದ ಹಣವನ್ನು ಜನರ ಕೆಲಸ ಕಾರ್ಯಗಳಿಗೆ ವಿನಿಯೋಗಿಸಿದ್ದೇನೆ" ಎಂದು ತಿಳಿಸಿದನು. ಅನಂತರ ನಾಯಕನು ಚಂದ್ರಭೀಮ ಕವಿಗೆ ಶಿಕ್ಷೆಯಿಂದ ವಿನಾಯಿತಿ ನೀಡಿ, ತನ್ನ ಆಸ್ಥಾನ ಕವಿಯನ್ನಾಗಿ ಮಾಡಿಕೊಂಡನು.

ಕ್ರಿ. ಶ. ೧೮೨೪ರಲ್ಲಿ ಕಿತ್ತೂರಿನಲ್ಲಿ ರಾಣಿ ಚೆನ್ನಮ್ಮ ಮತ್ತು ಬ್ರಿಟಿಷರ ನಡುವೆ ಯುದ್ಧ ನಡೆಯಿತು. ಆದರೆ ಚೆನ್ನಮ್ಮಳನ್ನು ಸೋಲಿಸಲು ಸಾಧ್ಯವಾಗದಿದ್ದಾಗ ಕಿತ್ತೂರಿನ ಮಲ್ಲಪ್ಪ ಶೆಟ್ಟಿ ಮತ್ತು ವೆಂಕಟರಾಯ ಹಣ ಪಡೆದು ಬ್ರಿಟಿಷರಿಗೆ ನೆರವಾಗುತ್ತಾರೆ. ಕಿತ್ತೂರಿನ ನಿಷ್ಠಾವಂತ ಅನುಯಾಯಿಯಾಗಿದ್ದ ಸಂಗೊಳ್ಳಿ ರಾಯಣ್ಣನು ತನ್ನ ಅನುಯಾಯಿಗಳ ಒಳಸಂಚಿನಿಂದಾಗಿ ಬ್ರಿಟಿಷರಿಗೆ ಸೆರೆ ಸಿಗುವಂತಾಯಿತು.

ಮೈಸೂರು ಸಂಸ್ಥಾನಕ್ಕೆ ಸೇರಿದ ನಗರ ಅಥವಾ ಬಿದನೂರು ಪ್ರಾಂತ್ಯಕ್ಕೆ ಅಪ್ಪಣ ಎಂಬುವನು ಫೌಜುದಾರನಾಗಿದ್ದನು. ಇವನು ಜನರಿಂದ ೧೩ ಲಕ್ಷ ರೂಪಾಯಿ ಗಳನ್ನು ತೆರಿಗೆಯಾಗಿ ಸಂಗ್ರಹಿಸಿ, ೭ ಲಕ್ಷ ರೂಪಾಯಿಗಳನ್ನು ತಾನಿಟ್ಟುಕೊಂಡು ಉಳಿದ ೬ ಲಕ್ಷ ರೂ. ಹಣವನ್ನು ಒಡೆಯರಿಗೆ ಸಂದಾಯ ಮಾಡಿದನು. ಉಳಿದ ಹಣವನ್ನು ಕೇಳಿದಾಗ ಬರಗಾಲವಿರುವುದರಿಂದ ತೆರಿಗೆ ಮಾಫಿ ಮಾಡಿರುವುದಾಗಿ ತಿಳಿಸಿದನು. ಇದರಿಂದ ಕೃಷ್ಣರಾಜ ಒಡೆಯರು ಅಪ್ಪಣನನ್ನು ಮೇಲ್ವಿಚಾರಣೆಗೆ ಒಳಪಡಿಸಿದಾಗ ಮೋಸ ಮಾಡಿರುವುದು ಬೆಳಕಿಗೆ ಬಂದಿತು. ನಂತರ ಅಪ್ಪಣನು ಜನರನ್ನು ಕೂಡಿಸಿಕೊಂಡು, ನಗರ ಎಂಬ ಪ್ರದೇಶದಲ್ಲಿ ದಂಗೆ ಎದ್ದನು. ಈ ದಂಗೆಯು ಬೇರೆ ಬೇರೆ ಪ್ರದೇಶಗಳಿಗೆ ವಿಸ್ತರಿಸಿಕೊಂಡಿತು. ಈ ದಂಗೆಯ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಅಧಿಕಾರವನ್ನು ಕಳೆದುಕೊಂಡರು. ಅನಂತರ ಮೈಸೂರು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು.

೧೮೭೪ರಲ್ಲಿ ಬರೋಡದ ಅರಸ ಮುಲಹರ್‌ರಾವ್‌ನ ಆಸ್ಥಾನದಲ್ಲಿ ದಾದಾಬಾಯಿ ನವರೋಜಿಯವರು ದಿವಾನರಾಗಿ ನೇಮಕಗೊಂಡರು. ಈ ಸಂದರ್ಭದಲ್ಲಿ ಬರೋಡದ ವ್ಯವಹಾರವು ಸರಿಯಾಗಿರಲಿಲ್ಲ. ಇವರು ಸುಧಾರಣೆಯನ್ನು ಕೈಗೊಂಡಾಗ ಅಧಿಕಾರಿಗಳು ಅಡ್ಡಿಯುಂಟುಮಾಡಿದರು. ಅನಂತರ ನವರೋಜಿಯವರು ತಾವು ಕೈಗೊಂಡ ದಿಟ್ಟ ಕ್ರಮದಿಂದಾಗಿ ವ್ಯವಹಾರಗಳನ್ನು ಸರಿದಾರಿಗೆ ತರುವಲ್ಲಿ ಯಶಸ್ವಿಯಾದರು. ನ್ಯಾಯ, ಉದಾರತೆ, ಮಾನವೀಯತೆ ಹಾಗೂ ನೈತಿಕತೆಯನ್ನು ಅಳವಡಿಸಿಕೊಂಡರೆ ಅಧಿಕಾರಿಗಳು ಜನರ ಪ್ರೀತಿಗೆ ಒಳಗಾಗಬಹುದು ಎಂದು ಸಲಹೆ ನೀಡಿದರು.

**ಡಾ॥ ಪಿ. ನಾಗಭೂಷಣಗೌಡ** ಮತ್ತು **ಡಾ॥ ಎಸ್. ಜಿ. ಸಂತೋಷ್**
ಉಪನ್ಯಾಸಕರು, ಇತಿಹಾಸ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ
ದಾವಣಗೆರೆ – ೫೭೭ ೦೦೨





ಎಂ. ಎಸ್. ಕೃಷ್ಣನ್ ಟ್ರಸ್ಟ್ ಹಾಗೂ ಹೊಸತು ಬಳಗದಿಂದ ದಿನಾಂಕ ೧೯-೧೨-೨೦೧೪ ರಂದು ಬೆಂಗಳೂರಿನ ಗಾಂಧಿಭವನದಲ್ಲಿ 'ಆರ್ಥಿಕ ಅಭಿವೃದ್ಧಿ ಮತ್ತು ರಾಷ್ಟ್ರೀಯತೆ' ಕುರಿತು ಪ್ರೊ|| ಅಮಿತ್ ಭಾದುರಿ ಮಾಡಿದ ಭಾಷಣದ ಅನುವಾದಿತ ಲೇಖನವಿದು. ಪ್ರೊ || ಅಮಿತ್ ಭಾದುರಿ ನಮ್ಮ ದೇಶದ ಖ್ಯಾತ ಅರ್ಥಶಾಸ್ತ್ರಜ್ಞರಲ್ಲೊಬ್ಬರು. ಎಡಪಂಥೀಯ ಚಿಂತಕರಾದ ಅವರು ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರು. ಅವರ ಭಾಷಣವನ್ನು ಅನುವಾದಿಸಿ, ಲೇಖನ ಸಿದ್ಧಪಡಿಸಿದವರು ಡಾ|| ವಿಜಯ ಭಾಸ್ಕರ. ಪ್ರಸ್ತುತ ಸಂದರ್ಭಕ್ಕೆ ಮುಖ್ಯವಾದ ಈ ಲೇಖನವನ್ನು 'ಹೊಸತು' ಓದುಗರಿಗಾಗಿ ಪ್ರಕಟಿಸಲಾಗಿದೆ.

# ಆರ್ಥಿಕ ಅಭಿವೃದ್ಧಿ ಮತ್ತು ರಾಷ್ಟ್ರೀಯತೆ

## ಅಮಿತ್ ಭಾದುರಿ

ರಾಷ್ಟ್ರೀಯತೆಯನ್ನು ಒಂದು ಕಾಲ್ಪನಿಕ, ಆಧುನಿಕ ಪರಿಕಲ್ಪನೆ ಎಂದು ಹತ್ತೊಂಬತ್ತನೇ ಶತಮಾನದಲ್ಲಿ ಅಮೆರಿಕಾದ ಅಧ್ಯಕ್ಷನಾಗಿದ್ದ ಜೆಫರ್‌ಸನ್ ಪ್ರತಿಪಾದಿಸಿದ. ಅದರ ಪ್ರಕಾರ ರಾಷ್ಟ್ರೀಯತೆಯ ವ್ಯಾಖ್ಯಾನವನ್ನು ಜನಸಮೂಹ ಎಂದು ಮಾಡಲಾಯಿತು. ಜನಸಮೂಹ ಎಂದರೇನು ? ಜನಸಮೂಹವನ್ನು ಏಕಸ್ವರೂಪದ್ದೆಂದು ಹೇಗೋ ಬಗೆದು, ಒಂದೇ ಸಂಸ್ಕೃತಿಗೆ, ಅಥವಾ ಒಂದೇ ಜನಾಂಗಕ್ಕೆ, ಸಾಮಾನ್ಯವಾಗಿ ಒಂದೇ ಚರಿತ್ರೆಯ ಪರಂಪರೆಗೆ ಸೇರಿದ ಜನಸಮೂಹವೆಂದು ವ್ಯಾಖ್ಯಾನಿಸಿ ಅವರನ್ನು ಏಕಸ್ವರೂಪದ ಒಂದೇ ಘಟಕಕ್ಕೆ ಸೇರಿಸಿ, ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿ ವಾಸಿಸುವ, ಸ್ವಯಂ ನಿರ್ಧಾರ ಮತ್ತಿತರ ಹಕ್ಕುಳ್ಳವರೆಂದು ವ್ಯಾಖ್ಯಾನಿಸಲಾಯಿತು. ಹಿಂದಿನ ಒಂದು ನೂರು ವರ್ಷಗಳ ಜಗತ್ತಿನ ಚರಿತ್ರೆಯ ಮೇಲೆ ಕಣ್ಣು ಹಾಯಿಸಿದಾಗ, ರಾಷ್ಟ್ರೀಯತೆಯ ಪರಿಕಲ್ಪನೆಯ ರಚನೆಯನ್ನು ಒಂದು ನಿರ್ದಿಷ್ಟ ಗುರಿ/ಉದ್ದೇಶಕ್ಕೆ ಒಳಪಟ್ಟು ಮಾಡಲಾಗಿದೆ ಎಂಬುದು ಗೋಚರವಾಗುತ್ತದೆ. ಅಪೇಕ್ಷಿತ ಉದ್ದೇಶವನ್ನು ನೀವು ಒಪ್ಪಬಹುದು ಅಥವಾ ಒಪ್ಪದಿರಬಹುದು. ಆದರೆ ಅದರ ಉದ್ದೇಶ ಜನರನ್ನು ಉದ್ದೇಶಪೂರ್ವಕವಾಗಿಯೇ ಐಕ್ಯಮತಗೊಳಿಸುವುದಾಗಿದೆ. ನಮ್ಮ ದೇಶದ ಮಟ್ಟಿಗೆ ಹೇಳುವುದಾದರೆ ರಾಷ್ಟ್ರೀಯತೆ – ಅಸ್ತಿತ್ವದಲ್ಲಿರಬಹುದಾದ ಅಥವಾ ರೂಪುಗೊಳ್ಳುತ್ತಿರುವ – ಪರಿಕಲ್ಪನೆಯಾಗಿ ಏನೇ ಇರಲಿ, ಮೂಲ ಪರಿಕಲ್ಪನೆಯಾಗಿ ಅದೊಂದು ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯಾಗಿ ಪ್ರಾರಂಭವಾಯಿತು. ಅದಕ್ಕೆ ಮುಂಚಿನ ಪ್ರಾಚೀನ ಅಥವಾ ಮಧ್ಯಕಾಲೀನ ಇತಿಹಾಸವನ್ನು ನೋಡಿದರೆ ಅದೊಂದು ಬಹುತೇಕ ರಾಜ ಅಥವಾ ಚಕ್ರವರ್ತಿಯ ಆಳ್ವಿಕೆಯಲ್ಲಿದ್ದ ಒಂದು

**ಡಿ. ಎ. ವಿಜಯ ಭಾಸ್ಕರ**

ಭೂಪ್ರದೇಶದಲ್ಲಿ ವಾಸಿಸುತ್ತಿದ್ದ ಜನ. ಅವರು ಯಾವುದೋ ಧರ್ಮವನ್ನು ಅನುಸರಿಸುತ್ತಿದ್ದರು ಅಷ್ಟೆ. ಆದರೆ ಆಧುನಿಕ ವ್ಯಾಖ್ಯಾನವನ್ನು ನೋಡಿದರೆ ಅದಕ್ಕೆ ಒಂದು ನಿರ್ದಿಷ್ಟ ಉದ್ದೇಶವಿತ್ತು. ಸ್ವಾರಸ್ಯಕರ ವಿಷಯವೆಂದರೆ, ೩೦–೪೦ರ ದಶಕದಲ್ಲಿ ಯುರೋಪಿನ ವಿದ್ಯಮಾನವನ್ನು ಪರಿಶೀಲಿಸಿದಾಗ, ಮೂಲಭೂತವಾಗಿ ಎರಡೂ ಪರಿಕಲ್ಪನೆಗಳನ್ನು ಮಿಶ್ರಣ ಮಾಡಲಾಯಿತು.

ಶುದ್ಧ ರಾಷ್ಟ್ರೀಯತೆಯ ಪರಿಕಲ್ಪನೆ ಅರ್ಥಾತ್ ಸಾಪೇಕ್ಷವಾಗಿ ಒಂದು ಪ್ರದೇಶದ ಸುಮಾರಾಗಿ ಏಕಸ್ವರೂಪಿ ಜನತೆ – ಅದರೊಂದಿಗೆ ನಾವು ಮತ್ತು ಹೊರಗಿನವರು, ನಾವು ಮತ್ತು ಅವರು; ನಾವು ಅವರಿಗಿಂತ ಭಿನ್ನರು ಎನ್ನುವ ವೈದೃಶ್ಯಗಳ ಪರಿಕಲ್ಪನೆ. ನಾವು ಒಂದು ಸಮೂಹವಾಗಿ ನಮ್ಮ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳಬೇಕು, ನಾವು ಜಗತ್ತಿನಲ್ಲಿ ಒಂದು ಸಮೂಹವಾಗಿ ಪ್ರಮುಖರಾಗಬೇಕು, ಇತರ ಜನಸಮೂಹವನ್ನು ನಮ್ಮವರೆಂದು ಪರಿಗಣಿಸಬಾರದು ಏಕೆಂದರೆ ಅವರು ನಮ್ಮನ್ನು ದುರ್ಬಲಗೊಳಿಸುತ್ತಾರೆ ಇತ್ಯಾದಿ ಭಾವನೆಗಳು ಪ್ರಧಾನವಾಗಿದ್ದವು. ಸ್ಥೂಲವಾಗಿ ಇವೇ ಭಾವನೆಗಳು ದಟ್ಟವಾದದ್ದನ್ನು ಹಿಟ್ಲರ್‌ನ ನಾಜಿ ಸಿದ್ಧಾಂತದಲ್ಲಿ ಕಾಣಬಹುದು. ಸರಿಸುಮಾರಾಗಿ ಇದೇ ಭಾವನೆಗಳನ್ನು ಇನ್ನೂ ತೀವ್ರವಾಗಿ ಫ್ಯಾಸಿಸ್ಟ್ ಸಿದ್ಧಾಂತದಲ್ಲಿ ಕಾಣಬಹುದು. ಅದರಲ್ಲಿ ಬಹಳ ಪ್ರಮುಖವಾಗಿ (ಭಾರತೀಯರು ವಿಶೇಷವಾಗಿ ನೆನಪಿಟ್ಟುಕೊಳ್ಳಬೇಕು) ಮುಸಲೋನಿಯು ಪ್ರಥಮ ಬಾರಿಗೆ ಒಂದೇ ಮತ, ಒಂದೇ ರಾಷ್ಟ್ರ, ಒಂದೇ ಚರ್ಚು ಎಂಬ ಘೋಷಣೆಯಿಂದ ರಾಷ್ಟ್ರೀಯತೆಯ ಮರುವ್ಯಾಖ್ಯಾನ ಮಾಡಿದನು. ನಮ್ಮದು ಹಿಂದು ರಾಷ್ಟ್ರ ಎನ್ನುವ ಕೂಗು ಇದೇ ಧಾಟಿಯ ಸಿದ್ಧಾಂತ. ಅಂದರೆ ರಾಷ್ಟ್ರೀಯತೆಯ ಬೆಸುಗೆಯ ಸಾಮಗ್ರಿ ಮತಧರ್ಮ ಎಂದಾಗಿದೆ. ಸಮಾಜದಲ್ಲಿ

ಮತಧರ್ಮ ಹಿಂದೆಯೂ ಇತ್ತು. ಆದರೆ ಅದು ರಾಷ್ಟ್ರೀಯತೆಯ ಬುನಾದಿಯಾಗಿ ಎಂದೂ ಪರಿಗಣಿಸಲ್ಪಟ್ಟಿರಲಿಲ್ಲ. ಒಂದು ಚರ್ಚಿಗೆ ಸೇರಿದವರೆಲ್ಲ ಒಂದು ಧರ್ಮಕ್ಕೆ ಸೇರಿದವರು, ಒಂದೇ ರಾಷ್ಟ್ರೀಯತೆಯವರು ಎನ್ನುವ ವಿಚಾರಧಾರೆಯನ್ನು ನಾವು ಫ್ಯಾಸಿಸ್ಟ್ ಸಿದ್ಧಾಂತ ಎಂದು ಕರೆಯುತ್ತೇವೆ.

ಇಪ್ಪತ್ತನೆ ಶತಮಾನದಲ್ಲಿ ನಮ್ಮ ದೇಶದ ರಾಷ್ಟ್ರೀಯತೆಯು (ಸಾಮ್ರಾಜ್ಯಶಾಹಿ – ವಸಾಹತುಶಾಹಿ ವಿರೋಧಿ ಹೋರಾಟದ ಭಾಗವಾಗಿ) ಬೆಳೆದು ಬಂದರೂ ಸಹ ಅದಕ್ಕೆ ತನ್ನದೇ ಆದ ಇತಿಮಿತಿಗಳೂ ಇದ್ದವು. ಏಕೆಂದರೆ ಈ ಪ್ರಶ್ನೆಯಲ್ಲಿ ಧಾರ್ಮಿಕ ಅಲ್ಪಸಂಖ್ಯಾತರ ಪ್ರಶ್ನೆಯನ್ನು ಹೇಗೆ ಬಗೆಹರಿಸಬೇಕೆಂಬುದು ಮುಖ್ಯವಾಗಿ ಮುಸಲ್ಮಾನರು, ಕ್ರಿಶ್ಚಿಯನ್ನರು, ಸಿಖ್ಖರ ಪ್ರಶ್ನೆಯನ್ನು ಹೇಗೆ ಎದುರಿಸುವುದು, ಕೇವಲ ಮತ-ಧರ್ಮ ಮಾತ್ರವಲ್ಲ ದೇಶದ ವಿಶಾಲ ವೈವಿಧ್ಯದ ಪ್ರಶ್ನೆಯನ್ನು ನಿಭಾಯಿಸುವುದು ಹೇಗೆ ಎಂಬುದೇ ಆ ಮಿತಿ. ಆ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಯಾವುದೇ ಸೈದ್ಧಾಂತಿಕ ನೆಲೆ ಇರಲಿಲ್ಲ. ಕಮ್ಯುನಿಸ್ಟರಿಗೆ ಅಂತರರಾಷ್ಟ್ರೀಯತೆಯ ಸ್ಪಷ್ಟ ಸೈದ್ಧಾಂತಿಕ ನೆಲೆ ಇತ್ತು. ಆದ್ದರಿಂದಲೇ ಕಾಂಗ್ರೆಸ್ ವಸಾಹತುಶಾಹಿ ವಿರೋಧಿ ನೆಲೆಯಲ್ಲಿ ರಾಷ್ಟ್ರೀಯತೆಯ ಸಿದ್ಧಾಂತವನ್ನು ಕಂಡುಕೊಂಡಿತು. ಈ ಕಾರಣಕ್ಕಾಗಿಯೇ ಸ್ವಾತಂತ್ರ್ಯಾನಂತರ ಆರ್ಥಿಕ ಅಭಿವೃದ್ಧಿಯೇ ಪ್ರಮುಖ ಪ್ರಶ್ನೆಯಾಯಿತು. ನೆಹರೂರವರ ಮತ್ತು ಪಟೇಲರ ಬರವಣಿಗೆಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. (ಆರ್ಥಿಕ ಅಭಿವೃದ್ಧಿಯ ಮೂಲಕ ಜನತೆಯನ್ನು ಒಗ್ಗೂಡಿಸುವ ಬೆಸುಗೆಯ ಸಾಮಗ್ರಿಯಾಯಿತು.) ಸ್ವಾತಂತ್ರ್ಯಾನಂತರದ ವಿಭಜನೆ ಇತ್ಯಾದಿ ಬೆಳವಣಿಗೆಗಳ ಹಿನ್ನೆಲೆಯ ವಿವರಗಳಿಗೆ ನಾನು ಹೋಗುವುದಿಲ್ಲ.

ಈ ಆರ್ಥಿಕ ಅಭಿವೃದ್ಧಿಯು ವಾಸ್ತವದಲ್ಲಿ ಬಹುಸಂಖ್ಯಾತರ ಪ್ರಜಾಪ್ರಭುತ್ವವಾಗಿ ರೂಪುಗೊಂಡಿತು. ನಾವು ನಮ್ಮ ದೇಶವು ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವ ಎಂದು ಹೇಳಿಕೊಳ್ಳುತ್ತೇವೆ ಇದೆಲ್ಲವು ನಿಜ. ಆದರೆ ಇದೊಂದು ಬಹುಸಂಖ್ಯಾತರ ಪ್ರಜಾಪ್ರಭುತ್ವ ಎಂಬುದನ್ನು ನಾವು ಗಮನಿಸುವುದೇ ಇಲ್ಲ. ಬಹುಸಂಖ್ಯಾತ ಎಂದರೆ ಬಹುಮತದ ಆಧಾರದ ಮೇಲೆ ನಡೆಯುವ ಕಾರ್ಯವಿಧಾನ ಎಂಬರ್ಥದಲ್ಲಿ ಅಲ್ಲ; ಭಾಷೆ, ಧರ್ಮ, ಇತ್ಯಾದಿಗಳ ಆಧಾರದಿಂದಲೂ ಅಲ್ಲ; ಅನುಪಾತದ ಪ್ರಾತಿನಿಧ್ಯವಿಲ್ಲದ ಬಹುಸಂಖ್ಯಾತ ಪ್ರಜಾಪ್ರಭುತ್ವ. ಉದಾಹರಣೆಗೆ ನೀವು ಶೇಕಡ ೬೯ರಷ್ಟು ಮತಗಳನ್ನು ನಿಯಂತ್ರಿಸಿದರೆ ನಿಮಗೆ ಬಹುಮತ ಸಿಗುತ್ತದೆ. ಶೇಕಡ ೩೧ ಮತ ಪಡೆದರೆ – ಇತ್ತೀಚೆಗೆ ಮೋದಿಯವರ ಬಿಜೆಪಿಗೆ ರಾಷ್ಟ್ರಮಟ್ಟದಲ್ಲಿ ಸಿಕ್ಕಿದಂತೆ. ಬಹುಪಕ್ಷೀಯ ಅತಂತ್ರ ಶಾಸನಸಭೆಯ ಸಂದರ್ಭದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಶೇಕಡ ೨೫ರಷ್ಟು ಮತ ಪಡೆದರೂ ಸ್ಪಷ್ಟ ಬಹುಮತ ದೊರೆಯುತ್ತದೆ. ಇದು ಬಹುಸಂಖ್ಯಾತರ ಏಕ ಕೇಂದ್ರಿತ ಪ್ರಜಾಪ್ರಭುತ್ವವಾಗುತ್ತದೆ. ಈ ಪರಿಕಲ್ಪನೆಯನ್ನು ಸರಿಯಾದ ಕಾರಣಕ್ಕೊ ಅಥವಾ ತಪ್ಪಾದ ಕಾರಣಕ್ಕೊ ಮಹಮ್ಮದ್ ಅಲಿ ಜಿನ್ನಾ ಕಟುವಾಗಿ ವಿರೋಧಿಸಿದ್ದರು. ನೀವು ಭಾರತೀಯ ಚರಿತ್ರೆಯನ್ನು ಓದಿದರೆ ಸ್ಪಷ್ಟವಾಗುತ್ತದೆ. ಅವರು ಪ್ರತಿಪಾದಿಸಿದ ಎರಡು ರಾಷ್ಟ್ರ ಸಿದ್ಧಾಂತ ನಾವು ತಿಳಿದಿರುವಂತೆ 'ಹಿಂದು ಮುಸ್ಲಿಂ' ಆಧಾರಿತ ಅಲ್ಲ ಎನ್ನುವುದು ಜಿನ್ನಾರವರ ಪತ್ರಗಳನ್ನು ಓದಿದರೆ ಸ್ಪಷ್ಟವಾಗುತ್ತದೆ. ಮುಸ್ಲಿಮರು ಅಲ್ಪಸಂಖ್ಯಾತರಾದ ಉತ್ತರಪ್ರದೇಶ, ಬಿಹಾರದಂತಹ ರಾಜ್ಯದಲ್ಲಿ ಕೇಂದ್ರ ಮಟ್ಟದ ಪ್ರಾತಿನಿಧ್ಯ ಪಡೆಯಬೇಕಾದರೆ ಅನುಪಾತ ಆಧಾರಿತ ಪ್ರಾತಿನಿಧ್ಯ ಇಲ್ಲದಿದ್ದರೆ ಅವರ ಧ್ವನಿ ಕೇಳುವುದೇ ಇಲ್ಲ. ಆದ್ದರಿಂದ ದೇಶಾದ್ಯಂತ ಮುಸಲ್ಮಾನರನ್ನು ಪ್ರಾತಿನಿಧ್ಯ ಪಡೆಯಲು ಒಂದೇ ಸಮುದಾಯವಾಗಿ ಪರಿಗಣಿಸಿದರೆ ಮಾತ್ರ ಸಾಧ್ಯ. ಪಾಕಿಸ್ತಾನದ ಜನನಕ್ಕೆ ಇದೂ ಒಂದು ಕಾರಣವಾಯಿತು. ಪೇಷಾವರದಲ್ಲಿ ನಡೆದ ಶಾಲಾಮಕ್ಕಳ ಮೇಲೆ ಬಾಂಬ್ ಹಾಕಿದ ಘಟನೆ, ನಂತರದ ಬೆಳವಣಿಗೆ ಏನೇ ಇರಬಹುದು ಅದೇ ಬೇರೆ ವಿಷಯ. ಬಹುಸಂಖ್ಯಾತ ಪ್ರಜಾಪ್ರಭುತ್ವಕ್ಕೆ ನಿಜವಾಗಿಯೂ ಇಂದಿಗೂ ಅಲ್ಪಸಂಖ್ಯಾತರ ಹಕ್ಕುಗಳ ಪ್ರಶ್ನೆಯನ್ನು ಹೇಗೆ ಬಗೆಹರಿಸಬೇಕೆಂಬುದು ತಿಳಿದಿಲ್ಲ.

ಅದನ್ನು ನಾವು ಸರಿಯಾಗಿ ಸಮರ್ಪಕವಾಗಿ ಬಗೆಹರಿಸಲು ಸಮರ್ಥರಾಗದಿದ್ದರೆ, ಈ ಪ್ರಶ್ನೆಯು ಪದೇ ಪದೇ ಬೇರೆ ಬೇರೆ ಸ್ವರೂಪದಲ್ಲಿ ಭಾರತೀಯ ಸಂದರ್ಭದಲ್ಲಿ



# ಕೆಂಡದ ಗುಳಿಗೆ




೧

ಪಾದರಿಯೊಬ್ಬ
ಪ್ರಬೋಧಿಸುತ್ತಿದ್ದ
ಶಿಲುಬೆಗೆ ಜಡಿದ
ಯೇಸುವಿನ
ಕಥೆ ಹೇಳಿದ
ಶುಭಶುಕ್ರವಾರದ
ಮಹಿಮೆ ಸಾರಿದ
ಗಂಟಲು ಬಿಗಿದು
ಬಂದಂತಾಗಿ ಬಿಕ್ಕಿದ
ಭಕ್ತರೂ ಕರಗಿದರು
ಪಾದರಿಯ ಬಂಗಲೆಯಲ್ಲಿ
ಕುರಿ ಬೇಯುತ್ತಿತ್ತು...

೨

ಭಕ್ತರು
ಒಬ್ಬೊಬ್ಬರಾಗಿ ಬಂದರು
ಮಂಡಿಯೂರಿ ಪಾದರಿಗೆ
ಪಾಪಗಳ
ಪಟ್ಟಿ ಒಪ್ಪಿಸಿದರು–
ಇಗರ್ಜಿ ತುಂಬಾ
ಕೊಳೆತ ವಾಸನೆ...

೩

ಶುಭಶುಕ್ರವಾರದ
ಸಂಜೆ ನಾನು
ಮನೆ ಕಡೆ ನಡೆಯುತ್ತಿದ್ದೆ
ನನಗೆ
ಯೇಸುವನ್ನು ಶಿಲುಬೆಗೇರಿಸಿದ
ತೃಪ್ತಿಯಿತ್ತು...

೪

ಪಾಸ್ಕ ಹಬ್ಬದ ರಾತ್ರಿ
ಕ್ರಿಸ್ತನ ಪುನರುತ್ಥಾನವಾಯಿತು
ಪಾದರಿಯ ಬಂಗಲೆಯಲ್ಲಿ
ಹೆಂಡದ ವಾಸನೆಗೆ
ಯೇಸು ಸದ್ದಿಲ್ಲದೆ
ಸಮಾಧಿ ಸೇರಿದ...

೫

ಅವನೊಬ್ಬ
ಪಾದರಿಯ ಬಳಿ
ಮಂಡಿಯೂರಿದ
ಮಾಡಿದ ಪಾಪಗಳ
ಕಕ್ಕಿದ...
ಪಾದರಿಯ ಕಣ್ಣು
ಮಧ್ಯದ ಸಾಲಿನ
ಹೆಂಗಸರಲ್ಲಿತ್ತು...

೬

ಪಾಸ್ಕ ಹಬ್ಬದ ಭಾನುವಾರ
ಭಕ್ತರೆಲ್ಲರೂ
ಬಾಟಲಿಗೆ ತೀರ್ಥ
ತುಂಬಿಸುತ್ತಿದ್ದರು
ಹಂಡೆಯಲ್ಲಿದ್ದ
ನೀರು ಕೂಗಿತು–
"ಇವರನ್ನು ಶಿಲುಬೆಗೇರಿಸಿ...
ಇವರನ್ನು ಶಿಲುಬೆಗೇರಿಸಿ..."

**ಜಾನ್ ಸುಂಟಿಕೊಪ್ಪ**
ಸಹ ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಯವಕಪಾಡಿ, ಕೊಡಗು – ೫೭೧ ೨೧೨

ಉದ್ಭವಿಸುತ್ತಲೇ ಇರುತ್ತದೆ. ಸ್ವಾತಂತ್ರ್ಯಾನಂತರ ರಾಷ್ಟ್ರವಾದಿಗಳು ಕಮ್ಯುನಿಸ್ಟರೇ ಇರಲಿ, ಕಾಂಗ್ರೆಸ್‌ನವರೇ ಇರಲಿ ಶೀಘ್ರ ಆರ್ಥಿಕ ಬೆಳವಣಿಗೆಯಿಂದ ಇದನ್ನು ಸಾಧಿಸಬಹುದೆಂದು ಬಗೆದಿದ್ದರು. ಅದೇ ಜಾಡಿನಲ್ಲಿ ಇಂದಿನ ಮೋದಿ ಸಹ ರಾಷ್ಟ್ರಕ್ಕೆ ತಮ್ಮದೇ ಸ್ಪಷ್ಟ ವ್ಯಾಖ್ಯಾನ ನೀಡಿ, ಮೂಲಭೂತವಾಗಿ ಹಿಂದು ರಾಷ್ಟ್ರ: ತಮ್ಮದೇ ಪರಿಕಲ್ಪನೆಯ ಶೀಘ್ರ ಅಭಿವೃದ್ಧಿ ಸಾಧಿಸಲು ಬಯಸುತ್ತಾರೆ. ಇವೆರಡನ್ನೂ ಒಟ್ಟಾಗಿ ಜೋಡಿಸಿ ದೇಶವನ್ನು ಮುನ್ನಡೆಸಲು ಬಯಸುತ್ತಾರೆ. ಇತರ ಗುಂಪುಗಳೂ ಇದಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಹೊಂದಿಕೊಳ್ಳಬೇಕೆಂದು ಬಯಸುತ್ತಾರೆ. ಇದು ಇಂದಿನ ರಾಜಕೀಯ. ಕಾಂಗ್ರೆಸ್‌ನ ರಾಜಕೀಯ ಇದಕ್ಕಿಂತ ಸ್ವಲ್ಪ ಭಿನ್ನವಾಗಿತ್ತು. ಈ ಅಭಿವೃದ್ಧಿ ಕಾರ್ಯಕ್ರಮದ ಮತ್ತೊಂದು ಆಸಕ್ತಿದಾಯಕ ವಿಷಯವೆಂದರೆ, ಪಾರ್ಥಸಾರಥಿಯವರು ತಮ್ಮ ಪ್ರಾಸ್ತಾವಿಕದಲ್ಲಿ ಪ್ರಸ್ತಾಪಿಸಿದಂತೆ, ಜಾಗತೀಕರಣದ ಸಂದರ್ಭದಲ್ಲಿ, ರಾಷ್ಟ್ರ–ಪ್ರಭುತ್ವದ ಸ್ವರೂಪ ಏನು ? ಎಂಬ ಪ್ರಸ್ತುತ ಪ್ರಶ್ನೆ ಉದ್ಭವಿಸುತ್ತದೆ. ವಸಾಹತುಶಾಹಿ ಹಂತವನ್ನು ದಾಟಿದ ಮೇಲೆ ಜಾಗತೀಕರಣಗೊಂಡ ಪ್ರಪಂಚದಲ್ಲಿ ಒಂದು ದೇಶವಿರುತ್ತದೆ. ಜಾಗತೀಕರಣವನ್ನು ಒಪ್ಪಬೇಕೊ, ಬೇಡವೊ ಎನ್ನುವುದು ಬೇರೆ ಪ್ರಶ್ನೆ, ಆದರೆ ಜಾಗತೀಕರಣದ ಸಂದರ್ಭದಲ್ಲಿ ರಾಷ್ಟ್ರದ ಪಾತ್ರ ಏನು, ಪ್ರಭುತ್ವ ಯಾವ ಪಾತ್ರ ನಿರ್ವಹಿಸುತ್ತದೆ ಎಂಬುದು, ಸ್ವಾರಸ್ಯಕರ ವಿಷಯ.

ಏಕೆಂದರೆ ಅಭಿವೃದ್ಧಿಯ ಸಾಮಾಜಿಕ ಭಾಗವನ್ನು ನಿರ್ವಹಿಸುವಲ್ಲಿ ಪ್ರಭುತ್ವದ ಪಾತ್ರ ಮಹತ್ವದ್ದಾಗಿರುತ್ತದೆ. ಭಾರತ ಸಂವಿಧಾನದಲ್ಲಿ ಇದನ್ನು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಈ ಪ್ರಶ್ನೆ ಗಾಂಧಿ ಮತ್ತು ಅಂಬೇಡ್ಕರರ ನಡುವೆ – ಗಾಂಧಿ–ನೆಹರು ಮತ್ತು ಜಿನ್ನಾರ ನಡುವೆ ಪ್ರಮುಖ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿತ್ತು. ಗಾಂಧಿ ಮತ್ತು ಅಂಬೇಡ್ಕರರ ನಡುವಿನ ಪತ್ರ ವ್ಯವಹಾರಗಳನ್ನು ಗಮನಿಸಿದರೆ ಇದು ವೇದ್ಯವಾಗುತ್ತದೆ. ಅಂಬೇಡ್ಕರ್‌ರವರು ಸಾಮಾಜಿಕ ಪೂರ್ವಾಗ್ರಹಗಳಾದ ಜಾತಿ, ಅಸ್ಪೃಶ್ಯತೆಯಂತಹ ಸಮಸ್ಯೆಗಳ ನಿವಾರಣೆಗೆ ಪ್ರಾಮುಖ್ಯತೆ ನೀಡಿದ್ದರು. ಅವರು ತೀವ್ರವಾಗಿ ವಿರೋಧಿಸುತ್ತಿದ್ದ ವಿಷಯಗಳಲ್ಲಿ ಪಂಚಾಯಿತಿ ರಾಜ್ ಸಹ ಒಂದು. ಅದಕ್ಕೆ ಅವರು ಸರಳವಾದ ಕಾರಣವನ್ನು ಕೊಡುತ್ತಿದ್ದರು. ಅವರಿಗೆ ಸಮಾಜದಲ್ಲಿ ದಲಿತರ ಸ್ಥಾನಮಾನದ ಪ್ರಶ್ನೆ ಬಹಳ ಮುಖ್ಯವಾಗಿತ್ತು, ಜಿನ್ನಾರವರಿಗೆ ಮುಸಲ್ಮಾನರ ಪರಿಸ್ಥಿತಿಯ ಬಗ್ಗೆ ಹೆಚ್ಚಿನ ಕಾಳಜಿ ಇತ್ತು. ಆ ಕಾಲದಲ್ಲಿ ಇಂತಹ ಸಂಕೀರ್ಣ ಪರಿಸ್ಥಿತಿಯಲ್ಲಿ ನಮ್ಮ ರಾಷ್ಟ್ರೀಯತೆ ರೂಪುಗೊಳ್ಳುತ್ತಿತ್ತು. ಭಾರತದ ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಸಂವಿಧಾನ ರಚನೆಯ ಸಂದರ್ಭದಲ್ಲಿ ಅಂಬೇಡ್ಕರ್‌ರವರು ಮುಖ್ಯ ಭೂಮಿಕೆಯನ್ನು ನಿರ್ವಹಿಸಿ ಮಹಿಳೆಯ ಸ್ಥಾನಮಾನ, ಜಾತಿಪದ್ಧತಿ ನಿವಾರಣೆಯಂತಹ ಸಾಮಾಜಿಕ ಅಭಿವೃದ್ಧಿಯ ಪ್ರಶ್ನೆಗಳತ್ತ ಗಮನಹರಿಸಿ ಸಮಾಜದ ಆಧುನೀಕರಣ ಪ್ರಕ್ರಿಯೆಯ ಬದಲಾವಣೆಗೆ ಒತ್ತುನೀಡಿದರು. ಎಲ್ಲಾ ಪ್ರಶ್ನೆಗಳು ಪ್ರಭುತ್ವದ ನೇರ ಮಧ್ಯಪ್ರವೇಶದ ಅವಶ್ಯಕತೆಯನ್ನು ಬೇಡುವಂತಹವು. ಕೇವಲ ಆರ್ಥಿಕ ಅಭಿವೃದ್ಧಿಯಿಂದ ಇದನ್ನು ಸಾಧಿಸಲಾಗದು. ಇಂದಿನ ಅರ್ಥಶಾಸ್ತ್ರಜ್ಞರು ಆರ್ಥಿಕ ಬೆಳವಣಿಗೆ ಉನ್ನತವಾಗಿದ್ದರೆ, ಅದು ಜಿನುಗುಧಾರೆಯಾಗಿ ಕೆಳ ಹಂತಕ್ಕೆ ಸ್ರವಿಸಿ ಬಡತನ ನಿವಾರಣೆಯಾಗುತ್ತದೆ ಎಂದು ಪ್ರತಿಪಾದಿಸುತ್ತಾರೆ. ಅದು ಕೆಳಹಂತಕ್ಕೆ ಜಿನುಗುವುದೊ ಇಲ್ಲವೋ ಎನ್ನುವುದು ಬೇರೆ ಮಾತು. ಹಿಂದಿನ ಅರ್ಥಸಚಿವರಾಗಿದ್ದ ಚಿದಂಬರಂರವರು ಒಮ್ಮೆ ಚರ್ಚೆಯೊಂದರಲ್ಲಿ ಮಾರುಕಟ್ಟೆ ಇದ್ದರೆ ಅದು ಜಾತಿ ಮತ್ತಿತರ ಸಾಮಾಜಿಕ ಪೂರ್ವಾಗ್ರಹಗಳನ್ನು ತೊಡೆದುಹಾಕುತ್ತದೆ, ಎಂದು ಪ್ರತಿಪಾದಿಸಿದ್ದರು. ಅದಕ್ಕೆ ಅವರು ಬೆಂಗಳೂರಿನ ಉದಾಹರಣೆ ಕೊಡುತ್ತಾರೆ. ಬೆಂಗಳೂರಿನಲ್ಲಿ ಐ.ಟಿ. ಉದ್ಯಮ ಬೃಹತ್ ಆಗಿ ಬೆಳೆದಿರುವುದರಿಂದ ನಾವು ಜಾತಿಗಳ ಬಗ್ಗೆ ಕೇಳುವುದೇ ಇಲ್ಲ. ಇದೇ ವಿಧಾನವನ್ನು ಎಲ್ಲ ಕಡೆ ಅನುಸರಿಸಿದರೆ ಜಾತಿ ವ್ಯವಸ್ಥೆಯೇ ಇಲ್ಲವಾಗುತ್ತದೆ. ಇದನ್ನೇ ಮಾರುಕಟ್ಟೆ ಆಧಾರಿತ ರಾಷ್ಟ್ರೀಯತೆ ಎನ್ನುತ್ತೇವೆ. ನಾವು ಮಾರುಕಟ್ಟೆಯನ್ನು ವಿಸ್ತಾರಗೊಳ್ಳಲು ಬಿಡುವುದಾದರೆ, ಉನ್ನತ ಮಟ್ಟದ ಆರ್ಥಿಕ ಅಭಿವೃದ್ಧಿ ಸಾಧಿಸಿದರೆ ಸಾಮಾಜಿಕ ಪೂರ್ವಾಗ್ರಹಗಳು ತಾವೇ ತಾವಾಗಿ ಅಳಿಯುತ್ತವೆ ಎನ್ನುವ ವಾದವನ್ನು ಮಂಡಿಸುತ್ತಾರೆ. ಆದರೆ ಇದು ವಾಸ್ತವವಲ್ಲ. ಅಮೆರಿಕಾದಲ್ಲಿಯೂ ಇತ್ತೀಚೆಗೆ ಇಬ್ಬರು ಅಮಾಯಕ ಕರಿಯರ ಮೇಲೆ ಸಶಸ್ತ್ರ ಬಿಳಿಯ ಪೊಲೀಸರು ದಾಳಿ ಮಾಡಿದ್ದನ್ನು ಗಮನಿಸಬೇಕು. ಇದರ ವಿರುದ್ಧ ಕನಿಷ್ಠ ಕಾಲುಭಾಗದ ಅಮೆರಿಕನ್ನರು ಇನ್ನೂ ಹೆಚ್ಚು ನ್ಯಾಯಸಮ್ಮತ ವಿಚಾರಣಾ ವ್ಯವಸ್ಥೆ ಇರಬೇಕೆಂದು ಒತ್ತಾಯಿಸಿ ಬೀದಿಗಿಳಿದಿದ್ದಾರೆ. ಯಾವುದೇ ಸಾಮಾಜಿಕ ಪೂರ್ವಾಗ್ರಹಗಳು ಎಲ್ಲಿಯೇ ಆಗಲಿ (ಎಷ್ಟೇ ಬಲಿಷ್ಠವಾದ ಪ್ರಭುತ್ವವೇ ಇದ್ದರೂ) ಪ್ರಭುತ್ವದ ಪ್ರಯತ್ನದಿಂದ ಸುಲಭವಾಗಿ ಕಣ್ಮರೆಯಾಗುವುದಿಲ್ಲ. ಹಿಂದಿನ ಸೋವಿಯೆತ್ ಯೂನಿಯನ್ನಿನ ಅನುಭವ ನಮ್ಮ ಮುಂದಿದೆ. ನಾನು ಸೋವಿಯೆತ್ ಯೂನಿಯನ್‌ನಲ್ಲಿ ನಾಲ್ಕು ವರ್ಷಗಳ ಕಾಲ ನೆಲೆಸಿದ್ದೆ. ಸಮಾಜವಾದಿ ವ್ಯವಸ್ಥೆಯಲ್ಲಿ ಸರ್ಕಾರವು ಪ್ರತಿಬಂಧಿಸಿದ್ದ ಬಹುತೇಕ ಪೂರ್ವಾಗ್ರಹಗಳು ಮರಳಿ ಬಂದಿವೆ. ಮಹಿಳೆಯರಿಗೆ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿದಾಗ ಅವರು ಯಾವುದೋ ಒಂದು ವಿಧವಾದ ಮುಸ್ಲಿಂ ಸಂಘಟನೆಗೆ ಮತ ನೀಡಬಹುದು. ಆದರೆ ಅಫಘಾನಿಸ್ತಾನದಲ್ಲಿ ಮಹಿಳೆಯ ಪ್ರಶ್ನೆಗೂ ಅದರ ಸುತ್ತಲೂ ಇರುವ ಮಧ್ಯ ಯೂರೋಪಿನ ರಾಷ್ಟ್ರಗಳಿಗೂ ವ್ಯತ್ಯಾಸವಿದೆ. ಪ್ರಭುತ್ವದ ಮಧ್ಯಪ್ರವೇಶದಿಂದ ಸಾಮಾಜಿಕ ಪೂರ್ವಾಗ್ರಹಗಳನ್ನು ತೊಡೆದು ಹಾಕುವುದು ಸಾಧ್ಯವಿಲ್ಲ ಎಂಬುದು ನಿಜ. ಒಂದು ಜಾತಿಯವರು ಇನ್ನೊಂದು ಜಾತಿಯವರ ಮೇಲೆ ನಡೆಸುವ ದಾಳಿಯನ್ನು ನಿಷೇಧಿಸಿದ್ದೇವೆ, ಒಂದು ಬಗೆಯ ಅಸ್ಪೃಶ್ಯತೆಯನ್ನು ಪ್ರತಿಬಂಧಿಸಿದ್ದೇವೆ ಎಂದು ಹೇಳಿ ಅವುಗಳನ್ನು ನಿರ್ಮೂಲನೆ ಮಾಡಲಾಗದು ಎಂಬುದೂ ಸತ್ಯ. ಪ್ರಭುತ್ವದ ಮಧ್ಯಪ್ರವೇಶ ಸ್ವಲ್ಪ ವ್ಯತ್ಯಾಸಕ್ಕೆ ಕಾರಣವಾಗಬಹುದು. ಆದರೂ ಅಂಬೇಡ್ಕರ್ ಹೇಳಿದಂತೆ ವ್ಯಕ್ತಿಗತ ಪೂರ್ವಾಗ್ರಹಗಳನ್ನು ಅವರದೇ ವಿವೇಚನೆಗೆ ಬಿಡಲಾಗದು. ಇಂದಿನ ರಾಷ್ಟ್ರೀಯತೆಯ ಬಿಕ್ಕಟ್ಟು ಇದೇ. ಎಲ್ಲಾ ಪುನರುಜ್ಜೀವನ ಚಳುವಳಿಗಳ ಒತ್ತಾಯವೂ ಒಂದೇ ಆಗಿದೆ. ಮುಸ್ಲಿಂ, ಹಿಂದು ಅಥವಾ ಕ್ರಿಶ್ಚಿಯನ್ ಯಾವುದೇ ಆಗಲಿ ಅವರವೆಲ್ಲಾ ಹಳೆಯ ಮೌಲ್ಯಗಳನ್ನು ಪುನರುಜ್ಜೀವನ ಗೊಳಿಸಬೇಕೆನ್ನುವ ಚಳುವಳಿಗಳು, ಹಳೇ ವ್ಯವಸ್ಥೆ ಪೂರ್ವದ ಆ ಮೌಲ್ಯಗಳು ಪುರಾತನ ಎಂಬ ಕಾರಣಕ್ಕೆ ಅದನ್ನು ಪೋಷಿಸಿಕೊಂಡು ಹೋಗಬೇಕೆನ್ನುವುದು ಅವುಗಳ ಒತ್ತಾಯ. ಸೋವಿಯೆತ್ ಪತನದ ನಂತರ ರಷ್ಯಾದಲ್ಲಿ ಇದೇ ಮಾದರಿಯ ರಾಷ್ಟ್ರೀಯತೆ ತಲೆ ಎತ್ತಿತು. ಇದನ್ನು ತಿರಸ್ಕರಿಸಬೇಕು. ಭಾಗಶಃ ಆರ್.ಎಸ್.ಎಸ್. ಸಹ ಇದನ್ನು ಬಲವಾಗಿ ಪ್ರತಿಪಾದಿಸುತ್ತದೆ. ಉದಾಹರಣೆ: ಸಂಸ್ಕೃತವನ್ನು ಒಂದು ಭಾಷೆಯಾಗಿ ವೈಭವೀಕರಿಸುವುದಷ್ಟೆ ಅಲ್ಲದೆ, ಅದೇ ಸಂಪ್ರದಾಯ, ಅದನ್ನು ಕಲಿಯಬೇಕು ಎನ್ನುವ ಒತ್ತಾಯ. ನಮ್ಮದೆನ್ನುವ ಸಂಪ್ರದಾಯ ಪರಂಪರೆಗಳನ್ನು ಅರಿತುಕೊಳ್ಳುವುದೇ ಬೇರೆ ಅದು ಬದಲಾಗಲೇ ಕೂಡದು ಎನ್ನುವ ಹುಂಬತನ ಬೇರೆ. ಈ ಮನಸ್ಥಿತಿಯ ರಾಷ್ಟ್ರೀಯತೆಯನ್ನೇ ಅಂಬೇಡ್ಕರ್‌ರವರು ಗಾಂಧೀಜಿಯವರಲ್ಲಿಯೂ ಕಂಡು ಅದನ್ನು ವಿರೋಧಿಸುತ್ತಿದ್ದುದು ಸ್ವಲ್ಪಮಟ್ಟಿಗೆ. ರಾಷ್ಟ್ರೀಯತೆಯ ಈ ಮುಖವನ್ನು ಆರ್ಥಿಕ ರಂಗದಲ್ಲೂ ಕಾಣಬಹುದು. ನಮ್ಮ ಸಂವಿಧಾನದ ರಾಜ್ಯ ನಿರ್ದೇಶನ ತತ್ವದಲ್ಲಿ ಅಸಮಾನತೆಯನ್ನು ಹೆಚ್ಚಿಸುವ ಸಂಪತ್ತಿನ ಕೇಂದ್ರೀಕರಣವನ್ನು ನಿರಾಕರಿಸಲಾಗಿದೆ. ಆದರೂ ಅದು ಮುಂದುವರಿದಿದೆ, ೧೯೯೧ರ ನಂತರ ವಾಸ್ತವದಲ್ಲಿ ನರಸಿಂಹ ರಾವ್ ಸರ್ಕಾರ, ಅದಾದಮೇಲೆ ಈ ಸಿದ್ಧಾಂತವನ್ನು ಇನ್ನೂ ತೀವ್ರವಾಗಿ ಅನುಸರಿಸಿದರು. ಉದಾರವಾದಿ ಆರ್ಥಿಕನೀತಿಗಳೆಂದು ಇದನ್ನು ಕರೆಯಲಾಗಿದೆ. ನಮ್ಮ ವ್ಯವಸ್ಥೆ ಜಾಗತಿಕ ಮಾರುಕಟ್ಟೆ ಆಧಾರಿತ ಅರ್ಥವ್ಯವಸ್ಥೆಯ ಭಾಗವಾಗಿ ಬಿಟ್ಟರೆ ಜಿನುಗುಧಾರೆಯ ಮೂಲಕ ನಮ್ಮ ಅನೇಕ ಆರ್ಥಿಕ ಸಮಸ್ಯೆಗಳು ದೂರವಾಗುತ್ತವೆ, ಎನ್ನುವ ವಿಚಾರಧಾರೆ ಇದು. ಪರಿಣಾಮವಾಗಿ ಸಾಮಾಜಿಕ ಕ್ಷೇತ್ರದಿಂದ ಪ್ರಭುತ್ವ ಹಿಂದೆ ಸರಿದು ಖಾಸಗಿಯವರಿಗೆ ಆರ್ಥಿಕ ಕ್ಷೇತ್ರವನ್ನು ಬಿಟ್ಟುಕೊಟ್ಟಿತು. ಅದರ ಫಲವಾಗಿ ಯಾವ ಸಾಮಾಜಿಕ ಪೂರ್ವಾಗ್ರಹಗಳ ವಿರುದ್ಧ ಹೋರಾಡುತ್ತಿದ್ದೆವೋ; (ಅವುಗಳ ವಿರುದ್ಧ ನಾವು ಸಮರ್ಪಕವಾಗಿ ಹೋರಾಡಿದೆವೋ ಇಲ್ಲವೋ ಎನ್ನುವುದು ಬೇರೆ ವಿಷಯ) ಅವು ಸರ್ಕಾರದ/ಪ್ರಭುತ್ವದ ಹೊಣೆಗಾರಿಕೆ ಎಂದು ಹೇಳಲಾಗದ ಸ್ಥಿತಿಗೆ ಇಂದು ತಲುಪಿದ್ದೇವೆ.

ಇದು ಆರ್ಥಿಕರಂಗದ ಮೇಲೆ ತೀವ್ರ ಪರಿಣಾಮ ಮಾಡಿತು. ಭಾರತದ ವಿಷಯದಲ್ಲಿ ಹೇಳುವುದಾದರೆ ಕಳೆದ ನಾಲ್ಕು ವರ್ಷ ಬಿಟ್ಟರೆ ಆರ್ಥಿಕ ಬೆಳವಣಿಗೆ ಶೇಕಡ ೭–೮ರಷ್ಟು ಇತ್ತು. ಇದು ದೇಶದ ಇಡೀ ದಾಖಲಿತ ಚರಿತ್ರೆಯಲ್ಲಿಯೇ ಈ ಪ್ರಮಾಣದ ಬೆಳವಣಿಗೆ ಕಂಡು ಕೇಳರಿಯದು. ಅದರ ಪ್ರತಿಪಾದಕರು ಅದರ ಗುಣಗಾನವನ್ನು ಮಿತಿಯಿಲ್ಲದೆ ಮಾಡಿದರು.

ಮಾರುಕಟ್ಟೆ ನಿರ್ದೇಶಿತ ಅತಿ ಹೆಚ್ಚಿನ ಬೆಳವಣಿಗೆ ದರವನ್ನು ದಾಖಲಿಸಿದಾಗಲೂ ಸಹ ಅದೇ ಅವಧಿಯಲ್ಲಿ ಅದರ ಉದ್ಯೋಗಾವಕಾಶಗಳ ಬೆಳವಣಿಗೆ ಅತಿ ಕಡಿಮೆ ದರವನ್ನು ದಾಖಲಿಸಿತು. ಇದು ಕಳೆದ ೨೦ ವರ್ಷದಲ್ಲಿ ಮಾತ್ರವಲ್ಲ ಸ್ವಾತಂತ್ರ್ಯ

ಭಾರತದ ಚರಿತ್ರೆಯಲ್ಲಿಯೇ ಅತಿ ಕಡಿಮೆ ಉದ್ಯೋಗ ವೃದ್ಧಿಯ ದರವಾಗಿದೆ. ಮೊದಲು ಆರ್ಥಿಕ ಬೆಳವಣಿಗೆ ಶೇ. ೪ರ ದರದಲ್ಲಿ ಬೆಳೆಯುತ್ತಿತ್ತು. ಉದಾರೀಕರಣದ ಅವಧಿಯಲ್ಲಿ ಅದು ನಾಲ್ಕರಿಂದ ೮ಕ್ಕೆ ಜಿಗಿಯಿತು. ೨ ಪಟ್ಟು ಹೆಚ್ಚಳ. ಆದರೆ ಉದ್ಯೋಗಾವಕಾಶ ಶೇ. ೨ರಿಂದ ಅರ್ಧಕ್ಕೆ ಇಳಿದು ಶೇ. ೧ರಷ್ಟಕ್ಕೆ ಬಂದಿದೆ. ಉತ್ಪಾದನೆಯಲ್ಲಿ ತೀವ್ರ ಹೆಚ್ಚಳವಾಯಿತು. ಆದರೆ ಉದ್ಯೋಗಾವಕಾಶಗಳು ಅದೇ ಪ್ರಮಾಣದಲ್ಲಿ ಬೆಳೆಯಲಿಲ್ಲ. ಹೆಚ್ಚುತ್ತಿರುವ ಆರ್ಥಿಕ ಅಸಮಾನತೆಗೆ ಇದೆ ಕಾರಣ. ಮಧ್ಯಮ ವರ್ಗದ ಜನರಿಗೆ ಉದ್ಯೋಗಾವಕಾಶ ನೀಡದೆ ಸೃಷ್ಟಿಸಿದ ಸಂಪತ್ತಿನ ವರ್ಗಾವಣೆಗೆ ದಾರಿಯೇ ಇಲ್ಲ. ಸಮಾಜದಲ್ಲಿ ಒಂದು ಪ್ರಮಾಣದ ಸಮಾನತೆಯನ್ನು ಸಾಧಿಸಲು ಈ ದಾರಿ ಬಿಟ್ಟರೆ ಬೇರೆ ವಿಧಾನಗಳಿಲ್ಲ. ಪರಿಣಾಮ ಅಸಮಾನತೆ ವಿಪರೀತ ಹೆಚ್ಚುತ್ತದೆ. ನೀವು ಕಮ್ಯುನಿಸ್ಟರಾಗಿರಲಿ, ಸಮಾಜವಾದಿಗಳಾಗಿರಲಿ, ಸೋಷಿಯಲ್ ಡೆಮೋಕ್ರೇಟರಾಗಿರಲಿ, ನಿರ್ದಿಷ್ಟ ಸಂದರ್ಭದಲ್ಲಿ ನೀವು ಉದ್ಯೋಗದ ಹೆಚ್ಚಿನ ಬೆಳವಣಿಗೆಯನ್ನು ನೀಡಲಾಗದಿದ್ದರೆ ಅದು ಹಲವಾರು ರೀತಿಯಲ್ಲಿ ವರಮಾನದಲ್ಲಿ ಅಸಮಾನತೆಯಾಗಿ ಪ್ರಕಟವಾಗುವುದರಲ್ಲಿ ಯಾವುದೇ ಅನುಮಾನವಿಲ್ಲ.

ಈ ಸಂದರ್ಭದಲ್ಲಿ ಉದ್ಯೋಗಾವಕಾಶಗಳ ಬೆಳವಣಿಗೆ ಮಂದಗತಿಯಾಗುವುದು ಏಕೆ ? ಎಂಬ ಪ್ರಶ್ನೆ ಹುಟ್ಟುವುದು ಸಹಜ. ಪ್ರಭುತ್ವವು ಉದ್ಯೋಗಾವಕಾಶ ಸೃಷ್ಟಿಸುವ ಇಡೀ ಹೊಣೆಗಾರಿಕೆಯನ್ನು ಇಡಿಯಾಗಿ ಕಾರ್ಪೊರೇಟ್ ವಲಯಕ್ಕೆ ಬಿಟ್ಟುಕೊಟ್ಟಿದೆ. ಅದೇ ಕಾಲಕ್ಕೆ ಕಾರ್ಪೊರೇಟ್ ವಲಯವನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕವಾಗಿಯೂ ಇರಬೇಕೆಂದು ಸೂಚಿಸುತ್ತೇವೆ. ಅದರ ಅರ್ಥವೇನು ? ಐ.ಟಿ. ಕ್ಷೇತ್ರವೇ ಇರಲಿ, ಉತ್ಪಾದನಾ ಕ್ಷೇತ್ರವೇ ಇರಲಿ ಟೆಲಿಕಮ್ಯೂನಿಕೇಷನ್ ಕ್ಷೇತ್ರವೇ ಇರಲಿ ಪ್ರತಿ ಕಾರ್ಮಿಕನ ವೆಚ್ಚ ಆದಷ್ಟೂ ಕಡಿಮೆ ಇರಬೇಕೆಂದಾಗ, ಅದನ್ನು ಸಾಧಿಸುವ ಬಗೆ ಹೇಗೆ ? ತಂತ್ರಜ್ಞಾನವನ್ನು ಉನ್ನತೀಕರಿಸುವುದು ಮುಖ್ಯ ಮಾರ್ಗ. ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಂಪನಿಯು ೧೦ ವರ್ಷದಲ್ಲಿ ಉದ್ಯೋಗಿಗಳ ಸಂಖ್ಯೆಯನ್ನು ಅರ್ಧಕ್ಕೆ ಇಳಿಸಿದ್ದರೆ, ಅದೇ ಸಮಯ ಉತ್ಪಾದನೆಯನ್ನು ಇಮ್ಮಡಿ ಮಾಡಿದ್ದಾರೆ. ಅದೇ ರೀತಿ ಬಜಾಜ್, ಕಿರ್ಲೋಸ್ಕರ್, ಅಂಬಾನಿ ಉತ್ಪಾದನಾ ಕ್ಷೇತ್ರದ ಯಾರೇ ಆಗಲಿ ಉತ್ಪಾದಕತೆಯನ್ನು ಹೆಚ್ಚಿಸಿ ಉದ್ಯೋಗಾವಕಾಶವನ್ನು ಕಡಿತಗೊಳಿಸಿದ್ದಾರೆ. ಉತ್ಪಾದಕತೆಯನ್ನು ಟಾಟಾರವರು ೮ ಪಟ್ಟು, ಬಜಾಜ್‌ರವರು ೧೦ ಪಟ್ಟು, ಕಿರ್ಲೋಸ್ಕರ್‌ರವರು ರೋಬೊ ತಂತ್ರಜ್ಞಾನದಿಂದ ೧೬ ಪಟ್ಟು ಹೆಚ್ಚಿಸಿದರು. ಉದ್ಯೋಗಾವಕಾಶವು ಅದೇ ಪ್ರಮಾಣದಲ್ಲಿ ಇಳಿಮುಖವಾಯಿತು. ಕಾರಣವೇನೆಂದರೆ ಮಾರುಕಟ್ಟೆಯು ಅದೇ ಪ್ರಮಾಣದಲ್ಲಿ ಬೆಳೆಯುತ್ತಿಲ್ಲ. ಇದನ್ನು ಮಾರುವುದೆಲ್ಲಿ ಎಂದು ಸರ್ಕಾರವನ್ನು ಕೇಳಿದರೆ ಮನಮೋಹನ ಸಿಂಗರಂತಹ ಅರ್ಥಶಾಸ್ತ್ರಜ್ಞರೂ ಸೇರಿದಂತೆ 'ವಿದೇಶಿ ಮಾರುಕಟ್ಟೆಯಲ್ಲಿ' ಎಂದು ಉತ್ತರ ನೀಡುತ್ತಿದ್ದರು. ಚೀನಾದಂತೆ ನಮ್ಮ ದೇಶದ ಸಂದರ್ಭದಲ್ಲಿ ಇದು ಸಾಧ್ಯವಿಲ್ಲ. ಏಕೆಂದರೆ ನಾವು ವಿದೇಶಗಳಿಗೆ ಮಾರುವುದಕ್ಕಿಂತಲೂ ನಾವು ವಿದೇಶಗಳಿಂದ ಕೊಳ್ಳುವುದೇ ಹೆಚ್ಚು. ಆದ್ದರಿಂದ ಇದು ಸಾಧ್ಯವಿಲ್ಲ. ವಿದೇಶಿ ಮಾರುಕಟ್ಟೆ ಇಲ್ಲವಾದರೆ ಮತ್ತೆಲ್ಲಿ ಮಾರುವಿರಿ ಎಂಬ ಪ್ರಶ್ನೆಗೆ ಉತ್ತರವಿಲ್ಲ. ಅಂತರರಾಷ್ಟ್ರೀಯವಾಗಿ ಸ್ಪರ್ಧಾತ್ಮಕವಾಗಲು ಕಾರ್ಪೊರೇಟ್ ಸಂಸ್ಥೆಗಳಿಗೆ ಸರ್ಕಾರವು ತೆರಿಗೆ ವಿನಾಯಿತಿ ಮತ್ತಿತರ ರಿಯಾಯಿತಿಗಳ ರೂಪದಲ್ಲಿ ೫.೮ ಟ್ರಿಲಿಯನ್ ರೂಪಾಯಿಗಳನ್ನು ನೀಡಿದೆ. ಶೇ. ೭೦ರಷ್ಟು ಇರುವ ಬಡಜನತೆಗೆ ೫.೨ ಟ್ರಿಲಿಯನ್ ರೂಪಾಯಿಗಳು. ಇಷ್ಟಾದರೂ ಉದ್ಯೋಗಾವಕಾಶ ಬೆಳೆಯಲಿಲ್ಲವೆಂದರೆ ಏನು ಮಾಡುವುದು ? ಅದಕ್ಕೆ ಆಳುವವರು ಇನ್ನೊಂದು ಮಾರ್ಗವನ್ನು ಹುಡುಕಿದರು. ತೆರಿಗೆ ವಿನಾಯಿತಿ ಮತ್ತಿತರ ರಿಯಾಯಿತಿಗಳ ಜೊತೆಗೆ ಹೂಡಿಕೆದಾರರಿಗೆ ಇನ್ನಷ್ಟು ಅನುಕೂಲಗಳನ್ನು ಕಲ್ಪಿಸುವುದು. ಅದಕ್ಕೆ ಹೂಡಿಕೆಗೆ ಬಂಡವಾಳವನ್ನೆ ನೀಡುವುದು. ನೀವು ಮನಮೋಹನ್ ಸಿಂಗರ/ಚಿದಂಬರಂರವರ ಆಗಿನ ಭಾಷಣದಲ್ಲಿ ಹೂಡಿಕೆದಾರರಿಗೆ ಪೂರಕ ವಾತಾವರಣ ಹಾಳಾಗಿದೆ, ಮಾವೋವಾದಿಗಳು ಹೂಡಿಕೆಯ ವಾತಾವರಣವನ್ನು ಹಾಳು ಮಾಡುತ್ತಿದ್ದಾರೆ. ನಾವು ಹೂಡಿಕೆಗೆ ಪೂರಕವಾದ ವಾತಾವರಣವನ್ನು ತರುತ್ತೇವೆ ಎಂದೆಲ್ಲಾ ಹೇಳುತ್ತಿದ್ದರು. ಕೊಳ್ಳುವ ಶಕ್ತಿಯೇ ಇಲ್ಲದ ಬಡ ಗ್ರಾಹಕರೇ ತುಂಬಿರುವ ದೇಶದಲ್ಲಿ ಹೂಡಿಕೆಗೆ ಪೂರಕ ವಾತಾವರಣವನ್ನು ತರುವುದು ಹೇಗೆ? ಅದಕ್ಕೆ ಅವರು ದಾರಿಯೊಂದನ್ನು ಹುಡುಕಿದರು. ಅದು ಬಹುರಾಷ್ಟ್ರೀಯ ಕಂಪನಿಗಳಿಗೆ ಕಾರ್ಪೊರೇಟ್ ಸಂಸ್ಥೆಗಳಿಗೆ ಭೂಮಿ ಮತ್ತು ಭೂಮಿಯೊಳಗಿನ ಖನಿಜವನ್ನು ನೀಡುವುದು. ಮನಮೋಹನ್ ಸಿಂಗರು ಬಹಳ ಕುಶಲಮತಿ. ನಕ್ಸಲರ ವಿರುದ್ಧ 'ಆಪರೇಷನ್ ಗ್ರೀನ್ ಹಂಟ್' ನಡೆಯುತ್ತಿದ್ದಾಗ ಅವರನ್ನು ದೇಶದ ಸುರಕ್ಷತೆಗೆ ಬಹುದೊಡ್ಡ ಅಪಾಯ ಎಂದು ಕರೆದರು. ಮೇಲ್ನೋಟಕ್ಕೆ ಪ್ರಭುತ್ವ ಶಕ್ತಿಯ ವಿರುದ್ಧ ನಡೆಸುತ್ತಿರುವ ಗೆರಿಲ್ಲಾ ಮಾದರಿಯ ಸಶಸ್ತ್ರ ಹೋರಾಟವನ್ನು ಅವರು ಉಲ್ಲೇಖಿಸುವಂತೆ ಕಂಡರೂ ಒಳ ಅರ್ಥ ಬೇರೆಯೇ ಇದೆ. ಅದೇನೆಂದರೆ, ಇದು ಇದೇ ರೀತಿ ಮುಂದುವರಿದರೆ ನಮಗೆ ಬೇಕಾಗಿರುವ ಹೂಡಿಕೆಗೆ ಪೂರಕವಾದ ವಾತಾವರಣವಿರುವುದಿಲ್ಲ ಎಂಬುದು. ಅದೇ ತಪ್ಪನ್ನು ಸಿಪಿಎಂ ಸಹ ಮಾಡಿತು. ಅದರೊಂದಿಗೆ ಸಿಪಿಐ ಸಹ ಸೇರಿತು. ಇದನ್ನು ನಾನು ಹೇಳಲು ವಿಷಾದಿಸುತ್ತೇನೆ. ಎಲ್ಲಾ ರಾಜಕೀಯ ಪಕ್ಷಗಳು ಭೂಮಿಯನ್ನು ಕೊಡುವ ವಿಷಯದಲ್ಲಿ ಒಂದೇ ರೀತಿಯಲ್ಲಿ ವರ್ತಿಸಿವೆ. ಭೂಮಿ ಅದರ ಒಳಗಿರುವ ಖನಿಜಗಳು, ಕಾಡುಗಳು, ಪರ್ವತಗಳು, ಕರಾವಳಿ ಎಲ್ಲವನ್ನು ಹೂಡಿಕೆಗೆ ಉಚಿತವಾಗಿ ಅಥವಾ ಕಡಿಮೆ ಬೆಲೆಗೆ ಕಾರ್ಪೊರೇಟ್ ಸಂಸ್ಥೆಗಳಿಗೆ ಕೊಡುವುದು ಹೂಡಿಕೆಗೆ ಪ್ರೋತ್ಸಾಹ ಭತ್ಯೆಯಾಗಿ; ಕಾರ್ಪೊರೇಟ್ ಸಂಸ್ಥೆಗಳು ಇರುವುದೇ ಲಾಭಕ್ಕಾಗಿ. ಅವರಿಗೆ ಭೂಮಿ ಉಚಿತವಾಗಿ ಸಿಕ್ಕಿದರೂ ಬಂಡವಾಳ ಹೂಡಬೇಕೆಂದೇನಿಲ್ಲ. ಭವಿಷ್ಯದಲ್ಲಿ ಹೆಚ್ಚಿನ ಲಾಭಕ್ಕಾಗಿ ಅವರು ಸಮಯ ಕಾದು (ಏನೂ ಮಾಡದೆ) ಕುಳಿತುಬಿಡುತ್ತಾರೆ. ಉತ್ತರಪ್ರದೇಶ, ದೇಶದ ಮತ್ತಿತರ ಭಾಗಗಳಲ್ಲಿ ಇದರ ಪುರಾವೆ ನಿಮಗೆ ಸಿಗುತ್ತದೆ. ಮುಂದೆ ಲಾಭಕ್ಕೆ ಮಾರಿಕೊಳ್ಳುತ್ತಾರೆ.

ಬಹುತೇಕ ಸಂದರ್ಭಗಳಲ್ಲಿ ಅವರು ಭೂಮಿಯನ್ನು ಬೀಳು ಬಿಟ್ಟು ಬಾಕ್ಸೈಟ್‌ನಂತಹ ಖನಿಜಗಳನ್ನು ಮಾರಾಟ ಮಾಡಲು ಉಪಕ್ರಮಿಸುತ್ತಾರೆ. ಸರ್ಕಾರದ ನೀತಿಗಳ ಉದ್ದೇಶ ಜಾಗತೀಕರಣದ ಸಂದರ್ಭದಲ್ಲಿ ಬೇರೆಯೇ ಆಗಿದೆ. ಅದನ್ನು ನಾವು ಮನಗಾಣಬೇಕಾಗಿದೆ. ಕಾಂಗ್ರೆಸ್ ಅನುಸರಿಸಿದ ನೀತಿಯೂ ಇದೇನೆ. ಮೋದಿ ಅದನ್ನು ಇನ್ನಷ್ಟು ತೀವ್ರವಾಗಿ ಜಾರಿಗೊಳಿಸುತ್ತಿದ್ದಾರೆ. ಅದೇನೆಂದರೆ, ಮೂಲಭೂತವಾಗಿ ಆರ್ಥಿಕ ಬೆಳವಣಿಗೆಗೆ ಕಾರ್ಪೊರೇಟ್ ವಲಯವನ್ನು ಬಲಗೊಳಿಸಬೇಕೆಂಬುದಾಗಿದೆ. ಉದ್ಯೋಗಾವಕಾಶಗಳನ್ನು ಸೃಷ್ಟಿಸಲಾಗದಿದ್ದರೆ ಕಾರ್ಪೊರೇಟ್ ವಲಯಕ್ಕೆ ಒಳಿತಲ್ಲ. ಏಕೆಂದರೆ ಸರ್ಕಾರಗಳಿಗೆ ಕಾರ್ಪೊರೇಟ್ ವಲಯಕ್ಕೆ ಹೆಚ್ಚಿನ ತೆರಿಗೆ ವಿಧಿಸುವುದು ಎಷ್ಟು ಸಾಧ್ಯವೋ ತಿಳಿಯುವುದಿಲ್ಲ. ಆದರೆ ಕಾರ್ಪೊರೇಟ್ ಸಂಸ್ಥೆಗಳೇ ಅಭಿವೃದ್ಧಿಯ ಎಂಜಿನ್‌ಗಳಾಗಿವೆ. ಕಾರ್ಪೊರೇಟ್ ಸಂಸ್ಥೆಗಳನ್ನು ಅಭಿವೃದ್ಧಿ ಕಾರ್ಯಕ್ಕೆ ಪ್ರೇರೇಪಿಸಲು ಹೆಚ್ಚು ಹೆಚ್ಚು ಸಬ್ಸಿಡಿಗಳನ್ನು ನೀಡಲಾಗುವುದು. ಅದು ಸಾಲದಿದ್ದರೆ ನೈಸರ್ಗಿಕ ಸಂಪನ್ಮೂಲಗಳನ್ನು ಉಚಿತವಾಗಿ ಅಥವಾ ಅಗ್ಗದ ದರದಲ್ಲಿ ನೀಡಲಾಗುವುದು. ಇದಕ್ಕೆ ಪ್ರತಿಯಾಗಿ ಕಾರ್ಪೊರೇಟ್ ಸಂಸ್ಥೆಗಳು ಏನನ್ನು ಕೊಡುತ್ತವೆ ಎಂಬುದು ನಮಗೆಲ್ಲಾ ತಿಳಿದಿದೆ, ಏಕೆಂದರೆ ಕರ್ನಾಟಕದಲ್ಲಿ ಯಡ್ಯೂರಪ್ಪನಂತಹವರನ್ನು ನೀವು ಬಲ್ಲಿರಿ. ಭೂಮಿ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಹಸ್ತಾಂತರದಿಂದ ಲಾಭ ಪಡೆದ ಕಾರ್ಪೊರೇಟ್ ಸಂಸ್ಥೆಗಳು ಲಂಚದ ರೂಪದಲ್ಲಿ ಮಾತ್ರವಲ್ಲ ಪಕ್ಷದ ನಿಧಿಗೂ ದಂಡಿಯಾಗಿ ಹಣ ನೀಡುತ್ತವೆ. ವೈಯಕ್ತಿಕ ಭ್ರಷ್ಟಾಚಾರದ ವಿಷಯದಲ್ಲಿ ನನಗೆ ಮಹತ್ವದ್ದೇನೂ ಕಾಣುವುದಿಲ್ಲ. ವೈಯಕ್ತಿಕ ಭ್ರಷ್ಟತೆಯಲ್ಲಿ ರುಷುವತ್ತು ಪಡೆದವನು ಕೊಟ್ಟವನ ಪ್ರತಿನಿಧಿಯಾಗಿ ಕೆಲಸಮಾಡುವಂತಹ ವಾಕರಿಕೆ ತರಿಸುವ ಮಾದರಿಯಾಗಿ ಸಮಸ್ಯೆಯಾಗಿದೆ.

ಕಾರ್ಪೊರೇಟ್ ಸಂಸ್ಥೆಗಳು ಮಾಡುವ ಕೆಲಸ ಇನ್ನೂ ಭಯಾನಕವಾದದ್ದು. ಜಗತ್ತಿನ ಅತಿ ಹೆಚ್ಚು ಶ್ರೀಮಂತರ ಪಟ್ಟಿಯನ್ನು ಪ್ರಕಟಿಸುವ ಫೋರ್ಬ್ಸ್ ಪತ್ರಿಕೆಯ ಪ್ರಕಾರ ಜಗತ್ತಿನ ೨೪೦ ಹೆಚ್ಚು ಶ್ರೀಮಂತರ ಪೈಕಿ ೫೨ ಮಂದಿ ಭಾರತೀಯರಾಗಿದ್ದಾರೆ. ಇಪ್ಪತ್ತು ವರ್ಷಗಳ ಹಿಂದೆ ೮ ಇದ್ದದ್ದು ಈಗ ೫೨ಕ್ಕೆ ಏರಿದೆ. ಇವರೆಲ್ಲರ ಸಿರಿಯು ಬಂದದ್ದು ಎಲ್ಲಿಂದ ? ಈ ೫೨ ಜನರ ಪೈಕಿ ೩೦ ಮಂದಿ ಭೂಮಿ ವ್ಯವಹಾರದಲ್ಲಿ ತೊಡಗಿದ್ದವರೆ. ಈ ರೀತಿಯಾಗಿ ಇವರು ಹಣ ಮಾಡುತ್ತಿದ್ದಾರೆ. ಕಾರ್ಪೊರೇಟ್ ಸಂಸ್ಥೆಗಳಿಗೆ ಈ ನೀತಿಗಳು ಮುಂದುವರಿಯುವುದು ಬೇಕಾಗಿದೆ. ಅವುಗಳಿಗೆ ಸರ್ಕಾರಗಳೂ ಪುಕ್ಕಟೆಯಾಗಿ ಅಥವಾ ಅಗ್ಗದ ದರದಲ್ಲಿ ಭೂಮಿ ಸಂಪನ್ಮೂಲ ಕೊಡುತ್ತವೆ. ಈ ಸಂಸ್ಥೆಗಳು ರಾಜಕೀಯ ಪಕ್ಷಗಳಿಗೆ ಹಣ ಒದಗಿಸುತ್ತವೆ. ಇದಕ್ಕೆ ಇತ್ತೀಚಿನ ಉದಾಹರಣೆ ಎಂದರೆ ಆಕಾಶದಲ್ಲಿ ೨ಜಿ ಸ್ಪೆಕ್ಟ್ರಂ ಆದರೆ ಭೂಮಿಯಲ್ಲಿ ಕಲ್ಲಿದ್ದಲು. ಕಲ್ಲಿದ್ದಲು ನಿಕ್ಷೇಪದ ಹಂಚಿಕೆಯನ್ನು ನೀವು ಗಮನಿಸಿದರೆ; ಅದರಲ್ಲಿ ವೈಯಕ್ತಿಕವಾಗಿ ಯಾರಾದರು ಭ್ರಷ್ಟಾಚಾರವೆಸಗಿರುವರೆ ಎಂಬುದು ಅಷ್ಟು ಮುಖ್ಯವಲ್ಲ. ಅಗ್ಗದ ಬೆಲೆಗೆ ಇದನ್ನು ಪಡೆದ ಕೆಲವೇ ಕಾರ್ಪೊರೇಟ್ ಸಂಸ್ಥೆಗಳು ಪ್ರತಿಯಾಗಿ ಬೃಹತ್ ಮೊತ್ತದ ಹಣವನ್ನು ರಾಜಕೀಯ

ದೇಣಿಗೆಯಾಗಿ ನೀಡಿದವು. ಇದು ನಮ್ಮ ಪ್ರಜಾಪ್ರಭುತ್ವದ ಮೇಲೆ ಎಂತಹ ಪರಿಣಾಮವನ್ನು ಬೀರಿದೆ ಎಂದರೆ ಜನಸಾಮಾನ್ಯರು ಚುನಾವಣೆಯಲ್ಲಿ ಸ್ಪರ್ಧಿಸುವುದು ಸಾಧ್ಯವೇ ಇಲ್ಲದಂತಹ ಪರಿಸ್ಥಿತಿ ಉಂಟಾಗಿದೆ. ೨೦–೩೦ ವರ್ಷಗಳ ಹಿಂದೆ ಸಾಮಾನ್ಯ ಜನರು ಚುನಾವಣೆಗೆ ಸ್ಪರ್ಧಿಸಲು (ಸ್ವಲ್ಪ ಹಣ ಖರ್ಚುಮಾಡಿ ಅವರ ಕೆಲಸ, ಪಕ್ಷ ಸಿದ್ಧಾಂತಗಳ ಆಧಾರದ ಮೇಲೆ.) ಯೋಚಿಸ ಬಹುದಾಗಿತ್ತು. ಇಂದು ಒಂದು ಪಾರ್ಲಿಮೆಂಟ್ ಚುನಾವಣೆಯಲ್ಲಿ ಒಂದು ಕ್ಷೇತ್ರದಲ್ಲಿ ೩೦–೪೦ ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಾರೆಂದರೆ, ಪ್ರಜಾಪ್ರಭುತ್ವ ಎಷ್ಟು ದುಬಾರಿಯಾಗಿದೆ ಎಂದು ನೀವೇ ಯೋಚಿಸಿ. ಇಷ್ಟು ದೊಡ್ಡ ಪ್ರಮಾಣದ ಹಣ ಖರ್ಚು ಮಾಡಲು ಯಾರಿಗೆ ಸಾಧ್ಯ? ಇದು ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವದ ಸ್ವರೂಪವನ್ನೇ ಬದಲಾಯಿಸಿದೆ. ನಮ್ಮ ದೇಶವನ್ನು ಅತಿ ದೊಡ್ಡ ಪ್ರಜಾಪ್ರಭುತ್ವ, ಬಡಜನರ ಪ್ರಜಾಪ್ರಭುತ್ವ ಎಂದೆಲ್ಲಾ ಬಣ್ಣಿಸಲಾಗುತ್ತದೆ. ಅದೆಲ್ಲವೂ ನಿಜ. ಆದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಕಾರ್ಪೋರೇಟ್ ಸಂಸ್ಥೆಗಳಿಗೆ ನೈಸರ್ಗಿಕ ಸಂಪನ್ಮೂಲಗಳನ್ನು ನೀಡುವುದು ಅದಕ್ಕೆ ಪ್ರತಿಯಾಗಿ ಅವುಗಳು ರಾಜಕೀಯ ಪಕ್ಷಗಳಿಗೆ ದೊಡ್ಡ ಮೊತ್ತದ ಹಣ ನೀಡುವುದು. ನಮ್ಮ ರಾಷ್ಟ್ರೀಯತೆ ಹಾಗೂ ಆರ್ಥಿಕ ಅಭಿವೃದ್ಧಿಯ ಸ್ವರೂಪದ ಮೇಲೂ ಸಹ ತನ್ನ ಪ್ರಭಾವವನ್ನು ಬೀರಿದೆ. ಇದು ವೈಯಕ್ತಿಕ ಭ್ರಷ್ಟಾಚಾರದ ಪ್ರಶ್ನೆಯಲ್ಲ. ಇಡೀ ವ್ಯವಸ್ಥೆಯನ್ನು ಶ್ರೀಮಂತರ ಪರ ದೊಡ್ಡ ಕಾರ್ಪೋರೇಟ್ ಸಂಸ್ಥೆಗಳ ಪರವಾಗಿ ಭ್ರಷ್ಟಗೊಳಿಸುವುದಾಗಿದೆ, ಕೃಷ್ಣ–ಗೋದಾವರಿ ಕಣಿವೆಯಲ್ಲಿ ಅಂಬಾನಿಗಳಿಗೆ ತೈಲ ನಿಕ್ಷೇಪ ನೀಡಿರುವುದು. ಅವರು ಉತ್ಪಾದಿಸಬೇಕಾದ ಅನಿಲ ಪ್ರಮಾಣದ ಶೇ. ೧೭ರಷ್ಟನ್ನೆ ಉತ್ಪಾದಿಸುತ್ತಿರುವುದು, ಟಾಟಾರವರು ಲೋಹಂಡಿ ಗುಡ್ಡವನ್ನು ಪಡೆದು ಅನೇಕ ವರ್ಷಗಳಿಂದ ಅದನ್ನು ಅಭಿವೃದ್ಧಿಗೊಳಿಸದೇ ಇರುವುದು ಇತ್ಯಾದಿ ಹಲವು ಉದಾಹರಣೆಗಳನ್ನು ನೀಡಬಹುದು. ಜಗತ್ತಿನ ಅತಿ ಹೆಚ್ಚು ಬಡವರು ಇರುವ ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವವನ್ನು ಅತಿ ಹೆಚ್ಚು ಶ್ರೀಮಂತ ಕಾರ್ಪೋರೇಟ್ ಸಂಸ್ಥೆಗಳ ಪರವಾಗಿ ಕಾನೂನು ಸಮ್ಮತವಾಗಿಯೇ ಅವರ ನಿಯಂತ್ರಣಕ್ಕೆ ನೀಡಲಾಗಿದೆ. ರಾಜಕೀಯದ ಪ್ರವೇಶ ಶುಲ್ಕವನ್ನು ಹೆಚ್ಚಿಸುವುದು ಅದರ ಒಂದು ವಿಧಾನ. ಇಂದು ನಡೆಯುತ್ತಿರುವುದೂ ಅದೆ. ಸರ್ಕಸ್ಸಿನ ಪ್ರವೇಶಕ್ಕೆ ಪ್ರವೇಶ ಶುಲ್ಕವಿರುವಂತೆ ರಾಜಕೀಯ ಪ್ರವೇಶಕ್ಕೆ ೩೦–೪೦ ಕೋಟಿ ರೂಪಾಯಿ ನಿಗದಿಪಡಿಸುವುದು. ಅರ್ಥಶಾಸ್ತ್ರದ ದೃಷ್ಟಿಯಿಂದ ಇದನ್ನು ಹೇಳುವುದಾದರೆ, ಇದರ ಬೆಲೆಯನ್ನು ತರ್ಕಬದ್ಧಗೊಳಿಸುವುದು. ರಾಜಕೀಯ ಪ್ರವೇಶದ ಬೆಲೆಯನ್ನು ಅತಿ ಹೆಚ್ಚಾಗಿ ನಿಗದಿಪಡಿಸಿದಾಗ, ಜನಸಾಮಾನ್ಯರು ಹೊರಗುಳಿಯುತ್ತಾರೆ. ನಾವು ಎಷ್ಟೇ ಜನಪರ ನೀತಿಗಳ ಬಗ್ಗೆ ಮಾತನಾಡಿದರೂ ಜನಸ್ನೇಹಿ ಆರ್ಥಿಕ ಬೆಳವಣಿಗೆ ಬಗ್ಗೆ ಮಾತನಾಡಿದರೂ ಈ ವ್ಯವಸ್ಥೆಯ ರಾಜಕಾರಣದ ಹಣಕಾಸು ಮೂಲದಲ್ಲಿಯೇ ಅದನ್ನು ಪ್ರತಿಬಂಧಿಸದೇ ಇದ್ದರೆ ಈ ಆರ್ಥಿಕ ಬೆಳವಣಿಗೆ ಜನಪರವಾಗಲಾರದು. ರಾಷ್ಟ್ರೀಯತೆಯ ದೃಷ್ಟಿಯಿಂದ ಕಾರ್ಪೋರೇಟ್‌ಗಳಿಗೆ ಯಾರು ಬೇಕಾಗಿದ್ದಾರೆ? ಜನರೊಂದಿಗೆ ಅತಿ ಕಡಿಮೆ ಸಂಪರ್ಕವಿರುವ ಜನರು ಬೇಕು. ಜನರ ಸಾಮಾಜಿಕ ಪೂರ್ವಾಗ್ರಹಗಳನ್ನು ದುರ್ಬಳಕೆ ಮಾಡಿಕೊಳ್ಳುವ ಹೆಚ್ಚಿನ ದರದ ಆರ್ಥಿಕ ಬೆಳವಣಿಗೆಯ ಭ್ರಮೆ ಹುಟ್ಟಿಸುವವರು ಬೇಕು. ಈ ವಿಧಾನ ಕಾರ್ಯ ಸಾಧುವಲ್ಲ. ಇದು ಎರಡು ಕಾರಣಗಳಿಂದ ವಿಫಲವಾಗಲಿದೆ. ಇನ್ನು ೧೦–೧೨ ವರ್ಷಗಳಲ್ಲಿಯೇ ಇದರ ಪೊಳ್ಳುತನ ಬಯಲಾಗಲಿದೆ. ಒಂದು ಕಾರಣವೇನೆಂದರೆ ಬಡರಾಷ್ಟ್ರವೊಂದರಲ್ಲಿ ಹೆಚ್ಚುತ್ತಿರುವ ಆರ್ಥಿಕ ಅಸಮಾನತೆ, ಉದ್ಯೋಗಗಳ ಅತಿ ಕಡಿಮೆ ಬೆಳವಣಿಗೆ ಸಮರ್ಥನೀಯವಲ್ಲ. ಈಗಾಗಲೇ ಇದರ ಸೂಚನೆಗಳು ಆರಂಭವಾಗಿವೆ. ಟಾಟಾರವರ ಉಕ್ಕನ್ನು ಉತ್ಪಾದಿಸಬಹುದು. ಆದರೆ ಅದನ್ನು ಮಾರುವುದೆಲ್ಲಿ? ಶಾಸ್ತ್ರೀಯ ಮಾರ್ಕ್ಸ್‌ವಾದಿ ಪರಿಭಾಷೆಯಲ್ಲಿ ಕೇನ್ಸ್‌ನ ಸಿದ್ಧಾಂತಗಳಲ್ಲಿ ಬಂಡವಾಳ ವ್ಯವಸ್ಥೆಯೊಳಗೆ ಇದನ್ನು ಹೆಚ್ಚು ಉತ್ಪಾದನೆಯ ಸಮಸ್ಯೆ ಎಂದು ಬಣ್ಣಿಸಲಾಗಿದೆ.




ಹಿಂದಿನ ಮುಂದಿನ
ಜನುಮಗಳ ಬಗೆಗಿನ
ಚಿಂತೆಗಳನು ಮುಂದೆ ನೂಕು;
ಇಂದು ಮತ್ತು
ನಾಳೆಯ
ನೆಮ್ಮದಿಗಾಗಿ ಬದುಕು!

•ಗೋಪಿ•
ಹಿರೇಬೆಟ್ಟು

ಉತ್ಪಾದನೆಯಾದ ವಸ್ತುಗಳನ್ನು ಮಾರಿ ಲಾಭ ಗಳಿಸಲು ಮಾರುಕಟ್ಟೆಯ ಅವಶ್ಯಕತೆ ಇದೆ. ಉಕ್ಕನ್ನು ಉತ್ಪಾದಿಸುವುದೇ ಲಾಭವಲ್ಲ. ಅದನ್ನು ಮಾರಬೇಕು. ಅದಕ್ಕೆ ಜನರಲ್ಲಿ ಕೊಳ್ಳುವ ಶಕ್ತಿ ಕ್ಷೀಣಿಸುತ್ತಿರುವಾಗ ಅದನ್ನು ಮಾರುವುದೆಲ್ಲಿ? ಉದ್ಯೋಗಾವಕಾಶಗಳನ್ನು ಸೃಷ್ಟಿಸಿ ಜನರ ಕೈಯಲ್ಲಿ ಕೊಳ್ಳುವ ಶಕ್ತಿ ನೀಡಿದರೆ ಮಾತ್ರ ಸ್ವಲ್ಪ ಪರಿಸ್ಥಿತಿ ಸರಿಯಾಗಬಹುದು. ಇಲ್ಲವಾದರೆ ಇದು ಸಮಸ್ಯೆಯ ಒಂದು ಮುಖ. ಸಾಕಷ್ಟು ಪ್ರಮಾಣದಲ್ಲಿ ವಿಸ್ತಾರಗೊಳ್ಳದ ಮಾರುಕಟ್ಟೆಯ ಕಾರಣ ಈ ಮಾದರಿಗೆ ತೀವ್ರ ಇತಿಮಿತಿಗಳಿವೆ. ಇನ್ನೊಂದು ಕಾರಣ ರಾಜಕೀಯ ಸ್ವರೂಪದ್ದು. ಸರ್ಕಾರವು ಸುಮಾರು ೬೦ ಲಕ್ಷ ಕೋಟಿ ರೂಪಾಯಿ ಮೌಲ್ಯದ ಭೂಮಿಯನ್ನು ಕಾರ್ಪೋರೇಟ್ ಸಂಸ್ಥೆಗಳಿಗೆ ಕೊಡಲು ಉದ್ದೇಶಿಸಿದೆ. ಇದು ಭಾಗಶಃ ಸರ್ಕಾರಿ ಸಂಸ್ಥೆ ಕೊಟ್ಟಿರುವ ಮಾಹಿತಿಯಾದ್ದರಿಂದ ಉತ್ಪ್ರೇಕ್ಷಿತವೂ ಇರಬಹುದು. ಆದರೆ ಇಷ್ಟು ಪ್ರಮಾಣದ ಹೂಡಿಕೆ ಆಗುತ್ತಿಲ್ಲ, ಏಕೆಂದರೆ ದೇಶದ ಜನತೆ ಭೂಸ್ವಾಧೀನವನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಜನರನ್ನು ಭೂಮಿಯಿಂದ ಒಕ್ಕಲೆಬ್ಬಿಸಿದರೆ ಅವರು ಹೋಗುವುದಾದರೂ ಎಲ್ಲಿಗೆ. ನೀವು ಆರ್ಥಿಕ ಬೆಳವಣಿಗೆ ಬಗ್ಗೆ ಮಾತನಾಡಬಹುದು ಬೇಕಾದರೆ ಅದನ್ನೇ ತಿನ್ನಲೂಬಹುದು ಏಕೆಂದರೆ ನೀವು ಒಂದು ಸಭೆಯಲ್ಲಿ ಕುಳಿತಿರುವಿರಿ. ಆದರೆ ಗ್ರಾಮೀಣ ಪ್ರದೇಶದ ಒಬ್ಬ ರೈತ ತನ್ನ ಭೂಮಿಯನ್ನು ಕಳೆದುಕೊಂಡರೆ ತನ್ನ ಬದುಕನ್ನೇ ಕಳೆದುಕೊಳ್ಳುತ್ತಾನೆ. ಭೂಮಿ ಕಳೆದುಕೊಳ್ಳುವುದರಿಂದ ಉಂಟಾಗುವ ಬೆಳವಣಿಗೆಯ ಕುಸಿತವು ಉತ್ಪಾದನೆ ಹೆಚ್ಚಾಗುವುದರಿಂದ ಉಂಟಾಗುವ ಬೆಳವಣಿಗೆಗಿಂತಲೂ ಹೆಚ್ಚಾಗಿದೆ. ಆದ್ದರಿಂದ ಈ ಕಾರಣದಿಂದಲೂ ಈ ಅಭಿವೃದ್ಧಿ ಮಾದರಿ ವಿಫಲವಾಗುವುದು ಖಂಡಿತ. ಈ ಅಭಿವೃದ್ಧಿಯ ಮಾದರಿಯು ಬೆಳವಣಿಗೆ ದರ ಜಿ.ಡಿ.ಪಿ. ಮೇಲೆ ಅವಲಂಬಿಸಿದೆಯೇ ವಿನಾ ಜನರ ಉಪಭೋಗದ ಶಕ್ತಿಯನ್ನು ಅವಲಂಬಿಸಿಲ್ಲ. ಶಾಸ್ತ್ರೀಯ ಮಾರ್ಕ್ಸ್‌ವಾದಿ ಪರಿಭಾಷೆಯಲ್ಲಿ ಮಾರುಕಟ್ಟೆ ಇಲ್ಲದಿರುವಿಕೆ ಎನ್ನಲಾಗುತ್ತದೆ ಇದಕ್ಕೆ. ಇದೇ ಈ ಮಾದರಿಯ ಇತಿಮಿತಿ. ಇದೇ ಕಾರಣಕ್ಕಾಗಿ ಜನರಿಂದ ತೀವ್ರ ವಿರೋಧಕ್ಕೆ ಒಳಗಾಗಿದೆ. ದೇಶದ ಜನರು ಹಲವು ರೀತಿಗಳಿಂದ ಹಿಂಸಾತ್ಮಕ, ಅಹಿಂಸಾತ್ಮಕ ಮತ್ತಿತರ ವಿಧಾನಗಳಿಂದ ಸ್ವಾಧೀನವನ್ನು ವಿರೋಧಿಸುತ್ತಿದ್ದಾರೆ. ಇದು ದಿನೇ ದಿನೇ ತೀವ್ರಗೊಳ್ಳುತ್ತಿದೆ. ಇಂದು ನಾವು ವಿಶೇಷ ಸಭಿಕರ ಸಭೆಯಲ್ಲಿರುವ ಕಾರಣ ಇದನ್ನು ಇನ್ನೊಂದು ರೀತಿಯಿಂದಲೂ ವಿಶ್ಲೇಷಿಸಬಹುದು. ಇಂದಿನ ಸಂಘಟಿತ, ಚುನಾವಣಾ ವ್ಯವಸ್ಥೆಯಲ್ಲಿ ಕಮ್ಯುನಿಸ್ಟ್ ಪಕ್ಷಗಳು ರಾಜಕೀಯವಾಗಿ ಪ್ರಸ್ತುತವಾಗಿರಬೇಕಾದರೆ ಭೂಸ್ವಾಧೀನ ಪ್ರಶ್ನೆಗೆ ಸರಿಯಾಗಿ ಸ್ಪಂದಿಸಬೇಕು. ಹಿಂದೆ ರಾಷ್ಟ್ರೀಯತೆಯು ವಸಾಹತುಶಾಹಿ ವಿರೋಧಿಯಾಗಿ ಮೂಡಿಬಂದಾಗ ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳದೆ ಕಮ್ಯುನಿಸ್ಟರು ದುಬಾರಿ ಬೆಲೆ ತೆರಬೇಕಾಯಿತು. ಕಮ್ಯುನಿಸ್ಟ್ ಸಿದ್ಧಾಂತ ಉತ್ಕೃಷ್ಟವಾಗಿರಬಹುದು. ಆದರೆ ರಾಜಕೀಯವಾಗಿ ಪ್ರಸ್ತುತ ವಾಗಿರಲು ಅಷ್ಟೇ ಸಾಲದು. ಅಂತರರಾಷ್ಟ್ರೀಯತೆ ಸರಿಯಾದ ತಿಳುವಳಿಕೆ ಇರಬಹುದು ರಾಷ್ಟ್ರೀಯತೆಯ ಪ್ರಶ್ನೆಯೊಂದಿಗೆ ಸರಿಯಾದ ಜೋಡಣೆಯಾಗದ ಕಾರಣ ದುಬಾರಿ ಬೆಲೆ ನೀಡುವಂತಾಯಿತು. ಹಿಂದೆ ರಾಷ್ಟ್ರೀಯತೆಯು ವಸಾಹತುಶಾಹಿ ವಿರೋಧಿ ನೆಲೆಯಲ್ಲಿತ್ತು. ಇಂದು ಅದು ಬಡಜನರ ರಾಷ್ಟ್ರೀಯತೆಯಾಗಿ ರೂಪುಗೊಂಡಿದೆ. ಅದನ್ನು ರಾಷ್ಟ್ರೀಯತೆ ಎಂದು ಕರೆಯುವುದಿಲ್ಲ ಬದಲಾಗಿ 'ಪ್ರತಿರೋಧ' ಎಂದು ಗುರುತಿಸಲಾಗುತ್ತಿದೆ. ಜನತೆಯು ತಮ್ಮ ಬದುಕನ್ನು ಕಳೆದುಕೊಳ್ಳುತ್ತಿರುವಾಗ ಕಮ್ಯುನಿಸ್ಟರು ಮತ್ತು ಇತರ ಎಡಪಕ್ಷಗಳು ನಿಸ್ಸಂದೇಹವಾಗಿ ಪರ್ಯಾಯವನ್ನು ಪ್ರತಿಪಾದಿಸದಿದ್ದರೆ; (ಪರ್ಯಾಯ ಮಾದರಿ ಬಗ್ಗೆ ಈಗ ನಾನು ಮಾತನಾಡುವುದಿಲ್ಲ;) ರಾಜಕೀಯವಾಗಿ ಪ್ರಸ್ತುತರಾಗಿರುವುದು ಸಾಧ್ಯವಿಲ್ಲ.

ಅನುವಾದ : **ಡಿ. ಎ. ವಿಜಯ ಭಾಸ್ಕರ**
ನಂ. ೧೧೪೦, ೧೩ನೇ ಅಡ್ಡರಸ್ತೆ, ೧ನೇ ಫೇಸ್, ಜೆ. ಪಿ. ನಗರ
ಬೆಂಗಳೂರು – ೫೬೦ ೦೭೮

# ವಿಜ್ಞಾನ ಮತ್ತು ತಂತ್ರಜ್ಞಾನ

**ಡಾ॥** ಟಿ. ಆರ್. ಅನಂತರಾಮು ಅವರು ಈ ಕೃತಿಯಲ್ಲಿರುವ ೩೦ ಅಧ್ಯಾಯಗಳನ್ನು ೪೦ ಜನ ವಿಜ್ಞಾನ ಲೇಖಕರನ್ನು ಆಯ್ಕೆಮಾಡಿ ಬರೆಸಿದ್ದಾರೆ. ಅವರೆಲ್ಲ ಆಯಾ ವಿಷಯಗಳಲ್ಲಿ ಪರಿಣತರು ಮತ್ತು ಪ್ರತಿಭೆಯುಳ್ಳವರು. ಇವರಲ್ಲಿ ಅಡ್ಯನಡ್ಕ ಕೃಷ್ಣಭಟ್, ನಾಗೇಶ ಹೆಗಡೆ, ಸ್ವತಃ ಅನಂತರಾಮು ಅವರು ದೀರ್ಘವಾದ, ಬಹಳ ಆಳವುಳ್ಳ ಮತ್ತು ಗಹನವಾದ ಲೇಖನಗಳನ್ನು ಬರೆದಿದ್ದಾರೆ.

ಅನಂತರಾಮು ತಮ್ಮ ಸಂಪಾದಕರ ಮಾತಿನಲ್ಲಿ ಹೇಳುವ ಕೆಲವು ಮಾತುಗಳು ಈ ಕೃತಿಯ ಆಳ ಮತ್ತು ಹರವಿನ ವಿಸ್ತಾರವನ್ನು ತೋರಿಸುತ್ತವೆ. 'ವಿಜ್ಞಾನ ಬುದ್ಧಿಗಮ್ಯ ಎಂಬ ಪಟ್ಟ ಗಳಿಸಿರುವುದರಿಂದ ಇಲ್ಲಿ ಭಾವಕ್ಕೆ ಅವಕಾಶವಿಲ್ಲ. ವಿಜ್ಞಾನದ ಅನ್ವೇಷಣೆ, ಉಪಜ್ಞೆಗಳು ಇಡೀ ಸಮಾಜದ ದಿಕ್ಕನ್ನೇ ಬದಲಿಸುತ್ತವೆ. ವಿಜ್ಞಾನವು ತಂತ್ರಜ್ಞಾನ ಕೈಡೆಗೊಟ್ಟು ನಮ್ಮನ್ನು ಮತ್ತಷ್ಟು ಅವಲಂಬಿಯನ್ನಾಗಿ ಮಾಡುತ್ತದೆ – ಹಾಗೆ ಮಾಡುತ್ತಲೇ ಹೋಗುತ್ತದೆ. ವಿಜ್ಞಾನದ ಮೂಲ ಆಶಯವೇ ನಿಸರ್ಗದ ಸಂಕೀರ್ಣ ವಿದ್ಯಮಾನಗಳ ಅನಾವರಣ. ಅಂಥ ವಿದ್ಯಮಾನಗಳನ್ನು ಬರಿಗಣ್ಣಿನಿಂದ ನೋಡಿ ಬೆರಗಾಗುವ ಬದಲು ಬಗೆಗಣ್ಣಿನಿಂದ ನೋಡಿ ವಿಶ್ಲೇಷಿಸುವುದನ್ನು ವಿಜ್ಞಾನದ ಪರಿ' ಎನ್ನುತ್ತಾರೆ ಅನಂತರಾಮು. ಅಂದರೆ ವಿಜ್ಞಾನ ಯಾವುದೇ ವಿಷಯವನ್ನು ಸಾಬೀತು ಪಡಿಸಬೇಕಾದರೆ ಅದನ್ನು ನೂರಾರು ಸಲ ವೈಜ್ಞಾನಿಕ ದೃಷ್ಟಿಯಲ್ಲಿ ನೋಡಿ, ಇಲ್ಲವೇ ಪ್ರ್ಯಾಕ್ಟಿಕಲ್ಲಾಗಿ ಕಾರ್ಯತಃ ತೋರಿಸಿದ ನಂತರವೇ ಅದನ್ನು ಒಪ್ಪಿಕೊಳ್ಳುವುದು.

ಕೃತಿಯಲ್ಲಿನ ೩೦ ಅಧ್ಯಾಯಗಳು, ೧೯ನೇ ಶತಮಾನವೂ ಸೇರಿದಂತೆ, ಈವರೆಗಿನ ಕನ್ನಡದ ಒಟ್ಟಾರೆ ವಿಜ್ಞಾನ ಸಾಹಿತ್ಯದ ಎಲ್ಲಾ ಮಜಲುಗಳನ್ನು ಅವಲೋಕಿಸುವಲ್ಲಿ ಸಫಲವಾಗಿವೆ. ಅದನ್ನು ನಾಗೇಶ ಹೆಗಡೆಯವರ ಲೇಖನದಲ್ಲಿ ನೋಡಬಹುದು : 'ನೆಲ–ಜಲ ಮತ್ತು ಪ್ರಕೃತಿಯೊಂದಿಗಿನ ಮನುಷ್ಯ ಸಂಬಂಧಗಳ ಕುರಿತು ರಚಿತವಾದ ಸಾಹಿತ್ಯವನ್ನೆಲ್ಲ 'ಪರಿಸರ ಸಾಹಿತ್ಯ'ವೆಂದು ಗುರುತಿಸಹೋದರೆ ನಮ್ಮ ಈ ಸಾಹಿತ್ಯ ಸಮೀಕ್ಷೆ ಆದಿಕವಿ ಪಂಪನವರೆಗೂ ಹೋಗಬಹುದು. ಪರಿಸರ ಎಂಬ ವಿಷಯವೇ ಅಷ್ಟು ಸಂಕೀರ್ಣವಾದದ್ದು. ಅದರ ಎಲ್ಲೆಗಳನ್ನು ಗುರುತಿಸುವುದು ಸಾಧ್ಯವಿಲ್ಲವೆನ್ನುವಷ್ಟರ ಮಟ್ಟಿಗೆ ಅದು ಇತರ ಜ್ಞಾನ ಪ್ರಕಾರಗಳೊಂದಿಗೆ ಮಿಳಿತವಾಗಿದೆ' (ಪುಟ. ೨೫೯).

ಇನ್ನು 'ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ – ಆರಂಭದ ಹೆಜ್ಜೆಗಳು' ಎಂಬ ಅಧ್ಯಾಯದಲ್ಲಿ ಅಡ್ಯನಡ್ಕ ಕೃಷ್ಣಭಟ್ ಅವರ ಸಣ್ಣ ಪೀಠಿಕೆ ಹೀಗಿದೆ : "ಜೀವಿ–ಜೀವಿಗಳ ಅಗಣಿತ ವ್ಯವಸ್ಥೆಗಳನ್ನು ಒಳಗೊಂಡ ಈ ಜಗತ್ತು ಬಹಳ ದೊಡ್ಡದು, ಸಂಕೀರ್ಣವಾದದ್ದು. ಇದನ್ನು ತಿಳಿಯುವ ಪ್ರಕ್ರಿಯೆ, ಅದಕ್ಕೆ ಅಗತ್ಯವಾದ ಮನೋವೃತ್ತಿ ಹಾಗೂ ಅದರಿಂದ ಸಿಗುವ ಜ್ಞಾನ, ಇಂಥ ಜ್ಞಾನ ಸಂಪಾದನೆಗಾಗಿ ತೇಯ್ದ ಬದುಕುಗಳು, ಜ್ಞಾನ–ಸಮಾಜಗಳೊಳಗಿನ ಅಂತರ್ವರ್ತನೆ, ಬದುಕಿನ ದಾರಿಯಲ್ಲಿ ಮನುಷ್ಯನ ಬೌದ್ಧಿಕ ಸಂಕೇತವಾಗಿ ಮಾಡಿದ ಉಪಜ್ಞೆ ಮತ್ತು ಆವಿಷ್ಕಾರಗಳು, ಇವುಗಳಿಂದ ಹುಟ್ಟಿದ ಹೊಸ ವಸ್ತುಗಳು ಮತ್ತು ಚಿಂತನೆಗಳು, ಬದುಕಿನಲ್ಲಿ ಅವುಗಳ ಅನ್ವಯ, ತತ್ಪರಿಣಾಮವಾಗಿ ಉಂಟಾಗಬಹುದಾದ ಪರಿಣಾಮಗಳು, ಇವುಗಳೆಲ್ಲವುಗಳಿಗೆ ಸಂಬಂಧಿಸಿದ ಸೃಜನಶೀಲ ಬರವಣಿಗೆಗಳು ವಿಜ್ಞಾನ ಸಾಹಿತ್ಯವನ್ನು ರೂಪಿಸುತ್ತವೆ."

೧೮೯ರಿಂದ ಇಂದಿನವರೆಗಿನ ಎಲ್ಲಾ ರೀತಿಯ ವಿಜ್ಞಾನ ಕೃತಿಗಳು, ನಿಯತ ಕಾಲಿಕಗಳು, ಲೇಖನಗಳು, ವಿಜ್ಞಾನ ಅಂಕಣಗಳು, ವಿದ್ಯುನ್ಮಾನ ಮಾಧ್ಯಮಗಳಲ್ಲಿ ವಿಜ್ಞಾನ, ವಿಜ್ಞಾನ ಸಾಹಿತ್ಯದ ಅನುವಾದಗಳು, ವಿಜ್ಞಾನ ಇತಿಹಾಸ, ಪರಿಸರ ವಿಜ್ಞಾನ, ವಿಜ್ಞಾನಿಗಳ ಜೀವನ ಚರಿತ್ರೆ, ಕರ್ನಾಟಕದಲ್ಲಿ ಕೃಷಿ ವಿಜ್ಞಾನ, (ಕುಲಾಂತರಿ ಬೆಳೆಗಳು), ವೈದ್ಯವಿಜ್ಞಾನ, ಕನ್ನಡ ನಿಘಂಟುಗಳು – ವಿಶ್ವಕೋಶಗಳು, ವಿಜ್ಞಾನ ಕಥಾಪ್ರಪಂಚ, ಸಂಘ ಸಂಸ್ಥೆಗಳ ವಿಜ್ಞಾನ ಕೊಡುಗೆ ಮತ್ತು ಮಾಹಿತಿ ತಂತ್ರಜ್ಞಾನ... ಹೀಗೆ ಪಟ್ಟಿ ವೈವಿಧ್ಯಮಯ ವಿಷಯಗಳೊಂದಿಗೆ ಮುಂದುವರಿಯುತ್ತದೆ. ಬೆಳ್ಳಾವೆ ವೆಂಕಟನಾರಣಪ್ಪ, ನಂಗಪುರಂ ವೆಂಕಟೇಶಯ್ಯಂಗಾರ್ಯರು, ಕೋಟ ಶಿವರಾಮ ಕಾರಂತರು, ಆರ್. ಎಲ್. ನರಸಿಂಹಯ್ಯ, ಜೆ. ಆರ್. ಲಕ್ಷ್ಮಣರಾವ್, ಜಿ. ಟಿ. ನಾರಾಯಣರಾವ್, ಅಡ್ಯನಡ್ಕ ಕೃಷ್ಣಭಟ್, ಬಿ. ಜಿ. ಎಲ್. ಸ್ವಾಮಿ, ಕೃಷ್ಣಾನಂದ ಕಾಮತ್, ಪೂರ್ಣಚಂದ್ರ ತೇಜಸ್ವಿ ಅವರಿಂದ ಹಿಡಿದು ಇತ್ತೀಚಿನ ವಿಜ್ಞಾನ ಲೇಖಕರ ಕೊಡುಗೆಯೆಲ್ಲ ಇಲ್ಲಿ ದಾಖಲಾಗಿದೆ.

*ಸಂಪಾದಕ*
**ಡಾ॥ ಟಿ. ಆರ್. ಅನಂತರಾಮು**

ಪುಟಗಳು : **೭೧೪**
ಬೆಲೆ : **ರೂ. ೬೦೦/–**

*ಪ್ರಕಾಶಕರು*
**ಕನ್ನಡ ಸಾಹಿತ್ಯ ಪರಿಷತ್ತು**
ಚಾಮರಾಜಪೇಟೆ
ಬೆಂಗಳೂರು – ೫೬೦ ೦೧೮




ಮಾಹಿತಿ ತಂತ್ರಜ್ಞಾನದ ಬಗ್ಗೆ ಚರ್ಚಿಸುವಾಗ ಶತಮಾನದ ಕನ್ನಡ ತಾಂತ್ರಿಕ ಸಾಹಿತ್ಯ, ಗಣಕ ತಂತ್ರಜ್ಞಾನ, ಪದಸಂಸ್ಕರಣೆ, ತಂತ್ರಾಂಶದ ಬಳಕೆ, ಅಂತರಜಾಲ, ಅವುಗಳ ಹಿನ್ನೆಲೆ, ಕನ್ನಡದ ಅಂತರಜಾಲ ತಾಣಗಳು, ಕನ್ನಡದ ಅಂತರಜಾಲ ಪತ್ರಿಕೆಗಳು, ಕನ್ನಡದ ಬ್ಲಾಗುಗಳು, 'ಕಣಜ' ಅಂತರಜಾಲ ತಾಣ – ಕನ್ನಡ ಜ್ಞಾನಕೋಶ, ವಿಕಿಪೀಡಿಯ, ಮುಕ್ತ ಹಾಗೂ ಸ್ವತಂತ್ರ ತಂತ್ರಾಂಶ ಚಳವಳಿ, ಸಾಮಾಜಿಕ ಜಾಲತಾಣಗಳು ಮತ್ತು ಸಾಮಾಜಿಕ ಪರಿಣಾಮ ಮತ್ತು ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಬಗೆಗಿನ ಲೇಖನಗಳು ಮತ್ತು ಕೃತಿಗಳ ಸಮೀಕ್ಷೆ. ಇವೇ ಅಲ್ಲದೆ ಅಧ್ಯಾಯದ ಕೊನೆಯಲ್ಲಿ ಮುಖ್ಯವಾದ ಕೃತಿಗಳು ಮತ್ತು ಪತ್ರಿಕೆಗಳ ಮುಖಪುಟಗಳನ್ನು ಸ್ಕ್ಯಾನ್ ಮಾಡಿ ಮುದ್ರಿಸಲಾಗಿದೆ. ಜೊತೆಗೆ, ಮುಖ್ಯವಾದ ಕೃತಿಗಳ ಪಟ್ಟಿಯನ್ನು ನೀಡಲಾಗಿದೆ. ಎಲ್ಲಕ್ಕಿಂತ ಬಹುದೊಡ್ಡ ಕೆಲಸವೆಂದರೆ, ಆಯಾ ಕ್ಷೇತ್ರಗಳನ್ನು / ಲೇಖಕರನ್ನು / ಕೃತಿಗಳನ್ನು ವರ್ಗೀಕರಿಸಿರುವುದು. ಈ ಕೃತಿಯನ್ನು ಓದಿ ಮುಗಿಸಿದಾಗ ಈ ಚಾರಿತ್ರಿಕ ಕೃತಿಯಲ್ಲಿ ಯಾವ ವಿಜ್ಞಾನಿಯೂ/ಕೃತಿಯೂ/ಲೇಖನವೂ ಬಿಟ್ಟುಹೋಗಬಾರದು ಎನ್ನುವ ಆಶಯಕ್ಕೆ ಅನಂತರಾಮು ಬದ್ಧರಾಗಿದ್ದಾರೆ ಎನಿಸುತ್ತದೆ.

ಈ ಕೃತಿ ಕನ್ನಡ ವಿಜ್ಞಾನ ಸಾಹಿತ್ಯ ಚರಿತ್ರೆಯ ಒಂದು ಮೈಲಿಗಲ್ಲು. ಬಹುಶಃ ಮುಂದಿನ ದಿನಗಳಲ್ಲಿ ಕನ್ನಡದಲ್ಲಿ ವಿಜ್ಞಾನವನ್ನು ಓದುವವರು, ವಿಜ್ಞಾನ ಲೇಖಕರಾಗಬಯಸುವವರು ಇದನ್ನು ಓದಿಯೇ ಮುಂದಕ್ಕೆ ಹೋಗಬೇಕಾಗಿದೆ. ಈ ಸಂಪುಟದ ಜೊತೆಗೆ ಉಳಿದ ೧೬ ಸಂಪುಟಗಳು ಇದೇ ರೀತಿಯಲ್ಲಿ ಪ್ರಕಟವಾಗಿದ್ದರೆ ಕ.ಸಾ.ಪ. ತನ್ನ ನೂರು ವರ್ಷಗಳ ಚರಿತ್ರೆಯಲ್ಲಿ ಒಂದು ಹೊಸ ಮೈಲಿಗಲ್ಲನ್ನು ಸ್ಥಾಪಿಸಿಕೊಳ್ಳುತ್ತಿತ್ತು. ಈಗ ಇವೆಲ್ಲ ಯಾವ ಕಾಲಕ್ಕೆ ಪ್ರಕಟವಾಗುತ್ತವೊ, ಕಾದುನೋಡಬೇಕಷ್ಟೆ. ಒಟ್ಟಿನಲ್ಲಿ ಡಾ॥ ಟಿ. ಆರ್. ಅನಂತರಾಮು ಅವರು ಕನ್ನಡ ವಿಜ್ಞಾನ ಲೇಖಕರ ಬಳಗದೊಂದಿಗೆ ತಮ್ಮ ಅಮೂಲ್ಯ ಕೊಡುಗೆಯನ್ನು ಈ ಕೃತಿಯ ಮೂಲಕ ಪರಿಚಯಿಸಿದ್ದಾರೆ. ಉಳಿದ ಕನ್ನಡ ಸಂಪುಟಗಳ ಸಂಪಾದಕರು / ಸಾಹಿತಿಗಳು ಇದನ್ನು ಮುಂದುವರಿಸುತ್ತಾರೆ ಎಂಬ ಆಶಯ ನನ್ನದು.

**ಡಾ॥ ಎಂ. ವೆಂಕಟಸ್ವಾಮಿ**
ಭೂವಿಜ್ಞಾನಿ / ಲೇಖಕ
ನಂ. ೫೧೯, ಬ್ಲಾಕ್ ನಂ. ೩೯, ಕೇಂದ್ರ ಸರ್ಕಾರ ಸಿ.ಪಿ.ಡಬ್ಲ್ಯೂ.ಡಿ. ಕ್ವಾಟರ್ಸ್
ಎಚ್.ಎಸ್.ಆರ್. ಬಡಾವಣೆ, ೨೭ನೇ ಮುಖ್ಯರಸ್ತೆ, ಬೆಂಗಳೂರು – ೫೬೦ ೧೦೨






# ಕಾಡಂಚಿನ ಕಲಾವಿದ ವೀರಣ್ಣ



ಕಲಾವಿದ ವೀರಣ್ಣ ಕರಡಿಯವರು ಮೈಸೂರು ಜಿಲ್ಲೆಯ ಹುಣಸೂರು ತಾಲೂಕಿನ ದೊಡ್ಡ ಹೆಜ್ಜೂರಿನಲ್ಲಿ ಚಿತ್ರಕಲಾ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಮೂಲತಃ ಬಾಗಲಕೋಟೆ ಜಿಲ್ಲೆಯ ಬಾದಾಮಿಯವರಾದ ಇವರು, ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ನಾಡೋಜ ಆರ್. ಎನ್. ಹಡಪದ ಅವರ ಶಿಷ್ಯರಾಗಿ ಚಿತ್ರಕಲೆಯ ಕುರಿತು ಡಿಪ್ಲೋಮಾ ಪದವಿ ಪಡೆದರು. ಆ್ಯನಿಮೇಷನ್ ಕೋರ್ಸನ್ನೂ ಮಾಡಿದ ಶ್ರೀ ವೀರಣ್ಣ ಕರಡಿಯವರು ಪ್ರತಿಭಾವಂತ ಕಲಾವಿದರು. ನಾಡಿನ ಹಲವಾರು ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿರುವ ಇವರು ಏಕವ್ಯಕ್ತಿ ಪ್ರದರ್ಶನಗಳನ್ನೂ ಮಾಡಿದ್ದಾರೆ. ಸದ್ಯ ಕಾಡಂಚಿನ ಹಾಡಿಗಳಲ್ಲಿರುವ ಮಕ್ಕಳಿಗೆ ಚಿತ್ರಕಲೆಯಲ್ಲಿ ಅಭಿರುಚಿ ಹೆಚ್ಚಿಸಿ ಅವರ ಜೊತೆಯಲ್ಲಿಯೇ ಇದ್ದು ತಾವೂ ಬೆಳೆದು ಆ ಮಕ್ಕಳನ್ನೂ ಚಿತ್ರಕಲೆಯಲ್ಲಿ ಬೆಳೆಸುತ್ತಿದ್ದಾರೆ.

– ಪರ್ವತಗೌಡ




Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

